


ಆ ನಂ ದ ವ ನ

# ಗ ಜ ಪ ತಿ

# ಸ ಪ್ತಾಂ ಗ

# ಹ ರ ಣ



ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

ಸಿರಿಗನ್ನಡಂ ಗೆಲ್ಗೆ

# ಗಜಪತಿ ಸಪ್ತಾಂಗ ಹರಣ

ಅಥವಾ

## ಕನ್ನಡಿಗರ ಕಲಿಂಗ ವಿಜಯ.




ಲೇಖಕ

**ಮುರಲಿ**



ಪ್ರಕಾಶಕ

**ಭಿ. ಪ. ಕಾಳೆ,**

ಶ್ರೀ ಶೇಷಾಚಲ ಗ್ರಂಥಮಾಲಾ,

ಆನಂದವನ.

ಜನವರಿ 1938

ರಫ್ ಬೆಲೆ ೧-೨-೦ ರೂ.

ಗ್ಲೇಜ ಬೆಲೆ ೧-೪-೦ ರೂ.

# ಅರಿಕೆ —



ಐತಿಹಾಸಿಕ ಸಾಹಿತ್ಯದಲ್ಲಿ ನನ್ನದು ಇದು ಆರಂಭವಡಿ. ಆದುದರಿಂದ ಓದುಗರಪೇಕ್ಷಿಸುವಷ್ಟು ಒಳಿತಾಗಿರಲಿಕ್ಕಿಲ್ಲವೆಂದು ನನ್ನ ಕಲ್ಪನೆ. ಆದರೂ ಸುಹೃದಯರಾದ ಓದುಗರು ಕೊರತೆಗಳನ್ನೆಲ್ಲ ಮರೆತು ಉತ್ತೇಜಿಸುವರೆಂದು ನನ್ನ ಭಾವನೆ.

ಬರೆಯುವವನಿಗೆ ಐತಿಹಾಸಿಕದಷ್ಟು ಗಡಚು ವಿಷಯ ಬೇರೊಂದಿಲ್ಲವೆಂದು ಹೇಳಿದರೆ ಅನೇಕರು ನಂಬಲಿಕ್ಕಿಲ್ಲ. ಒಂದು ಸಮಯ ಬೆಳಗು ಹಾಕಿ, ತಮ್ಮ ಮೇಲ್ತರಗತಿಯ ಕಾರ್ಯಗಳಿಂದ ಭವಿಷ್ಯವನ್ನೆಲ್ಲ ಬೆಳಗುತ್ತಲಿರುವ ಆ ಆ ಮಹಾವ್ಯಕ್ತಿಗಳ ಮೌಲ್ಯ-ಗಾಂಭೀರ್ಯಗಳಿಗೆ ಕೊಂಚವಾದರೂ ಕಲಂಕವುಂಟಾಗದಂತೆ ದಕ್ಷತೆ ವಹಿಸಬೇಕಾಗುವುದು. ಆ ಆ ಸಂಗತಿಗಳು, ಸನ್ನಿವೇಶಗಳು ವಿಪರ್ಯಸ್ತವಾಗದಂತೆ ಜಾಗರೂಕತೆ ವಹಿಸಬೇಕಾಗುವುದು. ಈ ವಿಷಯದಲ್ಲಿ ನಸುವಾದರೂ ಅಲಕ್ಷ್ಯವುಂಟಾದರೆ ಆ ವ್ಯಕ್ತಿಗಳನ್ನು ದೂಷಿಸಿದ ಹೊಣೆಗೆ ಪಾತ್ರನಾಗುವುದಲ್ಲದೆ ಓದುಗರನ್ನು ಮೋಸಗೊಳಿಸಿದ ಮಹಾ ಪಾತಕಕ್ಕೆ ಗುರಿಯಾಗಬೇಕಾಗುವುದು.

ಒಂದು ವೇಳೆ ಈ ಎಲ್ಲ ಸಂಗತಿಗಳನ್ನು ಮರೆತರೂ ಒಂದು ಅತಿ ಪ್ರಾಮುಖ್ಯವಾದ ವಿಷಯವೆಂದರೆ, ನಮ್ಮ ಪ್ರಿಯ ಮಾತೃಭೂಮಿಯ ಬಂಧುಗಳ ಸಂಬಂಧ ಐತಿಹಾಸಿಕ ಸಂಗತಿಗಳನ್ನಾದರೂ ಇರಬಹುದು. ಅಂದು ಅನೇಕಾನೇಕ ಸನ್ನಿವೇಶಗಳು ನಡೆದು ಹೋಗಿರಬಹುದು, ಆದರೆ ಇಂದು ನಾವವುಗಳನ್ನೆಲ್ಲ ಮರೆಯಲೇಬೇಕಾಗಿದೆ. ಅಂದು ಅವರು ನಮಗೆ ಪರಕೀಯರಾಗಿದ್ದರು. ಭಾರತದ ಹೊರಗಿನವರಾಗಿದ್ದರು. ಆರ್ಯಾವರ್ತದ ದಾಳಿಗಾರರು ಅವರಾಗಿದ್ದರು. ಭಾರತದ ಅಗಣಿತ ಸಂಪತ್ತು ಸೆಳೆದೊಯ್ಯುವುದೇ ಅವರಲ್ಲನೇಕರ ಮುಖ್ಯೋದ್ದೇಶವಾಗಿದ್ದಿತು. ತಮ್ಮ ಧ್ಯೇಯೋದ್ದೇಶಗಳಿಗನುಸಾರವಾಗಿ ಅವರೇನಾದರೂ ಕಾರ್ಯಗಳನ್ನು ಕೈಕೊಂಡಿರಬಹುದು, ಆದರೆ ಇಂದು ಪರಿಸ್ಥಿತಿ ಮಾರ್ಪಟ್ಟಿದೆ. ಇಂದು ಹಿಂದುಸ್ಥಾನವು ಹಿಂದೀಯರದ್ದೇ ಇದೆ.

ಹಿಂದೀಯರಿರುವರು, ಮಹಮ್ಮದೀಯರಿರುವರು, ಕ್ರಿಶ್ಚಿಯನ್ನರಿರುವರು, ಪಾರ್ಶಿಗಳಿರುವರು. ಈ ಎಲ್ಲರೂ ಭಾರತ ಪ್ರಜೆಗಳೇ. ಭಾರತದಲ್ಲ ನೆಲಿಸಿ ಸಿಲ್ಲುವವರೇ, ಭಾರತದನ್ನವುಣ್ಣುವವರೇ ಇಂದು ಈ ಎಲ್ಲರಿಗೂ ಭಾರತದ ಹೊರತು ನ್ಯಾಯವಾಗಿ ಯಾವ ಸ್ಥಳವೂ ಇಲ್ಲ. ಬಲುಮೆಯಿಂದಾಕ್ರಮಿಸಿ ದರೆ, ಆ ಮಾತು ಬೇರೆ. ಇಂದು ನಾವೆಲ್ಲರೂ ಒಬ್ಬಳೇ ಭಾರತಮಾತೆಯ ಪುತ್ರರು ಓರ್ವ ತಾಯಿಯೆದೆವಾಲಿನಿಂದ ಪೋಷಣೆ ಪಡೆಯುವವರು

ಅಂತೆಯೇ ಹಿಂದುಸ್ಥಾನವು ಹಿಂದೀಯರದನ್ನುವ ಕಾಲ ಹಿಂದಾಯಿ ತೆಂದರೆ, ಅನೇಕರು ನನ್ನನ್ನು ನಿಂದಿಸಬಹುದು; ಆದರೆ ಹಿಂದುಸ್ಥಾನವು ನಮ್ಮ ಸ್ವತ್ತೇ ಎಂದು ನಿರ್ಧಾರಪೂರ್ವಕ ಹೇಳುವದೆಂತು? ಒಂದು ಸಲ ಅತಿ ಪ್ರಾಚೀನಕಾಲದಲ್ಲಿಯೇ ಆಗಲಿ, ಪರದೇಶದಿಂದ ಬಂದು ವಾಸಿಸಿದ ಆರ್ಯ ವಂಶದವರು ನಾವಲ್ಲವೆ? ಅಂದಿನ ಮೂಲ ನಿವಾಸಿಗಳು ನಮಗೆ ನೀವು ಪರ ಕೀಯರು' ಎಂದಂದರೆ, ಅವರಿಗೆ ಉತ್ತರವೇನು?

ಇಷ್ಟಲ್ಲ ಪುರಾಣವೇಕೆಂದರೆ, ಮುಂದೆ ಬೇಗನೆ ನಡೆಯಲಿರುವ ಸುಮ ಧುರ ಹಿಂದೂ ಮುಸಲ್ಮಾನರ ಒಕ್ಕಟ್ಟಿನಲ್ಲಿ ನಾನೊಂದು ಕಿರು ಬೀಜ ನೆಟ್ಟ ದೋಷಕ್ಕೆ ಪಾತ್ರನಾಗಕೂಡದೆಂದೇ ನನ್ನ ಹಾರೈಕೆ ನಾವು ಇನ್ನು ಬೇಗನೆ ನಮ್ಮ ನಮ್ಮ ಧಾರ್ಮಿಕ ಭೇದಗಳನ್ನು ಮರೆತು, ಸಾಮಾಜಿಕವಾಗಿಯಾ ದರೂ ಮಿತ್ರರಂತೆ ಕೈಯಲ್ಲಿ ಕೈಇಟ್ಟು ನಡೆಯುವ ಸಮಯ ಪ್ರಾಪ್ತವಾಗಲಿದೆ ಯೆಂಬದನ್ನು ಮರೆಯಲಾಗದು. ಅಂತಹ ಅಮೃತಮಯ ಐಕ್ಯವನ್ನೇ ನಾವೆಲ್ಲರೂ ಆಶಿಸುತ್ತಲಿರಲು, ಹಿಂದಿನ ವಿಷಾದಕರ ಘಟನೆಗಳನ್ನು ಮತ್ತೆ ಮತ್ತೆ ನೆನೆದು, ನಮ್ಮ ಬಂಧುಗಳ ಮನನೋಯಿಸುವುದು ಅನುಚಿತವೆಂದು ನನ್ನ ಭಾವನೆ ಸುಪ್ರಸಿದ್ಧ ನಾಟಕಕಾರ, ನಾಟ್ಯಾಲಂಕಾರ, ಅಭಿನಯ ಕೇಸರಿ ಶ್ರೀಮಾನ್ ಗರೂಡ ಸದಾಶಿವರಾಯರು ಕರ್ನಾಟಕ ಕಾಲೇಜಿನ ಉಪನ್ಯಾಸ ವೊಂದರಲ್ಲಿ ಇದೇ ಅಭಿಪ್ರಾಯ ವ್ಯಕ್ತಪಡಿಸಿದರು ಐತಿಹಾಸಿಕ ನಾಟಕಗಳ ವಿಷಯವಾಗಿ ಭಾಷಣ ಮಾಡುತ್ತಲಿರುವ ಸಮಯದಲ್ಲಿ, ನಾವು ಒಳ್ಳೇ ಮಿತ್ರ ರಂತೆ ಕೈಯಲ್ಲಿ ಕೈಹಾಕಿಕೊಂಡು ತಿರುಗಾಡುವ ಸಮಯ ಬಂದಿರಲು, ಸುಮ್ಮನೆ ಹಿಂದಿನ ದುಃಖಕರ ಸಂಗತಿಗಳ ಸ್ಮರಣೆಯಿಂದ ಮುಂದಾಗಲಿರುವ ಅಮೃತಮಯ ಐಕ್ಯಕ್ಕೆ ಕಲ್ಲು ಹಾಕುವುದು ಅಯೋಗ್ಯವು ..ಮುಂತಾಗಿ ಹೇಳಿದ್ದರು ನನ್ನ ಈ ವಿಚಾರಗಳಿಗೆ ಅವರಾ ಅಭಿಪ್ರಾಯವೇ ತಳಹದಿ ಯಾಗಿದೆಯೆಂದರೂ ಸಲ್ಲುವುದು

ಆದುದರಿಂದಲೆ ನಾನು ಮೊದಲಿನಿಂದ ಐತಿಹಾಸಿಕ ಸಾಹಿತ್ಯದ ವಿಷ ಯಕವಾಗಿ ಔದಾಸೀನ್ಯ ತಳೆದಿದ್ದೆನು, ಆದರೆ ಅಕಸ್ಮಾತ್ ಅಂತಹ ಸನ್ನಿವೇಶ

ಪ್ಪೊಂದು ದೊರೆತಿತು. ಇದರಲ್ಲಿ ನನ್ನ ಮಹಮ್ಮದೀಯ ಬಂಧುಗಳ ಮನ ನೋಯುವಂತಹ ವಿಷಯ ಬಾರದಂತೆ ಸಾಕಷ್ಟು ದಕ್ಷತೆ ವಹಿಸಿರುವೆನು. ಇನ್ನೂ ಬಂದಿದ್ದರೆ, ಅದಕ್ಕೆ ಓದುಗರು ಕ್ಷಮಿಸಬೇಕು.

ಸದ್ಯದ ಕತೆಯಲ್ಲಿ ಪ್ರಾಮುಖ್ಯವಾದ ಕೆಲವು ಸನ್ನಿವೇಶಗಳನ್ನು ಬಿಟ್ಟರೆ, ಉಳಿದುದೆಲ್ಲವೂ ಊಹೆಯೊಳಗಿನದು. ಕೆಲವು ಇತಿಹಾಸಿನಲ್ಲಿನ ಮುಖ್ಯ ವ್ಯಕ್ತಿಗಳು ರಾಯ, ಅಪ್ಪಾಜಿ, ಗಜಪತಿ ಮೂರೂ ಮುಖ್ಯ ಪಾತ್ರಗಳು. ರಾಮಲಿಂಗ ಎಂಬದು ಇತಿಹಾಸಿನಲ್ಲಿ ದೊರೆಯುವ ಒಂದು ಹೆಸರು. ನಾನಾತನೇ ಸೇನಾಪತಿಯೆಂದು ಕರೆದಿರುವೆನು. ವೀರನರಪತಿ ಶ್ರೀ ಕೃಷ್ಣ ದೇವರಾಯನೆಂದರೆ, ಕರ್ನಾಟಕ ಮಾತೆಯ ಮುಕುಟ ಮಣಿಯು, ಎಂದು ಇತಿಹಾಸಕಾರರೇ ಸಮ್ಮತಿಸಿರುವರು; ಮತ್ತು ಶ್ರೀ ಕೃಷ್ಣದೇವರಾಯನೆಂದರೆ, ಸದ್ಗುಣ ಸಮೂಹವು ಎಂದು ಪರಕೀಯರೂ ಕೂಡ ಮುಕ್ತ ಕಂಠದಿಂದ ಹೊಗಳಿರುತ್ತಾರೆ. ನಾನಾದರೂ ಆತನ ಆ ಅದ್ವಿತೀಯ ಚರಿತೆಗೆ ಭಂಗ ಬಾರದಂತೆ ಶಕ್ಯವಿದ್ದಮಟ್ಟಿಗೆ ಯತ್ನಿಸಿರುವೆನು. ಉಳಿದ ಪಾತ್ರಗಳನ್ನಾದರೂ ಆ ಆ ಯೋಗ್ಯತೆಗನುಸರಿಸಿ ರಚಿಸಲೆತ್ನಿಸಿರುವೆನು. ಜಗನ್ಮೋಹಿನಿಯ ಬಗ್ಗೆ ತಕ್ಕಮಟ್ಟಿಗೆ ಮಾರೆತಸ್ಟರಲ್ಲಿಯೇ ಬರೆಯಲೆತ್ನಿಸಿರುವೆನು. ಇದರಿಂದ ಕರ್ನಾಟಕ ಸಾಮ್ರಾಜ್ಯದಿತಿಹಾಸನಲ್ಲಿನ ಒಂದು ಉಜ್ವಲ ಪ್ರಸಂಗ ಓದುಗರ ಸ್ಮರಣೆಯ ಮುಂಬಂದು ನಿಲ್ಲುವಂತೆ ಯತ್ನಿಸಿರುವೆನು.

ಕನ್ನಡದಲ್ಲಿ ಐತಿಹಾಸಿಕ ಸಾಹಿತ್ಯ ಬಹಳ ಸ್ವಲ್ಪೇ ಇದೆ; ಅಂದರೆ ಕರ್ನಾಟಕಕ್ಕೆ ಸಂಬಂಧಿಸಿದ ಸಾಹಿತ್ಯವೆಂದು ತಿಳಿಯಬೇಕಲ್ಲದೆ, ಉಳಿದ ಸಾಹಿತ್ಯವೆಂದಲ್ಲ. ರಜಪೂತರ, ಮಹಮ್ಮದೀಯರ, ಮರಾಟರ, ಬಂಗಾಲಿಗಳ ಐತಿಹಾಸಿಕ ಸಾಹಿತ್ಯ ಹೇರಳವೇ ಆಗಿದೆ; ಅಥವಾ ಅದರಿಂದ ತುಂಬಿ ಹೋಗಿ ಕನ್ನಡ ದೇಶಕ್ಕೆ ಸಂಬಂಧಿಸಿದ ಪಲಕೆಲವು ಕೃತಿಗಳೂ ಕಣ್ಣಿಗೆ ಕಾಣದಾಗಿವೆಯೆಂದರೂ ಸರಿಯಾಗಬಹುದು. ಆದೇ ನಮ್ಮ ನೆರೆಯವರಾದ ಮಹಾರಾಷ್ಟ್ರೀಯರನ್ನು ನೋಡಿದರೆ, ಎರಡು-ಎರಡೂವರ ಶತಮಾನದಷ್ಟು ಇತಿಹಾಸಿನ ಬಗ್ಗೆ ಅದೆಷ್ಟು ಕತೆಗಳು! ಅದೆಷ್ಟು ಕಾದಂಬರಿಗಳು! ಅದೆಷ್ಟು ಕವಿತೆಗಳು! ಅದೆಷ್ಟು ನಾಟಕಗಳು. ಕರ್ನಾಟ ಸಾಮ್ರಾಜ್ಯವು ಸಾವಿರಕ್ಕಿಂತ ಮೇಲ್ಪಟ್ಟು ವರುಷಗಳ ವರೆಗೆ ಬಾಳಿದರೂ, ಅತ್ಯಲ್ಪ ಸಾಹಿತ್ಯವಿದೆ. ಇದಕ್ಕೆ ಕಾರಣಗಳಾದರೂ ಇಲ್ಲದಿಲ್ಲ. ಒಂದು ಸಾಮಗ್ರಿಯ ಅಭಾವ. ಶಿಲಾಲಿಪಿಗಳೂ ತಾಮ್ರಪಟಗಳೂ ಹೇರಳವಾಗಿವೆ; ಆದರೆ ಸಾಮಾನ್ಯ ಲೇಖಕರು ಅವುಗಳನ್ನು ಪರಿಶೋಧಿಸಿ, ಅವುಗಳ ಮೇಲೆ ಸಾಹಿತ್ಯಮಂದಿರ ನಿಲಿಸು

ವದು ಶಕ್ಯವಿಲ್ಲ ಇನ್ನೊಂದೆಂದರೆ, ಉತ್ಸಾಹದ ಅಭಾವ ನಮಗೆ ನಮ್ಮದೇ ಆದ ಒಂದು ಇತಿಹಾಸಿದ್ದಿತು, ನಮ್ಮವರು ಇಷ್ಟು ಮೇಲ್ಮೆಯಿಂದ ಭಾರತ ದಲ್ಲೆಲ್ಲ ಮೆರೆದರು ಎಂಬ ಸಂಗತಿಯು ಸ್ಮರಣೆಯೇ ಇಲ್ಲ.

ಈ ಎರಡೂ ಕೊರತೆಗಳನ್ನು ಮೊನ್ನೆ ತಾನೆ ನಡೆದ ವೈಭವಪೂರ್ಣ ವಾದ ವಿಜಯನಗರ ಸಾಮ್ರಾಜ್ಯದ ಷಟ್‌ಶತಸಾಂವತ್ಸರಿಕ ಮಹೋತ್ಸವವು ತಕ್ಕಮಟ್ಟಿಗೆ ನಿವಾರಿಸಿದೆ ಎಂಬದು ಆನಂದದ ಸಂಗತಿಯು ಅಂತೆಯೇ ಅಂದಿನಿಂದ ವಿಜಯನಗರಕ್ಕೆ ಸಂಬಂಧಿಸಿದ ಸಾಹಿತ್ಯ ಹೆಚ್ಚಾಗಿ ಬೆಳೆಯುತ್ತ ಲಿದೆ. ಇನ್ನೂ ಹೆಚ್ಚಾಗಬೇಕು; ಬಹಳವಾಗಿ ಬೆಳೆಯಬೇಕೆಂಬುದೇನೂ ಸಟೆಯಲ್ಲ.

ನಾನಾದರೂ ನನ್ನ ಅಲ್ಪ ಪ್ರಯತ್ನದಿಂದ ಈ ಕೊರತೆಯನ್ನು ಅತ್ಯಲ್ಪ ವಾದರೂ ನಿವಾರಿಸಬೇಕೆಂದು ಈ ಪ್ರಯತ್ನ ಕೈಕೊಂಡಿರುವೆನು. ನನಗೆ ಈ ಕೆಲಸಕ್ಕೆ ಉತ್ತೇಜನವಿತ್ತವರು ಕನ್ನಡದಲ್ಲಿನ ನುರಿತ ಲೇಖಕರೂ, ಅಖಂಡವಾಗಿ ಮೂವತ್ತು ವರ್ಷಗಳಷ್ಟು ದೀರ್ಘಕಾಲ 'ಶ್ರೀ ಶೇಷಾಚಲ ಸಂಸ್ಥೆ'ಯಲ್ಲಿ ದೇಶ, ಧರ್ಮ, ಭಾಷೆಗಳ ಸೇವೆಯನ್ನು ಅವ್ಯಾಹತವಾಗಿ ಮಾಡುತ್ತಲಿರುವ ಶ್ರೀಮಾನ್ ಭಿ. ಪ ಕಾಳೆಯವರೇ ಎಂದು ನಾನು ಅಭಿ ಮಾನಪೂರ್ವಕವಾಗಿ ಹೇಳುತ್ತೇನೆ. ಅವರ ಸಹಾಯವಿಲ್ಲದಿದ್ದರೆ ನಾನಿಷ್ಟು ಬೇಗನೆ ಸಾಹಿತ್ಯ ಕ್ಷೇತ್ರಕ್ಕೆ ಕಾಲಿನ್ನೇ ಇಡುತ್ತಲಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ ನನಗೆ ಇನ್ನೂ ಹೆಚ್ಚಾಗಿ ಉತ್ತೇಜನ ನೀಡುವ ಬಗ್ಗೆ ಶ್ರೀಮಾನ್ ಭಿ ಪ. ಕಾಳೆಯವರಾಗಲಿ ಇಲ್ಲಿನ ಸದ್ಬೋಧ ಚಂದ್ರಿಕೆಯ ಸಂಪಾದಕರಾದ ಶ್ರೀಮಾನ್ ವಾಯ್. ಜಿ. ಕುಲಕರ್ಣಿಯವರಾಗಲಿ ಅಭ ವಚನವಿತ್ತಿರುವರು ಅವರಾ ನೆರವಿನಿಂದಲೇ ನಾನು ಇನ್ನೂ ಹೆಚ್ಚಾಗಿ ಕಾರ್ಯ ಕೈಗೂಡಿಸುವ ಭರವಸೆಯಿದೆ ಆದುದರಿಂದ ಔದಾರ್ಯದಲ್ಲಿ ಹೆಸರು ಪಡೆದ ಕನ್ನಡ ಜನರು ಶ್ರೀ ಶೇಷಾಚಲ ಸಂಸ್ಥೆಯವರಿಗೆ ಕೊಡಗೈಯಿಂದ ಸಹಾಯ ಮಾಡಿ ಸಾಹಿತ್ಯಸೇವಕರಿಗೆ ಉತ್ತೇಜಿಸಬೇಕೆಂಬದೇ ನನ್ನ ಬಿನ್ನಹ.

ನನ್ನ ಹೇಳಿಕೆಗೆ ಮನ್ನಣೆಯಿತ್ತು ಚಿತ್ರಗಳನ್ನು ಸಕಾಲಕ್ಕೆ, ಸುಂದರ ವಾಗಿ ಸಿದ್ಧಮಾಡಿಕೊಟ್ಟುದಕ್ಕಾಗಿಯೂ ಪುಸ್ತಕ ಬರೆಯುವಾಗ್ಗೆ ಅಲ್ಲಲ್ಲಿ ಉಪಯುಕ್ತ ಸೂಚನೆಗಳನ್ನಿತ್ತುದಕ್ಕಾಗಿಯೂ ಮಿತ್ರವರ್ಯ ಶ್ರೀಮಾನ್ ಕೆ. ಎಸ್ ಬೆಳಮಕರ ಈತನಿಗೆ ನಾನು ಆಭಾರಿಯಾಗಿರುವೆನು

**ಮುರಲಿ**

## ಗೋಪತಿ ಸರ್ವಾಂಗ ಹರಣ



ಸೇನಾಪತಿಯು ಮೊದಲಿನ ಮೊಳೆಗಳ ಮೇಲೆ ನಿಂತು, ಇನ್ನೊಂದನ್ನು ಬೆನ್ನಿಗೆ ಆಸರವಾಗಿಟ್ಟುಕೊಂಡು, ಮೇಲೆ ಮತ್ತೊಂದು ಮೊಳೆಯನ್ನು ಬಡಿಯ ಹತ್ತಿದನು. (ಪುಟ ೯)



ಸೇನಾಪತಿಯು ಅಲ್ಲಿಯೇ ಇದ್ದ ಒಂದು ಬಂಡೆಗಲ್ಲಿನ ಮೇಲೆ ಕುಳಿತುಕೊಂಡನು. (ಪುಟ ೬೩)

# ಗಜಪತಿ ಸಪ್ತಾಂಗ ಹರಣ.

(ಕನ್ನಡಿಗರ ಕಲಿಂಗ ವಿಜಯ)

## ೧ ಯಶೋದುಂದುಭಿ.

ಕಣ್ಣೀರಿನ ಕಾಲುವೆ, ನೆತ್ತರಿನ ಮಡು, ರಕ್ತದ ರೊಜ್ಜು, ನರರುಂಡಗಳ ಹಾರಾಟ, ದಿಂಡಗಳ ಉರುಳಾಟ, ಭೇರಿ, ಕಹಳೆ, ನಗಾರಿಗಳ ನಿನಾದ, ಖಡ್ಗ-ಗಳ ಖಣಖಣಾಟ, ವೀರರ ಬೊಬ್ಬೆ, ಗಾಯಾಳುಗಳ ಕಿರಿಚಾಟ—ರಣ ಕ್ಷೇತ್ರದ ನೋಟವು ಅದೆಷ್ಟು ಭೀಕರ! ಎಂತು ಭಯಾನಕ!! ಎನಿತು ರೌದ್ರ!!! ದೇಶಪ್ರೇಮ, ಸ್ವಾತಂತ್ರ್ಯಪ್ರೇಮಗಳಿಗೆಂದು ಬೊಬ್ಬಿರಿದು ಕೂಗುವ ವೀರ ರೊಂದೆಡೆಯಾದರೆ, ವೈರಿಯಿರಿತದಿಂದ ಭೂಮಿಗೊರಗಿ ತಾಳಲಾರದ ನೋವಿಗೆ ಆರ್ತಸ್ವರದಿಂದ ಕೂಗುವ ಗಾಯಾಳುಗಳಿನ್ನೊಂದೆಡೆ. 'ಹೊಡೆಯುವೆವು ಇಲ್ಲವೆ ಮಡಿಯುವೆವು' ಎಂಬ ಅವಿಚಲ ನಿಶ್ಚಯದಿಂದ ಎದೆಗೊಟ್ಟು ನಿಂತ ಕಟ್ಟಾಳುಗಳೊಂದೆಡೆಯಾದರೆ, ಸೋಲಿನ ಭೀತಿಯಿಂದ ಎದೆಗೆಟ್ಟು ಕಾಲ್ದೆಗೆ ಯುವ ಅಂಜುಗುಳಿಗಳೊಂದೆಡೆ. 'ಇದ್ದರೆ ರಾಜ್ಯ, ಸತ್ತರೆ ಸ್ವರ್ಗವೆ'ಂದು ಭೀತಿ ಯಿಲ್ಲದೆ ನಿಂತ ಧೀರರೊಂದೆಡೆಗಿದ್ದರೆ, ಜೀವನದಾಶೆ ಕೊನೆಗೂಳ್ಳದೆ ಅಧಿಕಾರಿ ಗಳ ಬಲುಮೆಗೆಂದು ನಿಂತ ಎದೆಗೇಡಿಗಳಿನ್ನೊಂದೆಡೆ. ಮೈಮೇಲೆ ಭಾನ ವಿಲ್ಲದೇ ಗೆಲುವಿನಾಶೆಯಿಂದ ವೈರಿಘಾತವೇ ಇತಿಕರ್ತವ್ಯವೆಂದು ನಿಂತ ವೀರರೇ ತುಂಬಿದ್ದರೂ, ಕಾಲು ಕಳೆದುಕೊಂಡ, ಕೈಮುರಿದ, ತಲೆಯೊಡೆದ, ಕಣ್ಣು ಕಳಚಿದ, ನೆತ್ತರು ಸುರಿಯುವ, ಖಂಡಕಿತ್ತಿದ ಗಾಯಾಳುಗಳಿಗೇನೂ ಕೊರತೆಯಿರಲಿಲ್ಲ. ಅದೆಷ್ಟು ಭೀಕರ! ಅಂತಹ ಭಯಾನಕ ನೋಟ!! ನೋಡುವದಿರಲಿ, ಒಂದುಸಲ ಊಹಿಸಿದರ ನಾಕು, ಮೈಗೂದಲು ನಿವಿರಿ ನಿಲ್ಲು ವವು; ಆದರೆ ಪ್ರತ್ಯಕ್ಷವಾಗಿ ಯುದ್ಧದಲ್ಲಿ ಭಾಗ ವಹಿಸಿದ ಆ ಬಿಲ್ಲಾಳುಗಳಿ ಗಾಗಲಿ, ಖಡ್ಗಪಾಣಿಗಳಿಗಾಗಲಿ ಹೃದಯವಿರಲಿಕ್ಕಿಲ್ಲವೆ? ಕರುಣೆ ಅವರನ್ನು

ಪೂರ್ಣವಾಗಿ ತೊರೆದಿರಬಹುದೆ? ಶಾಂತಿ, ದಯೆ, ದಾಕ್ಷಿಣ್ಯಗಳಿಗೆ ಅತ್ಯಲ್ಪವಾದ ಅವಕಾಶವಿರಲಿಕ್ಕಿಲ್ಲವೆ? ಯುದ್ಧವು ಅವರಿಗೆ ಆಟದಂತಿದೆ. ರಣೋದ್ಯಾನದಲ್ಲಿ, ರಣವಾದ್ಯಗಳ ಸಂಗೀತದೊಡನೆ, ಗೆಲುವಿಗಾಗಿ ಆತ್ಮಾರ್ಪಣೆಯ ಅಮರಗೀತೆ ಪಾಡುತ್ತ ಅವರಾಡುವ ಆಟವೇ ಆಟ. 'ಚಿಲ್ಲೆ'ಂದು ಚಿಮ್ಮುವ ರಕ್ತದೋಕುಳಿಯಾಟ, ರಕ್ತಸಿಂಚಿತ ನರರುಂಡಗಳ ಚಂಡಾಟ, ಖಡ್ಗ-ಖಡ್ಗಗಳ ಕೋಲಾಟ, ಬಿಲ್ಲು ಬಾಣಗಳ ಪೂಗಣೆಯಾಟ, ರಣೋನ್ಮಾದದಿಂದ ಬೊಬ್ಬಿರಿವ ನಗೆಯಾಟ—ಭಾಪು! ಭಾಪು!! ವೀರವರರೇ ಭಾಪು!!!

ರಣಕ್ಷೇತ್ರವೆಂದರೆ ಭಯಂಕರ ನರಹತ್ಯೆಯ ಯಜ್ಞಕುಂಡವೆ. ಪ್ರತಿಯೊಬ್ಬ ವೀರಸೈನಿಕನೂ ತನ್ನ ಜೀವನವು ಅಸ್ಥಿರವೆಂದೇ ಬಗೆದು, ತಾನು ಜೀವಿಸಿರುವ ಕಾಲ ಕೇವಲ ಕೆಲ ನಿಮಿಷಗಳು ಮಾತ್ರವೇ ಎಂದು ನಂಬಿಯೇ ಯುದ್ಧಕ್ಕೆ ಪ್ರವೃತ್ತನಾಗಿರುತ್ತಾನೆ; ಆದರೇನು ಅವನದಕ್ಕೆ ಅಳುಕುತ್ತಾನೆಯೆ? ಮರಣವು ಮಾನವನಿಗೆ ತಪ್ಪಿದುದಲ್ಲವೆಂಬದನ್ನವನು ಮನದಟ್ಟು ಮಾಡಿಕೊಂಡೇ ಅಲ್ಲಿ ನಿಂತಿರುತ್ತಾನೆ. ಯುದ್ಧರಂಗದಲ್ಲಿ ಮಡಿದರೆ ವೀರಸ್ವರ್ಗವೆಂಬ ಪವಿತ್ರಭಾವನೆಯೂ, ಮಾತೃಭೂಮಿಗಾಗಿಯೆಂಬ ಹೆಮ್ಮೆಯೂ ಅದಕ್ಕೆ ಇನ್ನೂ ಕಾರಣವಾಗಿರುತ್ತವೆ ತನ್ನ ಜೀವನದಲ್ಲುಳಿದ ಅಲ್ಪಾವಕಾಶದಲ್ಲಾದರೂ ತನ್ನ ಮಾತೃಭೂಮಿ ಸೇವೆ ತನ್ನ ಜನ್ಮ ಸಾರ್ಥಕತೆ ಮಾಡಿಕೊಳ್ಳಲು ವೈರಿಘಾತವನ್ನು ತನ್ನ ಶಕ್ತ್ಯಾನುಸಾರ ಮಾಡಲೆತ್ನಿಸುತ್ತಾನೆ. ಈ ಮೂಲಕವೇ ಯುದ್ಧವೆಂದರೆ, ಒಬ್ಬರೊಬ್ಬರ ನೆತ್ತರು ಹೀರುವದೆಂಬ ತ್ವೇಷ ನೆಲೆಗೊಂಡಿರುತ್ತದೆ.

ಇಂತಹ ಭೀಕರ ಕದನವು ಆ ಒಂದು ದಿನ ನಡುಹಗಲಲ್ಲಿ ಸಿಂಹಾಚಲದ ಕೋಟೆಯ ಬಳಿಯಲ್ಲಿ ನಡೆದಿದ್ದಿತು.

ಇರ್ಕಡೆಯಲ್ಲಿಯೂ ವೀರ ಯೋಧರಿದ್ದರು ಯುದ್ಧಕಲಾಕೋವಿದರಿದ್ದರು. ಮಾತೃಭೂಮಿಯೆಂಬ ತಮ್ಮ ತೀವ್ರವಾದ ಅಭಿಮಾನದಿಂದ ನಿಂತಿದ್ದರು. ಒಂದು ಅಲ್ಲಿಯ ಪಡೆ. ಇನ್ನೊಂದು ಆಗಂತುಕ ಪಡೆ. ಆಗಂತುಕರು 'ತಮ್ಮ ಸಾಮ್ರಾಜ್ಯ ಬೆಳೆಯಿಸಬೇಕು, ತಮ್ಮವರ ಶೌರ್ಯ-ವೀರ್ಯಾದಿ ಗುಣಗಳು ಜಗತ್ತಿನ ಪ್ರಶಂಸೆಗೆ ಪಾತ್ರವಾಗಬೇಕು. ತಮ್ಮ ಮಾತೃಭೂಮಿಯ ಕೀರ್ತಿಧ್ವಜ ಎಲ್ಲೆಡೆಯಲ್ಲೂ ಫಡಫಡಿಸಬೇಕು' ಎಂಬ ಬಲವಾದ ಬಯಕೆಯಿಂದ ತಮ್ಮ ನಾಡು ಬಿಟ್ಟು ಅಷ್ಟು ದೂರ ಹೊರಹೊರಟು ಬಂದಿದ್ದರು. ಅವರು ಕಿರೀ ಮೋರೆಯಿಂದ ಮರಳತಕ್ಕದಲ್ಲವೆಂಬ ದೃಢಮನಸ್ಸಿನಿಂದ ಕಾದುತ್ತಲಿದ್ದರು ತಮ್ಮ ಮಾತೃಭೂಮಿ ಪರಕೀಯರ ವಶಕ್ಕೆ ಹೋಗ

ಕೂಡದು, ತಮ್ಮ ಮಾತೆ ಪರತಂತ್ರಳಾಗಕೂಡದು, ತಮ್ಮಗಳಿಗೆ ಪರದಾಸ್ಯ ಬರ ಕೂಡದು ಎಂಬ ಪವಿತ್ರ ಭಾವನೆಯಿಂದ ಅಲ್ಲಿನವರು ಹೋರಾಡುತ್ತಲಿದ್ದರು.

ಎರಡೂ ಪಡೆಗಳಲ್ಲಿ ಭಯಂಕರ ಕದನವೆಸಗುತ್ತಲಿದ್ದಿತು. ಶರೀರ ಗಳಿಂದ ಬೆವರ್ಹನಿಗಳೂ ರಕ್ತ ಬಿಂದುಗಳೂ ಕೂಡಿಯೇ ಧಾರೆಗಟ್ಟಿ ಸುರಿ ಯುತ್ತಲಿದ್ದರೂ ಅತ್ತ ಅವರ ಚಿತ್ತವೇ ಇರಲಿಲ್ಲ. ಪ್ರತಿಕ್ಷಣಕ್ಕೂ ಮರಣ ವನ್ನು ಎದುರು ನೋಡುತ್ತಲಿದ್ದರು. ಅಷ್ಟರಲ್ಲಿ ಇನ್ನೊಬ್ಬನನ್ನಾದರೂ ಹೊಡೆ ಯಲೇಬೇಕೆಂಬ ಹವಣಿಕೆಯಿಂದ ಧಾವಿಸುತ್ತಲಿದ್ದರು. ವೈರಿಯಿರಿತದಿಂದ ಪಾರಾಗಿ ಅರಿಯನ್ನಿರಿಯುವದೇ ಆ ವೀರರ ಯತ್ನವಾಗಿದ್ದಿತು. ಅನೇ ಕರು ಖಡ್ಗಪ್ರಹಾರ ಮಾಡಲೆಂದು ಕೈ ಮೇಲಕ್ಕೆತ್ತುತ್ತಲೇ ಇನ್ನೊಂದು ಪ್ರಹಾರದಿಂದ ಆಕಾಶವೇ ಕಳಚಿ ಬೀಳುತ್ತಲಿದ್ದಿತು ಜೋಲಿ ಹೋಗಿ ನೆಲ ಕ್ಕುರುಳಿದ ಹಲವರು ಮೇಲಕ್ಕೇಳಬೇಕೆಂದು ಯತ್ನಿಸುವಷ್ಟರಲ್ಲಿಯೇ ಇನ್ನೊ ಬ್ಬನ ಭಾಲೆಗೆ ತುತ್ತಾಗುವರು. ತಮ್ಮ ಕೈಯಿಂದ ಪಾರಾದ ಒಬ್ಬನನ್ನು ಅರ ಸುತ್ತಲಿರುವಾಗಲೇ ಇನ್ನೊಬ್ಬನ ಕರವಾಳದಿರಿತಕ್ಕೆ ನೆಲಕ್ಕುರುಳುವರು!

ಕೆಲ ವೇಳೆ ಹೀಗೆ ಭೀಕರ ಕದನವಾಗುತ್ತಲೆ ಕೋಟೆಯ ಹೊರಭಾಗ ಕ್ಕಿದ್ದ ಆಗಂತುಕ ಪಡೆಯುವರು ಕೋಟೆಯ ಕಾವಲಿಗಿದ್ದ ಪಡೆಯನ್ನು ನಿಶ್ಶೇಷ ಮಾಡಿದರು ಮುಂದೆ ಭದ್ರವಾದ ದುರ್ಗವನ್ನು ವಶಪಡಿಸಿಕೊಳ್ಳುವ ಹಂಚಿಕೆಗೆ ತೊಡಗಿದರು. ಮೇಲೇರಲು ಕೊಂಚವಾದರೂ ಪಡುವಿಲ್ಲದ ಆರೇಳಾಳು ಎತ್ತರದ ಆ ದುರ್ಗವನ್ನು ವಶಮಾಡಿಕೊಳ್ಳುವ ಬಗೆ ಹೇಗೆ? ಬಲವುಳ್ಳ ದುರ್ಗದ್ವಾರವು ಭದ್ರವಾಗಿ ಮುಚ್ಚಲ್ಪಟ್ಟಿದೆ. ಸುತ್ತಲೂ ನೀರು ತುಂಬಿದ ಕಂದುಕವು ದುರ್ಗರಕ್ಷಣೆಯಲ್ಲಿ ತತ್ಪರವಾಗಿದೆ. ಇಷ್ಟು ದಕ್ಷತೆ ಯಲ್ಲಿಯೂ ಯಾರಾದರೂ ಸಾಹಸಿಗರು ಮೇಲೇರಲೆತ್ನಿಸಿದರೆ, ಅವರನ್ನು ಆ ಕೂಡಲೆ ಕೆಳಕ್ಕುರುಳಿಸಲು ಬಿಲ್ಲಾಳುಗಳು ಸಿದ್ಧರಾಗಿಯೇ ನಿಂತಿದ್ದರು.

ಇಷ್ಟು ಭದ್ರತೆಯಲ್ಲಿ ಕೋಟೆಯನ್ನು ವಶಪಡಿಸಿಕೊಳ್ಳುವುದೇ ಅಶಕ್ಯ ವಾಗಿದ್ದಿತು. ಆದರೇನು? ಆಗಂತುಕ ವೀರರು ಎದೆಗೆಟ್ಟರೇ? ಬಂದುದೇ ಕೋಟೆ ಕೈವಶ ಮಾಡಿಕೊಳ್ಳಲೆಂದು. ಕರೀಮೋರೆಯಿಂದ ಮುರುಳುವುದೆಂದೂ ಶಕ್ಯವಿರಲಿಲ್ಲ. ಯುಕ್ತಿಪ್ರಯುಕ್ತಿಗಳಿಂದ ಕೋಟೆ ಕೈವಶಮಾಡಿಕೊಳ್ಳಲೇ ಬೇಕೆಂದು ನಿರ್ಧರಿಸಿ, ಆ ದಿಶೆಯಲ್ಲಿ ಅವರು ಯತ್ನಿಸತೊಡಗಿದರು.

ಆಗುಂತಕ ಪಡೆಯಲ್ಲಿನ ಕೆಲವೀರರು ಕತ್ತಲೆಯಾಗುತ್ತಲೆ ಹೊರಟರು. ಸೂಕ್ಷ್ಮ ದೃಷ್ಟಿಯಿಂದ ಕೋಟೆಯ ಗೋಡೆಗಳನ್ನು ನಿರೀಕ್ಷಿಸತೊಡಗಿದರು. ಎಲ್ಲಿ ಹೋದರೂ, ಎಷ್ಟು ವಿಧವಾಗಿ ಶೋಧಿಸಿದರೂ ಅತ್ಯಲ್ಪವಾದರೂ ಅವ

ಕಾಶ ತೋರಲಿಲ್ಲ; ಆದರೂ ಅವರು ಎದೆಗುಂದದೆ ಮುಂದೆ ಹೊರಟರು. ಎಲ್ಲಾದರೊಂದೆಡೆ ಸಡವು ದೊರಕುವವೆಂಬ ವಿಶ್ವಾಸ ಅವರಲ್ಲಿದ್ದಿತು. ಏನಾದರೂ ಮಾಡಿ ಕೋಟೆಯನ್ನೇರಿಯೇ ತೀರಬೇಕೆಂದು ನಿರ್ಧರವನ್ನೇ ಮಾಡಿದ್ದರು. ಅದರಲ್ಲಿನ ಮುಖ್ಯಸ್ಥನಂತೂ ಒಡೆಯನ ಕಾರ್ಯಸಾಧನೆಯಾಗದೆ ಆತನಿಗೆ ಮುಖವನ್ನೇ ತೋರತಕ್ಕುದಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ಹೀಗೆ ಅವರು ದೃಢನಿರ್ಧರದಿಂದ ಹೊರಟಿರಲು, ಕೋಟೆಯ ಹಿಂಭಾಗಕ್ಕೆ ತಲುಪಿದರು. ಅಲ್ಲಿಯ ಕೋಟೆಯ ಭದ್ರತೆಯಂತೂ ಅಸದಳವಾಗಿದ್ದಿತು. ಸಪಾಟಾಗಿ ಎತ್ತರವಾಗಿದ್ದ ಆ ಕೋಟೆ, ಆಳವಾಗಿ ಹರಿಯುತ್ತಿದ್ದ ಕಂದುಕದ ನೀರು ಎಲ್ಲವೂ ಪೂರ್ಣ ನಿರಾಶೆಯನ್ನೇ ವ್ಯಕ್ತಪಡಿಸುತ್ತಲಿದ್ದವು. ಅಷ್ಟು ಭದ್ರತೆಯ ಮೂಲಕವಾಗಿಯೇ ಏನೋ ಅಲ್ಲಿ ಕಾವಲು ಅಷ್ಟು ಭದ್ರವಾಗಿರಲಿಲ್ಲ. ಈ ಸಾಹಸಿಗರು ಅಲ್ಲಿ ಬಂದು ನಿಂತು ಒಂದು ಸಲ ಚೆನ್ನಾಗಿ ನಿರೀಕ್ಷಿಸಿದರು. ತಮಗೇನಾದರೂ ಅವಕಾಶ ಸಿಕ್ಕಿದರೆ, ಅಲ್ಲಿಯೇ ಸಿಕ್ಕಬೇಕೆಂದೆನಿಸಿತು. ಒಡನೆಯೆ ಅವರ ಸಂಗಡ ಬಂದಿದ್ದ ಮುಂದಾಳು ತನ್ನ ಸಹಕಾರಿಯೊಬ್ಬನ ಬಳಿಯಲ್ಲಿದ್ದ ಉಕ್ಕಿನ ಮೊಳಗಳನ್ನು ತೆಗೆದುಕೊಂಡು ಕಂದುಕದಲ್ಲಿ ಈಸು ಬಿದ್ದನು ಕೂಡಲೆ ಅವನ ಸಂಗಡಿಗರೂ ಈಸುಬಿದ್ದರು. ಎಲ್ಲರೂ ಕೊಂಚವಾದರೂ ಸಪ್ಪಳಮಾಡದೆ ಕಂದುಕವನ್ನು ದಾಟಿ ಕೋಟೆಯ ಬುಡಕ್ಕೆ ತಲುಪಿದರು. ಒಡನೆಯೆ ಮೊಳೆಗಳಲ್ಲಿ ಒಂದನ್ನು ತೆಗೆದುಕೊಂಡು ಬಡಿದನು. ಅಲ್ಲಿಂದ ಅದರ ಮೇಲೆಯೇ ಇನ್ನೊಂದನ್ನು ಬಡಿದನು. ಮೊದಲಿನ ಮೊಳೆಯ ಮೇಲೆ ನಿಂತು ಇನ್ನೊಂದನ್ನು ಬೆನ್ನಿಗೆ ಆಸರವಾಗಿಟ್ಟುಕೊಂಡು ಮೇಲೆ ಮತ್ತೊಂದನ್ನು ಬಡಿದನು. ಹಾಗೆಯೇ ಕ್ರಮವಾಗಿ ಮೇಲೆ ಮೇಲೆ ಹೋಗಹತ್ತಿದನು. ಆ ಕೆಚ್ಚೆದೆಯ ವೀರನಿಗೆ ಬಿದ್ದೇನೆಂಬ ಭಯವೇ ಇರಲಿಲ್ಲ. ಸ್ವಾಮಿಕಾರ್ಯ ಸಾಧಿಸಬೇಕೆಂಬ ಯೋಚನೆಯಲ್ಲಿಯೇ ಮಗ್ನನಾಗಿದ್ದನು. ಯಾರೊಬ್ಬರ ಮುಖದಲ್ಲಿಯೂ ಮಾತಿಲ್ಲ. ಒಬ್ಬಿಬ್ಬರು ಆ ಮುಂದಾಳುವನ್ನನುಸರಿಸಿದರು. ಉಳಿದವರು ಕೆಳಗೆ ಸುಮ್ಮನೆ ನಿಂತುಕೊಂಡರು. ಆ ಕಡುಗಲಿಗಳು ತಮ್ಮ ಅಸಮ ಸಾಹಸದಿಂದಲೂ, ನಿರುಪಮ ಧೈರ್ಯದಿಂದಲೂ ಮೇಲೇರಿದರು. ಅವರು ಮೊದಲೇ ಊಹಿಸಿದ್ದಂತೆ ಅಲ್ಲಿ ಸೈನಿಕರೇ ಇರಲಿಲ್ಲ. ಒಡನೆಯೇ ಅವರು ತಮ್ಮ ಸಂಗಡ ತಂದಿದ್ದ ನೂಲೇಣಿಯನ್ನು ಭದ್ರವಾಗಿ ಕಟ್ಟಿ ಕೆಳಕ್ಕಿಳಿಬಿಟ್ಟರು. ಪೂರ್ವ ಸಂಕೇತದಂತೆ ನಾಲ್ಕಾರು ಜನ ತಮ್ಮ ಸಿಬಿರದತ್ತ ಹೋದರು. ಉಳಿದ ಐವತ್ತು-ಅರವತ್ತು ಜನ ನೂಲೇಣಿಯನ್ನೇರಿ ಮೇಲೆ ಹೋದರು. ಅಲ್ಲಿ ಅವರು ಹತ್ತು

ಹತ್ತು ಜನರ ಟೋಳಿಗಳನ್ನಾಗಿ ವಿಭಾಗಿಸಿ, ಹೇಗಾದರೂ ಹೋಗಿ ದುರ್ಗ ದ್ವಾರ ತೆರೆದು, ಕಂದುಕಕ್ಕೆ ಪ್ರೂಲು ಬಿಡಬೇಕೆಂದು ನಿರ್ಧರಿಸಿದರು. ಬೇರೆ ಬೇರೆ ಟೋಳಿಗಳಾಗಿ ವಿಭಾಗಿಸಿದ ಕಾರಣವಾದರೂ ಅದೇ. ಒಬ್ಬರಿಲ್ಲ ದಿದ್ದರೂ ಇನ್ನೊಬ್ಬರಾದರೂ ಅಲ್ಲಿಯವರೆಗೆ ತಲುಪಿ ಆ ಕಾರ್ಯ ಕೈಗೂಡಿಸಿಯೇ ಬಿಡಬೇಕೆಂದು ನಿರ್ಧರಿಸಿದರು. ಕೂಡಲೆ ಅವರು ಮೊದಲೇ ಯೋಚಿಸಿದ್ದಂತೆ 'ವೈರಿಗಳು' 'ವೈರಿಗಳು' ಎಂದು ಕೂಗುತ್ತ ಓಡತೊಡಗಿದರು.

ಜನರೆಲ್ಲರೂ ಗಾಢನಿದ್ರೆಯಲ್ಲಿ ಮಲಗಿದ್ದರು. ಅಲ್ಲಲ್ಲಿ ಕಾವಲುಗಾರರು ಎಚ್ಚರಾಗಿದ್ದರು. 'ಅವರು ವೈರಿಗಳು' ಎಂಬ ಕೂಗು ಕೇಳುತ್ತಲೇ ಸ್ವರ ಕೇಳ ಬರುವತ್ತ ಧಾವಿಸಿದರು, ಆದರೆ ಅಲ್ಲಿ ಏನೂ ತೋರಲಿಲ್ಲ. ಹಾಗೆಯೇ ಅವರು ಅತ್ತಿತ್ತ ಓಡುತ್ತಿರಲು, ಒಬ್ಬನು ನೂಲೇಣಿ ಕಟ್ಟಿದ ಸ್ಥಳಕ್ಕೆ ತಲುಪಿದನು. ಅವನು ಆ ನೂಲೇಣಿ ನೋಡುತ್ತಲೇ ಹೌಹಾರಿ ಹೋದನು. ಆ ಮಾರ್ಗವಾಗಿ ವೈರಿಗಳು ದುರ್ಗಪ್ರವೇಶ ಮಾಡಿದುದು ದಿಟವೆಂದು ನಂಬುಗೆಯಾಗಿ ಹೋಯಿತು. ಅವನು ಗಟ್ಟಿಯಾಗಿ 'ವೈರಿಗಳು ಬಂದಿರುವರು' ಎಂದು ಕೂಗುತ್ತ ಹೊರಟನು ಅನೇಕರು 'ಎಲ್ಲಿ?' 'ಎಲ್ಲಿ?' ಎಂದು ಕೇಳಹತ್ತಿದರು. ಅವನು ತಾನು ನೋಡಿದ ನೂಲೆಣಿಯನ್ನು ವಿವರಿಸಿದುದಲ್ಲದೆ, ಸಾವಿರಾರು ಅರಿಸೈನಿಕರು ಪ್ರವೇಶ ಮಾಡಿರುವರೆಂದು ಉಪ್ಪುಕಾರ ಹಚ್ಚಿ ಹೇಳಿದನು. ಈ ಸಂಗತಿಯಿಂದ ಜನರು ಹೌಹಾರಿ ಹೋದರು. ಆಗಂತುಕ ಪಡೆಯವರೂ ಕೂಗುತ್ತ ಹೊರಟರು ಅವರ ಹಿಂದಿನಿಂದ ಸ್ಥಳೀಯ ಸೈನಿಕರೂ ಕೂಗುತ್ತ ಹೊರಟರು ಹೀಗೆ ಕೋಟೆಯೆಲ್ಲ 'ವೈರಿಗಳು!' ಎಂಬ ಭೀಕರ ನಿನಾದದಲ್ಲಿ ಮುಳುಗಿ ಹೋಗಿದ್ದಿತು. ಕ್ಷಣಕ್ಷಣಕ್ಕೆ ಹೊಸ ಹೊಸ ಸಂಗತಿಗಳು ಕೇಳ ಬರಹತ್ತಿದವು. ದುರ್ಗವು ಶತ್ರುಗಳ ವಶವೇ ಆಯಿತೆಂದು ಅನೇಕರು ಹೇಳಿದರು ಮತ್ತೆ ಕೆಲವರು ಅರಸು ಕೂಡ ಪರಕೀಯರ ಕೈಯಲ್ಲಿ ಸಿಕ್ಕುಬಿದ್ದಿರುವನೆಂದು ಹೇಳಬಿಟ್ಟರು ಹೀಗೆ ಕೋಟೆಯಲ್ಲೆಲ್ಲ ಹಾಹಾಕಾರವೆದ್ದು ಹೋಯಿತು ವೈರಿಯಾರು? ತಮ್ಮವರಾರು? ಎನ್ನುವುದೇ ತಿಳಿಯದಾಯಿತು. ಅಲ್ಪಾವಕಾಶದಲ್ಲಿಯೇ ಹಲವು ಆಗಂತುಕ ಪಡೆಯವರು ದ್ವಾರರಕ್ಷಕರ ಬಳಿಗೆ ಹೋದರು.

ದ್ವಾರರಕ್ಷಕರಿಗೆ ದುರ್ಗದಲ್ಲಿ ನಡೆದ ಗೊಂದಲವು ಕೇಳಬರುತ್ತಲಿದ್ದಿತು; ಆದರೆ ನಿಜ ಸಂಗತಿ ತಿಳಿದಿರಲಿಲ್ಲ. ಸ್ಥಳಬಿಟ್ಟು ಕದಲುವಂತೆಯೂ ಇರಲಿಲ್ಲ. ಹೀಗೆ ಅವರು ಗೊಂದಲದಲ್ಲಿ ಬಿದ್ದಿರುವಾಗಲೇ, ಇವರು ಬರಲು, ಆತುರತೆಯಿಂದ ಗೊಂದಲದ ಕಾರಣವನ್ನು ವಿಚಾರಿಸಿದರು.

'ದುರ್ಗದಲ್ಲಿ ವೈರಿಗಳ ಪ್ರವೇಶವಾಗಿದೆ.'

'ವೈರಿಗಳ ಪ್ರವೇಶವೆ? ಹೇಗೆ ಬಂದರವರು?'

'ಉತ್ತರಭಾಗದಲ್ಲಿ ನೂಲೇಣಿ ಕಟ್ಟಿರುವರು.' 'ಎಷ್ಟು ಜನರಿರುವರು?

'ಬಹಳ ಸಾವಿರವಾದರೂ ಇರಬಹುದು. ಶಸ್ತ್ರಾಗಾರವು ಅವರ ವಶವಾಗಿ ಹೋಗಿದೆ. ಅರಸರನ್ನೂ ಸೆರೆ ಹಿಡಿದಿರುವರಂತೆ. ದುರ್ಗದ ಒಬ್ಬನಾದರೂ ಜೀವದಿಂದುಳಿಯುವಂತೆ ತೋರುವುದಿಲ್ಲ. ನಿಮಗೆ ಈ ಸಂಗತಿ ತಿಳಿದಿರಲಿಲ್ಲವೆಂದರಿತು ನಾವು ಹೇಳಿದೆವು. ನಾವಂತೂ ಜೀವವುಳಿಸಿಕೊಳ್ಳಲು ಓಡುತ್ತಲಿರುವೆವು. ಬೇಕಿದ್ದರೆ ನೀವೂ ಪಲಾಯನ ಹೇಳಿಸಬಹುದು.'

'ಸಾವಿರಾರು ಅರಿ ಸೈನಿಕರು ಪ್ರವೇಶಮಾಡಿರುವರು ಶಸ್ತ್ರಾಗಾರ ವೈರಿಗಳ ವಶವಾಗಿದೆ. ಅರಸು ಕೂಡಾ ಸೆರೆಯಾಳಾಗಿರುವನು.' ಇಷ್ಟು ಸಂಗತಿ ಕೇಳುತ್ತಲೇ ಅವರ ಜೀವ ತಲ್ಲಣಿಸಹತ್ತಿತು. ದುರ್ಗದ ತುಂಬೆಲ್ಲ ಗೊಂದಲವೆದ್ದುದಂತೂ ತೋರುತ್ತಲಿದ್ದಿತು. ಅದಕ್ಕೆ ಈ ಕಾರಣ ಕೇಳುತ್ತಲೇ ಅವರೂ ಗೊಂದಲದಲ್ಲಿ ಬಿದ್ದರು. ಅಷ್ಟರಲ್ಲಿ ಬೇರೆ ಹಲವರು ಬಂದು ಅದೇ ಸಂಗತಿ ತಿಳಿಸಿದರು. ಒಡನೆಯೇ ಕಾವಲುಗಾರರೂ ಓಡತೊಡಗಿದರು ಕಾವಲುಗಾರರೂ ಓಡಿ ಹೋದುದನ್ನರಿತು, ಆಗಂತುಕ ವೀರರು ಬಾಗಿಲಿಗೆ ಬಂದು, ಅದನ್ನು ತೆರೆದರು. ಅಲ್ಲಿಯೇ ಇದ್ದ ಕಟ್ಟಿಗೆಯ ಪೂಲನ್ನು ಕಂದುಕದ ಮೇಲೆಳೆದರು. ಒಡನೆಯೇ ಪೂರ್ವ ಸಂಕೇತದಂತೆ ಸಿದ್ಧವಾಗಿ ನಿಂತಿದ್ದ ಸಾವಿರಾರು ಸೈನಿಕರು ದುರ್ಗವನ್ನು ಪ್ರವೇಶಿಸಿದರು ಮೊದಲೆ ದುರ್ಗದಲ್ಲಿ ಬಂದ ಮುಂದಾಳುವು ಅವರನ್ನು ಕೂಡಿಕೊಂಡು ಹೊರಟನು. ಅವರು ದುರ್ಗದ ಸೈನಿಕರ ಶಸ್ತ್ರಾಸ್ತ್ರಗಳನ್ನು ಕಸಿದು ತಮ್ಮ ವಶಕ್ಕೆ ತೆಗೆದುಕೊಂಡರು. ಅಲ್ಪಾವಕಾಶದಲ್ಲಿಯೇ ದುರ್ಗವೆಲ್ಲವೂ ಶತ್ರುಗಳ ವಶವಾಗಿ ಹೋಯಿತು!

'ಚುಮು' 'ಚುಮು' ನಸುಕು. ಆಗಂತುಕ ಪಡೆಯೊಡೆಯ ತನ್ನ ಗುಡಾರು ಬಿಟ್ಟು ಹೊರಬಂದು ನೋಡುತ್ತಾನೆ, ದುರ್ಗದ ಮೇಲೆ ತಮ್ಮ ಪತಾಕೆ ಫಡಫಡಿಸುತ್ತಲಿದೆ. 'ವರಾಹ ಲಾಂಛನದಿಂದ ಶೋಭಿಸುವ ಕನ್ನಡಿಗರ ವೀರ ಪತಾಕೆ' ದುರ್ಗದ ಮೇಲೆ ಶೋಭಿಸುತ್ತಲಿದ್ದಿತು.

ಏನು! ಕನ್ನಡಿಗರ ವಿಜಯಪತಾಕೆಯೇ? ಅಹುದು. ಕನ್ನಡಿಗಳ ವರಾಹ ಲಾಂಛನದಿಂದೊಪ್ಪುವ ವೀರಪತಾಕೆಯೇ? ವಿಜಯನಗರದರಸಿನ ವಿಜಯ ಪತಾಕೆಯೇ? ಏಕೆ? ಓದುಗಮಹಾಶಯ, ನೀವುಗಚ್ಚರಿಯಾಯಿತೇನು? ಸ್ವಾಭಾವಿಕವಿದೆ. ಪರಪ್ರಾಂತೀಯ, ಪರದೇಶೀಯ, ಐತಿಹಾಸಿಕ ಸಾಹಿತ್ಯದಲ್ಲಿಯೇ ಮುಳುಗಿ ಹೋದ ನಿಮಗೆ ನಿಮ್ಮದೇ ಇತಿಹಾಸಿದ್ದಿತು. ನಿಮ್ಮ ಪೂರ್ವಿ

ಗರು ಒಂದು ಸಮಯ ಅಷ್ಟು ಶೌರ್ಯ-ವೀರ್ಯಗಳಿಂದ ಕಾದಿದರು. ಎಂಬ ಸಂಗತಿಯು ಅರಿಕೆಯೇ ಇಲ್ಲ. ಆದುದರಿಂದ ಕನ್ನಡಿಗರ ಈ ಅಪೂರ್ವ ವಿಜಯದ ಬಗ್ಗೆ ನೀವು ಶಂಕಿಸುವದು ಸಹಜವಿದೆ; ಆದರೆ ವಸ್ತುಸ್ಥಿತಿಯೇನೋ ಹಾಗಿದೆ. ವಿಜಯನಗರದರಸುಮಣಿ ವೀರನರಪತಿ ಶ್ರೀಕೃಷ್ಣದೇವರಾಯನೇ ಆಗಂತುಕ ಪಡೆಯೊಡೆಯನೆಂಬವನು. ರಾಯನಿಗೆ ದುರ್ಗದ ಮೇಲೆ ತಮ್ಮ ವಿಜಯಪತಾಕೆ ಕಾಣುತ್ತಲೇ ಅತ್ಯಾಶ್ಚರ್ಯವಾಯಿತು. ಅವನು ತನ್ನ ಅಂಗರಕ್ಷಕರಲ್ಲೊಬ್ಬನನ್ನು ಕರೆದು ಸಂಗತಿಯನ್ನು ವಿಚಾರಿಸಿದನು. ಪಾಪ! ಅವನಿಗೂ ಆ ಸಂಗತಿಯು ತಿಳಿದಿರಲಿಲ್ಲ. ಅವನು ಕೂಡಲೆ ವಿವರವನ್ನರಿಯಬೇಕೆಂದು ದುರ್ಗದತ್ತ ಹೊರಟನು.

ಅಷ್ಟರಲ್ಲಿ ಕನ್ನಡಿಗರ ವೀರಸೇನಾಪತಿ ರಾಮಲಿಂಗನು ನಗುಮುಖದಿಂದ ಬರುವುದು ಕಾಣಿಸಿತು. ಒಡನೆಯೇ ರಾಯನು ಆತುರತೆಯಿಂದ ಮುಂದೆ ಹೋಗಿ 'ಸೇನಾಪತಿಗಳೇ, ಇದೇನು? ದುರ್ಗದ ಮೇಲೆ ನಮ್ಮ ಧ್ವಜವಿದೆಯಲ್ಲ!'' ಎಂದು ಕೇಳಿದನು

ರಾಮಲಿಂಗನು ಒಡೆಯನನ್ನು ವಂದಿಸಿ, 'ಅಹುದು ಮಹಾಪ್ರಭು' ಎಂದನು.

'ಅದು ಹೇಗೆ?'' ಎಂದು ರಾಯನು ಪ್ರಶ್ನಮಾಡಿದನು.

'ತಮ್ಮಗಳ ಪಾದಮಹಿಮೆ, ಶ್ರೀ ವೀರೂಪಾಕ್ಷದೇವನನುಗ್ರಹ!' ಎಂದು ನಗುತ್ತ ರಾಮಲಿಂಗನು ಉತ್ತರವಿತ್ತನು.

ಅದೇ ಸಮಯಕ್ಕೆ ಮುನ್ನಿಸಿರುಳು ದುರ್ಗವನ್ನೇರಿ ಹೋದವರಲ್ಲಿ ಕೆಲವರು ಅಲ್ಲಿ ಬಂದರು. ಅವರು ರಾಯನಿಗೆ ರಾಮಲಿಂಗನ ಕಾರ್ಯ ಸಾಹಸಗಳನ್ನು ಬಹಳವಾಗಿ ವರ್ಣಿಸಿದರು. (ಮುನ್ನಿನಿರುಳು ಮುಂದೊರೆದು ಹೋದ ಮುಂದಾಳು ರಾಮಲಿಂಗನೇ)--- ರಾಮಲಿಂಗನ ಸಾಹಸವನ್ನು ಕೇಳಿ ರಾಯನಿಗೆ ಅತ್ಯಾನಂದವಾಯಿತು. ತಾವು ಯೋಜಿಸಿದ ಉಪಾಯವನ್ನೂ ದುರ್ಗದಲ್ಲೆಲ್ಲ ತುಂಬಿಹೋದ ಗೊಂದಲವನ್ನೂ ಕೇಳುವಾಗ್ಗೆ ನಕ್ಕು ನಕ್ಕು ರಾಯನ ಹೊಟ್ಟೆ ಹುಣ್ಣಾಗಿಹೋಯಿತು. ಅದೇ ಸಮಯಕ್ಕೆ ವಿಜಯನಗರದ ಚತುರಮಂತ್ರಿ ಸಾಳುವ ತಿಮ್ಮನು ಅಲ್ಲಿಗೆ ಬಂದನು. ಅವನಿಗೆ ಅಪ್ಪಾಜಿ ಎಂದಿನ್ನೊಂದು ಹೆಸರು ಅಧಿಕಾರೀ ವರ್ಗದಲ್ಲಿ ಅವನು ಎಲ್ಲಕ್ಕೂ ಹಿರಿಯನು. ಬಹಳ ಚತುರನು ಹಾಗೆಯೇ ಬಹಳ ಪ್ರೇಮಳ ಸ್ವಭಾವದವನು. ಈ ಮೂಲಕವಾಗಿಯೇ ಆತನನ್ನು ಎಲ್ಲರೂ 'ಅಪ್ಪಾಜಿ' ಎಂದು ಪ್ರೇಮದಿಂದ ಕರೆಯುತ್ತಲಿದ್ದರೂ ಇರಬಹುದು.

ಅಪ್ಪಾಜಿ ಬಂದುದನ್ನು ನೋಡುತ್ತಲೇ ರಾಯನು ಮುಗುಳುನಗೆಯಿಂದ 'ಅಪ್ಪಾಜಿ, ಸಿಂಹಾದ್ರಿಯ ಮೇಲಿನ ನಮ್ಮ ಧ್ವಜವನ್ನು ನೋಡಿದಿರಾ?' ಎಂದು ಕೇಳಿದನು.

'ಅಹುದು ಮಹಾಪ್ರಭು. ಈ ಕಾರ್ಯವು ಸೇನಾಪತಿಗಳ ಕರ್ತೃತ್ವ ಶಕ್ತಿಯಿಂದಾಗಿರಬೇಕೆಂದು ತೋರುತ್ತದೆ' ಎಂದು ಅಪ್ಪಾಜಿ ರಾಮಲಿಂಗನನ್ನು ಅಭಿಮಾನದಿಂದ ನೋಡುತ್ತ ಅಂದನು.

'ಅಹುದು. ಒಳಗೆ ಬನ್ನಿ. ಎಲ್ಲವನ್ನೂ ಹೇಳುತ್ತೇನೆ' ಎಂದು ರಾಯನು ಸಿಬಿರವನ್ನು ಪ್ರವೇಸಿಸಲು, ಅಪ್ಪಾಜಿ-ರಾಮಲಿಂಗರು ಹಿಂಬಾಲಿಸಿದರು

ಎಲ್ಲರೂ ಒಳಗೆ ತಮ್ಮ ತಮ್ಮ ಆಸನಗಳಲ್ಲಿ ಕುಳ್ಳಿರುತ್ತಲೇ ರಾಯನು ರಾಮಲಿಂಗನ ಸಾಹಸವನ್ನು ಚನ್ನಾಗಿ ವಿವರಿಸಿದನು. ಅವನ ಆ ಅಪ್ರತಿಮ ಧೀರಕಾರ್ಯವನ್ನು ವರ್ಣಿಸುವಾಗ್ಗೆ ರಾಯನು ಕೃತಜ್ಞಪೂರ್ಣನಾದಂತೆ ಚನ್ನಾಗಿ ವ್ಯಕ್ತವಾಗುತ್ತಲಿದ್ದಿತು.

ರಾಯನು ಹೇಳುವುದೆಲ್ಲವೂ ಮುಗಿಯಲು 'ಪ್ರಭುಗಳೇ, ನಮ್ಮ ಸೇನಾ ಪತಿಗಳೆಂದರೆ ಅದ್ವಿತೀಯ ಶೂರರಲ್ಲದೆ ಚತುರರೂ ಇರುವರು.' ಎಂದು ಅಭಿ ಮಾನದಿಂದ ಅಪ್ಪಾಜಿಯೆಂದನು.

'ಮಹಾಮಂತ್ರಿಗಳೇ, ಇದೆಲ್ಲವೂ ನಿಮ್ಮ ಶಿಕ್ಷಣದ ಫಲವೇ ಅಲ್ಲದೆ ಇನ್ನೇ ನಿಲ್ಲ. ಒಬ್ಬ ಸರ್ವಸಾಮಾನ್ಯ ಸೈನಿಕನನ್ನು ಹಿಡಿದು ತಂದು ಯೋಗ್ಯ ಶಿಕ್ಷಣ ವಿತ್ತು ಸೇನಾಪತಿಯಾಗುವಂತೆ ಮಾಡದಿದ್ದರೆ, ಈ ರಾಮಲಿಂಗನ ಹೆಸ ರಾದರೂ ಕೇಳಬರುತ್ತಲಿರಲಿಲ್ಲ. ಉತ್ತಮರಾದ ಕಾರಾಗಿರರೇ ನೀವಿರಲು. ನಿಮ್ಮ ಕೆತ್ತಿಗೆಯಿಂದ ಮೂರ್ತಿಯಾಗಲಾರದೆ?' ಎಂದು ರಾಮಲಿಂಗನು ಮುಗುಳುನಗೆಯಿಂದ ನುಡಿದನು.

'ಮುಖ್ಯವಾಗಿ ಕನ್ನಡಿಗರ ದೈವ ಚನ್ನಾಗಿದೆ. ಅಂತೆಯೇ ನಮಗೆ ಉತ್ಕೃಷ್ಟರಾದ ಜನರೇ ಸಿಕ್ಕುತ್ತಲಿರುವರು. ನಿಮ್ಮೀರ್ವರ ಸಹಾಯವಿಲ್ಲ ದಿದ್ದರೆ, ನನಗೆ ಯಾವ ಕಾರ್ಯ ತಾನೇ ಸಾಧನೆಯಾಗುತ್ತಲಿದ್ದಿತು?' ರಾಯನು ಆನಂದದಿಂದ ನುಡಿದನು.

"ಪ್ರಭುಗಳೇ, ಫಲಭರಿತ ಆಮ್ರವೃಕ್ಷದ ಆಶ್ರಯಕ್ಕೆ ಶುಕ-ಪಿಕಗಳು ಬಾರದಿದ್ದರೆ ಇನ್ನೆಲ್ಲಿ ಆಶ್ರಯ ಹೊಂದಬೇಕು? ಏಕೆ, ಸೇನಾಪತಿಗಳೆ?" ಅಪ್ಪಾಜಿ ಸುಹಾಸಪೂರ್ವಕ ಕೇಳಿದನು.

"ಇನ್ನೇನು? ನಮ್ಮ ದೊರೆಗಳು ಪ್ರಭು ಶ್ರೀರಾಮನನ್ನು ಕೂಡ ಹಿಂದೆ ಹಾಕುವವರಿರುವರೆಂದಲ್ಲಿ ಉಳಿದ ಸಾಧನ-ಸಾಮಗ್ರಿಗಳು ತಾವಾಗಿಯೇ ದೊರ

ಕುವುದರಲ್ಲಿ ಆಶ್ಚರ್ಯವೇನೂ ಇಲ್ಲ.'' ರಾಮಲಿಂಗನು ಹರ್ಷದಿಂದ ನುಡಿದನು

"ಅದೆಲ್ಲವೂ ಇರಲಿ ಈಗ ಮುಂದಿನ ಕಾರ್ಯ ಕೈಕೊಳ್ಳಬೇಕಾಗಿದೆ ಯಲ್ಲವೆ?" ಎಂದು ರಾಯನು ಎಲ್ಲರನ್ನು ಕಾರ್ಯದಿನೆಗೆಳೆಯಲು ನುಡಿದನು. ಮುಂದಿನ ಕಾರ್ಯದ ವಿಷಯಕವಾಗಿ ಅವರಲ್ಲಿ ಚರ್ಚೆ ನಡೆಯಿತು.

ಅಪ್ಪಾಜಿ - "ಸೇನಾಪತಿಗಳೇ, ಗಜಪತಿಯ ಸಂಗತಿಯೇನು?''

ರಾಮ —' ಅದೇನೋ ತಿಳಿಯದು ನಾವು ಮೊದಲು ದುರ್ಗದ್ವಾರ ತೆರೆಯಲು ಆತುರರಾಗಿ ಹೋಗುವಾಗ್ಗೆ ಸಮಗವನ ಯೋಚನೆಯೇ ಬರಲಿಲ್ಲ. ಮುಂದೆ ನಮ್ಮ ಸೇನೆ ಒಳಗೆ ಕರೆದುಕೊಳ್ಳುತ್ತಲೆ ಪ್ರಾಣಹಾನಿಯಾಗದಂತೆ ನೋಡಿಕೊಳ್ಳಬೇಕಾಗಿದ್ದಿತು; ಆದುದರಿಂದ ಮೊದಲು ಶಸ್ತ್ರಾಗಾರವನ್ನು ವಶ ಪಡಿಸಿಕೊಂಡೆವು. ಮೊದಲೇ ನಮ್ಮ ಹಾವಳಿಯ ಕಲ್ಪನೆಯಿಂದ ಕಂಗೆಟ್ಟ ಆ ಜನರು, ಪ್ರತ್ಯಕ್ಷ ನಮ್ಮ ಸೇನೆ ನೋಡುತ್ತಲೆ ಗಾಬರಿಯಾಗಿ ಹೋದರು. ಮುಂಬೆಳಗಿನವರೆಗೂ ನಮಗೆ ಅಲ್ಲಿಯ ಸೈನಿಕರ ನೆರೆ ಹಿಡಿಯುವುದೇ ಸಾಕ ಷ್ಟಾಗಿದ್ದಿತು ಮುಂಜಾವಿನಲ್ಲಿ ಅರಮನೆಗ ಹೋಗಿ ನೋಡುತ್ತಲೆ ಗಜಪತಿ ಯಾಗಲಿ, ಅವನ ಇತರ ಸಂಬಂಧಿಕರಾಗಲಿ ಯಾರೂ ಕಾಣಬರಲಿಲ್ಲ. ನಾವು ವಿಶೇಷವಾಗಿ ಚಿಕಿತ್ಸೆ ಮಾಡಿದೆವು. ಅದಾವುದೋ ಒಂದು ಗುಪ್ತಮಾರ್ಗ ವಾಗಿ ಇನ್ನೆಲ್ಲಿಯೋ ಹೋದಂತೆ ತೋರುತ್ತದೆ."

ರಾಯ:—"ಇನ್ನೇನಾದರೂ ತಂತ್ರವಿರಬಹುದೆ?''

ಅಪ್ಪಾಜಿ:—"ಇಷ್ಟಕ್ಕೇ ನಾವು ಅವನನ್ನು ಪೂರ್ಣವಾಗಿ ಜಯಿಸಿ ದಂತಾಗಲಿಲ್ಲ. ನಮಗೆ ಇನ್ನೂ ಹೆಚ್ಚು ತೊಂದರೆ ತೆಗೆದುಕೊಳ್ಳಬೇಕಾಗು ವುದು. ಇರಲಿ. ಈಗ ಸದ್ಯಕ್ಕೆ ನಾವು ಮುಂದಿನ ಕೆಲಸಕ್ಕೆ ತೊಡಗಬೇಕು."

ರಾಯ —"ಈಗ ಏನು ಮಾಡಬೇಕೆನ್ನುವಿರಿ?''

ಅಪ್ಪಾಜಿ. ಸಿಂಹಾದ್ರಿಯ ಜನರು ಬಹಳವಾಗಿ ಭೀತಿಪಟ್ಟಿರಬಹುದಲ್ಲವೆ?

ರಾಮ-"ಅದನ್ನು ವರ್ಣಿಸಲಳವಲ್ಲ ಎಲ್ಲರೂ ಭೀತಿಯಿಂದ ಕಂಗೆಟ್ಟು ಹೋಗಿರುವರು. ತಮ್ಮ ಆಸ್ತಿ-ಪಾಸ್ತಿಗಳ ರಕ್ಷಣೆಯಲ್ಲಿಯೇ ಎಲ್ಲರೂ ತೊಡ ಗಿರುವರು. ತಮ್ಮ ಹೆಂಡಿರು-ಮಕ್ಕಳ ಗತಿಯೇನಾಗುವುದೋ ಎಂದು ಎಲ್ಲರೂ ಕಾತರರಾಗಿರುವರು ಯಾರ ಮುಖದಲ್ಲಿಯೂ ಚೇತನೆಯಿಲ್ಲ"

ಅಪ್ಪಾಜಿ.—"ನೀವು ಅವರನ್ನು ಸಮಾಧಾನಪಡಿಸಲೆತ್ನಿಸಲಿಲ್ಲವೆ?''

ರಾಮ—ಜನರನ್ನು ಶಾಂತಪಡಿಸಲು ನಾವು ವಿಶೇಷವಾಗಿ ಯತ್ನಿ ಸಿದೆವು; ಆದರೂ ಜನರು ನಿರ್ಭೀತರಾದಂತೆ ತೋರುವುದಿಲ್ಲ.

ರಾಯ — ನಮ್ಮ ಸೈನಿಕರಿಂದ ತೊಂದರೆಯೇನೂ ಆಗಿಲ್ಲವಷ್ಟೆ?

ರಾಮ - ಇಲ್ಲ ಮಹಾಪ್ರಭು. ಕಿಂಚಿತ್ತಾದರೂ ಅತ್ಯಾಚಾರವನ್ನಾಚರಿಸಿದರೆ ಭಯಂಕರ ಶಿಕ್ಷೆಗೆ ಗುರಿಯಾಗಬೇಕಾಗುವುದೆಂದು ಆಜ್ಞೆಯಿತ್ತಿರುವೆನು. ಸ್ವಭಾವತಃ ನಮ್ಮ ಸೈನಿಕರಾದರೂ ಅತ್ಯಾಚಾರಿಗಳಲ್ಲ. ಅವರು ಇಲ್ಲಿಯವರೆಗೆ ಅಲ್ಪವಾದರೂ ಪೀಡೆಯನ್ನಿತ್ತಿಲ್ಲ ವಿಷ್ಟೇಅಲ್ಲ; ಗಾಯಗೊಂಡವರನ್ನೂ, ದುಃಖಿತರನ್ನೂ ಶೋಧಿಸಿ, ಅವಶ್ಯಕವಾದ ಸಹಾಯವನ್ನೀಯುತ್ತಲಿರುವರು.

ರಾಯ -ಭಾಪು! ಭಾಪು! ಸೇನಾಪತಿಗಳೇ, ನಿಮ್ಮ ದಕ್ಷತೆ ಪ್ರಶಂಸಾರ್ಹವಿದೆ. ಮುಖ್ಯವಾಗಿ ನಮ್ಮ ಸೌಜನ್ಯಪೂರ್ಣ ನಡತೆಯೇ ಕನ್ನಡಿಗರಿಗೆ ಮನ್ನಣೆಯನ್ನೀಯುವಂತಹದು. ಸ್ವಲ್ಪವಾದರೂ ತಪ್ಪಿದಲ್ಲಿ ಕರ್ನಾಟಕದ ಮೇಲ್ಮೆಗೆ, ವಿಜಯನಗರ ಸಾಮ್ರಾಜ್ಯದ ಘನತೆಗೆ ಭಯಂಕರವಾದ ಕುಂದುಂಟಾಗುವುದು. ನಮ್ಮ ಹೆಸರು ಕಪ್ಪು ಮಸಿಯಲ್ಲಿ ಬರೆದಿಡಬೇಕಾದೀತು. ಏಕೆ ಮಂತ್ರಿಗಳೆ?

ಅಪ್ಪಾಜಿ.—ಅಹುದು ಮಹಾಪ್ರಭು. ವಿಜಯನಗರದ ಮಹತಿಯ ಸ್ಮರಣೆ ಕೊನೆಯವರೆಗೆ ಭಾರತದಿತಿಹಾಸಿನಲ್ಲಿ ಉಳಿಯಬೇಕಾದರೆ, ನಾವು ಅಷ್ಟು ದಕ್ಷತೆ ವಹಿಸುವವುದತ್ಯವಶ್ಯವಾಗಿದೆ. ಇರಲಿ. ಈಗ ಮುಂದಿನ ಯೋಚನೆಯೇನು?

ರಾಯ:—ಅಹುದು ನಾವು ಮುಖ್ಯವಾಗಿ ಗಮನಿಸತಕ್ಕ ವಿಷಯವು ಅದಾಗಿರುತ್ತದೆ. ಒಳ್ಳೇದು. ಸೇನಾಪತಿಗಳೇ, ಇದಕ್ಕೆ ನಿಮ್ಮ ಸೂಚನೆಯೇನಿದೆ?

ರಾಮ —ಮಹಾಮಂತ್ರಿಗಳ ಎದುರಲ್ಲಿ ನಮ್ಮದೇನು? ಆದರೂ ನನಗೆ ತಿಳಿಯುವ ಮಟ್ಟಿಗೆಂದರೆ, ಜನರಲ್ಲಿ ಶಾಂತತೆಯನ್ನುಂಟು ಮಾಡಿ ಕೊಂಚ ವಿಶ್ರಾಂತಿ ತೆಗೆದುಕೊಳ್ಳಬೇಕೆಂಬದು ಯೋಗ್ಯವೆಂದು ತೋರುತ್ತದೆ; ತಮಗೆ ಒಪ್ಪಿತವಾದಂತೆ ನಡೆಯಲು ನಾನು ಸಿದ್ಧನಿರುವೆನು

ರಾಯ:—ಏಕೆ ಅಪ್ಪಾಜಿಯವರೆ, ನಿಮ್ಮ ಸಲಹೆಯೇನು?

ಅಪ್ಪಾಜಿ:—ಜನರು ಭಯರಹಿತರಾಗಿರುವಂತೆ ಡಂಗುರ ಸಾರಿಸಬೇಕು. ಅಲ್ಲಲ್ಲಿ ನಮ್ಮ ಸದುದ್ದೇಶವನ್ನು ಧ್ವನಿಸುವ ಪತ್ರಿಕೆಗಳನ್ನು ಏತದ್ದೇಶೀಯ ಭಾಷೆಯಲ್ಲಿ ಬರೆದು ಅಂಟಿಸಬೇಕು. ದೊರೆಗಳ ಸ್ವಭಾವವೇ ಆದ ದಾನ-ಧರ್ಮಗಳಂತೂ ಇದ್ದೇ ಇವೆ. ಶುಭಸಮಯದಲ್ಲಿ-ಗಜಪತಿಯೊಡನೆ ಮೈತ್ರಿ ಬೆಳೆಯುವಂತಹ ಕಲ್ಯಾಣಕರ ಸಮಯದಲ್ಲಿ-ಪ್ರಭುಗಳು ನಗರ ಪ್ರವೇಶ ಮಾಡಬೇಕು.

ರಾಯ.—ನಿಜ-ನಿಜ. ಮಹಾಮಂತ್ರಿಗಳೇ, ನಿಮ್ಮ ಸಲಹೆ ತೀರಾ ಯೋಗ್ಯವಾದುದಿದೆ. ಏಕೆ? ಸೇನಾಪತಿಗಳೇ, ಇದಿಷ್ಟು ವ್ಯವಸ್ಥೆ ಮಾಡುವಿರಾ?

ರಾಮು·—ಪ್ರಭುಗಳ ಅಪ್ಪಣೆ.

ಹೀಗೆ ಮಾತುಗಳು ನಡೆಯುತ್ತಲೆ ಅವರು ಎದ್ದರು.

ಸಿಂಹಾದ್ರಿಯ ನಿವಾಸಿಗಳೆಲ್ಲರೂ ಭಯಭರಿತರಾಗಿದ್ದರು. ಮುನ್ನಿನಿರುಳು ಅವರು ಹೀಗೆ ನಿರಾಶರಾಗಿರಲಿಲ್ಲ. ತಮ್ಮ ಕೋಟೆ ಭದ್ರವಾದುದು. ತಮ್ಮೊಡೆಯ ಯಾವದೊಂದು ವಿಧದಿಂದ ಅದನ್ನು ರಕ್ಷಿಸುವನು, ಎಂಬ ಭರವಸೆ ಅವರಿಗಿದ್ದಿತು. ಯುದ್ಧದ ಪರಿಣಾಮವು ಮೊದಲೇ ನಿಶ್ಚಯಿಸಲ್ಪಡಲಾರದಾದುದರಿಂದ ಅವರು ತಮಗೇ ಜಯವು ಸಿಕ್ಕುವುದೆಂಬ ಭರವಸೆಯುಳ್ಳವರಾಗಿರದಿದ್ದರೂ ಅಷ್ಟು ಬೇಗನೆ ಶತ್ರುಗಳ ಪಾಲಾಗುವದೆಂದು ಅವರೆಂದೂ ಊಹಿಸಿರಲಿಲ್ಲ. ತಮ್ಮ ಮಕ್ಕಳು-ಮರಿಗಳನ್ನು ಬೇರೊಂದು ಸ್ಥಳಕ್ಕೆ ಕರದೊಯ್ಯಲಿಕ್ಕೆ, ತಮ್ಮ ಸಿರಿ-ಸಂಪತ್ತನ್ನು ಭದ್ರವಾಗಿರಿಸಲಿಕ್ಕೆ ಸಾಕಷ್ಟು ಅವಕಾಶ ಸಿಕ್ಕೇಸಿಕ್ಕುವುದೆಂದು ಭರವಶೆಯುಳ್ಳವರಾಗಿದ್ದರು. ಅಂತೆಯೇ ಅವರು ಯಾವ ಯೋಚನೆಯೂ ಇಲ್ಲದೆ ಸ್ವಸ್ಥಚಿತ್ತದಿಂದ ಮಲಗಿದ್ದರು, ಆದರೆ ಬೆಳಗಾಗುವದಕ್ಕೆ ಮೊದಲೇ ದುರ್ಗವು ಶತ್ರುಗಳ ವಶವಾಗಿ, ಸ್ವಾತಂತ್ರ್ಯ ಸೌಖ್ಯದಲ್ಲಿ ಮುಳುಗಿದ ಅವರು ಪಾರತಂತ್ರ್ಯ ಬಂಧನಕ್ಕೆ ಸಿಲುಕಿದರು. ಬರಿಯ ಪಾರತಂತ್ರ್ಯದಿಂದ ಅವರು ಭಯಗೊಳ್ಳಲಿಲ್ಲ. ಗೆದ್ದವರು ತಮ್ಮ ಅಕ್ಕ-ತಂಗಿಯರನ್ನು ಎಳೆದೊಯ್ಯಬಹುದು; ತಮ್ಮ ಸಂಪತ್ತಿಯನ್ನು ಸೆಳೆದೊಯ್ಯಬಹುದು ಎಂಬ ವಿಚಾರಗಳಿಂದ ಅವರು ಕೈಕಾಲುಗೆಟ್ಟಿದ್ದರು.

ಯುದ್ಧದ ನೀತಿಯೆಂದರೇನೆಂಬದನ್ನು ಅರಿಯುವದು ಬಲು ಬಿರಿ. ಮುತ್ಸದ್ದಿಗಳು, ರಾಜಕಾರಣ ಪಟುಗಳು ಮುಂತಾದವರುಗಳೆಲ್ಲರೂ 'ಯುದ್ಧವೆಂದರೆ, ಅದೊಂದು ಸ್ಪರ್ಧೆ. ಗೆಲವು ಪಡೆದವರು ಸೋತವರನ್ನು ಆದರಪೂರ್ವಕ ನಡೆಯಿಸಿಕೊಳ್ಳುವುದು ಅವರ ಧರ್ಮ' ಇತ್ಯಾದಿಯಾಗಿ ಹೇಳುತ್ತಲಿರುವರು; ಆದರೆ ಪ್ರತ್ಯಕ್ಷವಾಗಿ ಆಚರಣೆಯಲ್ಲಿ ಕಾಣಬರುತ್ತಲಿರುವುದೇನು? ಸೋತ ರಾಷ್ಟ್ರ, ಜನಾಂಗ, ದೇಶಗಳ ಅವಸ್ಥೆ ಕೊನೆಗಂಡಂತೆಯೆ. ಅವರಿಗೆ ಸ್ವತಂತ್ರ ಅಸ್ತಿತ್ವವೇ ಇಲ್ಲ. ಅವರದೆನ್ನುವುದೇನೂ ಇಲ್ಲವೇ ಇಲ್ಲ, ಎಂಬದು ಪ್ರತ್ಯಕ್ಷವಾಗಿ ಕಾಣಬರುತ್ತಲಿದೆ. ಒಂದು ಧರ್ಮದವರು ಇನ್ನೊಂದು ಧರ್ಮವನ್ನಾಕ್ರಮಿಸಿದರಂತೂ ಮುಗಿದೇ ಹೋಯಿತು. ಸೋತವರ ಜೀವನವು ಗೆದ್ದವರ ದಯೆಯ ಮೇಲೆ ಅವಲಂಬಿಸಿರುತ್ತದೆ. ಆಗಿನ ಕಾಲಕ್ಕಂತೂ ಈ ಸಂಗತಿಯ ಅನುಭವವು ಪದೇ ಪದೆ ಜನತೆಯ ನಿದರ್ಶನಕ್ಕೆ ಬರುತ್ತಲಿದ್ದಿತು. ಅಂತೆಯೆ ಸಿಂಹಾದ್ರಿಯ ಜನರು ಭಯಭೀತರಾಗಿದ್ದರು. ತಮ್ಮ ಮುಂದಿನ ದುರವಸ್ಥೆಯನ್ನು ನೆನೆನೆನೆದು ಕಣ್ಣೀ

ರಿಡುತ್ತಲಿದ್ದರು. ಚೈತನ್ಯವಿಲ್ಲದ ಯಾಂತ್ರಿಕ ಶರೀರಗಳಂತೆ ಅವರ ನಿತ್ಯ ಕ್ರಮ ನಡೆದಿದ್ದಿತು. ಒಬ್ಬರಿಗೊಬ್ಬರು ದುಃಖಭರಿತ ಸ್ವರದಲ್ಲಿಯೇ ಮಾತ ನಾಡುತಲಿದ್ದರು. ಅದೂ ತಮ್ಮ ಮುಂದಿನ ಭೀಕರಾವಸ್ಥೆಯನ್ನು ಕುರಿತೇ!

ಹೀಗೆ ಸಿಂಹಾಚಲ ನಿವಾಸಿಗಳೆಲ್ಲರೂ ಚಿಂತಾಕ್ರಾಂತರಾಗಿ ಕುಳಿತಿರಲು, ಅವರಿಗೆ ಕಹಳೆ-ಜಾಗಟೆಗಳ ಸ್ವರವು ಕೇಳಬರಹತ್ತಿತು. ಅದು ತಮ್ಮೆಲ್ಲರ ಮರಣಸೂಚಕ ಸ್ವರವೆಂದೇ ಅವರೆಲ್ಲರೂ ಭಾವಿಸಿ ಭಯಕಂಪಿತರಾಗಿ, ಸುಮ್ಮನೆ ಕುಳಿತುಬಿಟ್ಟರು ತಮ್ಮೆಲ್ಲರನ್ನೂ ವಧಿಸಲು ಬಂದ ವೈರಿಗಳಿಗೆ ಆತಂಕ ಮಾಡುವ ಸಾಮರ್ಥ್ಯವಿಲ್ಲದುವರ ಮೂಲಕ ಮರುಮಾತಿಲ್ಲದೆ ವಶ ರಾಗುವ ಸಿದ್ಧತೆಯಲ್ಲಿ ಕುಳಿತಂತೆ ತೋರುತ್ತಿತ್ತು. ಅವರೆಲ್ಲರೂ ತಮ್ಮ ಪ್ರೀತಿಯ ದೊರೆ ಗಜಪತಿಯನ್ನು ಬಹಳವಾಗಿ ಸ್ಮರಿಸಿದರು; ಆದರೇನು? ಅವ ನವಸ್ಥೆ ಏನಾಗಿದ್ದೀತೆಂಬದೇ ಅವರಿಗೆ ತಿಳಿದಿರಲಿಲ್ಲ. ಅವರು ಮುಂದಿನ ಸಂಗತಿಯನ್ನರಿಯಲು ಆತುರರಾಗಿ ಕುಳಿತಾಗ್ಗೆ ಡಂಗುರ ಕೇಳಬರಹತ್ತಿತು.

"ಸಿಂಹಾಚಲ ನಿವಾಸಿಗಳೇ, ಕೇಳಿರಿ-ಕೇಳಿರಿ; ಕಿವಿಗೊಟ್ಟು ಕೇಳಿರಿ. ಕರ್ನಾಟ ಸಾಮ್ರಾಜ್ಯಾಧೀಶ್ವರ ವೀರನರಪತಿ ಶ್ರೀಕೃಷ್ಣದೇವರಾಯರು ಇಲ್ಲಿಯ ನಿವಾಸಿಗಳಿಗೆ ಹೀಗೆ ಅಭಯವಿತ್ತಿರುವರು.—ಯದ್ಯಪಿ ನಾವು ಈ ರಾಜ್ಯವನ್ನು ಗೆದ್ದಿರುವೆವಾದರೂ ನಾವು ಇಲ್ಲಿಯ ಪ್ರಜರಿಗೆ ಕಿಂಚಿತ್ತಾದರೂ ತೊಂದರೆ ಕೊಡಬಯಸುವದಿಲ್ಲ ಇಲ್ಲಿಯ ಜನತೆಗೆ ಅಲ್ಪವಾದರೂ ಪೀಡೆ ಯಾಗದಂತೆ ನಮ್ಮ ಸೈನಿಕರಿಗೆ ಕಟ್ಟಾಜ್ಞೆ ಮಾಡಿರುತ್ತೇವೆ ಹೀಗಿದ್ದರೂ ಯಾರಾದರೂ ನಮ್ಮ ಸೈನಿಕರಿಂದ ಪೀಡಿಸಲ್ಪಟ್ಟಿದ್ದರೆ ಅವರು ನಮ್ಮ ವರೆಗೆ ದೂರು ತರತಕ್ಕದು; ಅಂದರ ನಮಗೆ ಯೋಗ್ಯ ನ್ಯಾಯ ಕೊಡಲಾಗುವದು.

ಇದರ ಹೊರತು ನಾವು ಏತದ್ದೇಶೀಯ ಜನತೆಗೆ ಅವಶ್ಯವಾದ ಸಹಾಯ ಮಾಡಬೇಕೆಂದು ನಿರ್ಧರಿಸಿರುತ್ತೇವೆ ಆ ಕಾರಣವಾಗಿ ನಾವು ಇಂದಿ ನಿಂದಲೇ ಇಲ್ಲಿಯ ಚಾವಡಿಯಲ್ಲಿ ನಾವು ಎಲ್ಲ ಬಗೆಯ ವ್ಯವಸ್ಥೆ ಮಾಡಿರು ತ್ತೇವೆ. ಬೇಕಾದವರು ಅಲ್ಲಿಗೆ ಬಂದು ಬೇಕಾದ ಸಹಾಯವನ್ನು ಕೊಂ- ಡೊಯ್ಯತಕ್ಕುದು.

ಇಂದಿನಿಂದಲೇ ಎಲ್ಲ ದೇವಾಯತನಗಳಲ್ಲಿ ಅರ್ಚನೆ-ಭಜನೆಗಳು ಪ್ರಾರಂಭಿಸಲ್ಪಡುವವು. ಇಲ್ಲಿಯ ನಮ್ಮ ಪ್ರಜೆಗಳೆಲ್ಲರೂ ನೆಮ್ಮದಿಯಾಗಿರ ಬೇಕೆಂಬದೇ ನಮ್ಮ ಹೆಬ್ಬಯಿಕೆಯಾಗಿದೆ ಆದುದರಿಂದ ಇಲ್ಲಿಯ ದೇವ ನಾದ ಶ್ರೀ ಜಗನ್ನಾಥನ ಅನುಗ್ರಹ ಸಂಪಾದಿಸಲು ಸಹಕರಿಸಬೇಕೆಂಬದೇ ನಮ್ಮ ಇಚ್ಛೆಯಾಗಿದೆ.

ಮುಖ್ಯವಾಗಿ ನಾವು ಕೋರುವುದು ನಿಮ್ಮಗಳ ಪ್ರೇಮ. ಆ ಮೂಲಕ ನಾವು ಒಂದು ಶುಭಮುಹೂರ್ತದಲ್ಲಿ ಪಟ್ಟಣವನ್ನು ಪ್ರವೇಶಿಸಲಿರುವೆವು. ಆ ವೇಳೆಗೆ ನೀವೆಲ್ಲರೂ ಯೋಗ್ಯ ಆದರೋತ್ಸಾಹಗಳನ್ನು ತೋರಿಸುವಿರೆಂದು ನಮ್ಮ ನಂಬುಗೆ ''

ಸಿಂಹಾದ್ರಿಯ ಜನತೆ ಈ ಡಂಗರ ಕೇಳುತ್ತಲೇ ಕೊಂಚ ಉತ್ತೇಜಿತ ರಾದರು. ಹೋಗುವ ಜೀವ ಮರಳಿದಂತಾಯಿತು. ನಿರಾಶಾಂಧಃಕಾರದಿಂದ ಕುರುಡರಾದ ಅವರಿಗೆ, ಕೊಂಚವೇ ಆದರೂ ದೃಷ್ಟಿ ಮರಳಿ ಬಂದಂತಾಯಿತು. ಆದರೂ ಸಂಶಯವು ಪೂರ್ಣ ನಿರಸನವಾಗಲಿಲ್ಲ. ಹಿಡಿಯುವ ಕಪಟಜಾಲ ವಿದ್ದರೂ ಇರಬಹುದೆಂಬ ಶಂಕೆಯನ್ನು ಹಲವರು ತೆಗೆದರು. ಈ ಸಂಬಂಧ ದಲ್ಲಿ ಬಹಳವಾಗಿ ಚರ್ಚೆಯಾಯಿತು. ಅನೇಕರು ಅನೇಕ ವಿಧವಾಗಿ ಚರ್ಚಿ ಸಿದರು ಸಾಧಕ-ಬಾಧಕ ಪ್ರಮಾಣಗಳನ್ನೂ ಊಹಿಸಿದರು. ಈ ವಿಷಯ ವಾಗಿ ಹಲವೆಡೆಗಳಲ್ಲಿ ಚರ್ಚಾಕೂಟಗಳೇರ್ಪಟ್ಟಿದ್ದವು.

"ಕರ್ನಾಟಕದರಸಿನ ಔದಾರ್ಯವೇ ಇದಕ್ಕೆ ಕಾರಣವೋ ಇಲ್ಲವೋ?''

"ಅದು ರಾಜನೀತಿ. ತಮ್ಮ ಹಿತವಿಲ್ಲದೆ ಯಾರೂ ಪರಾರ್ಥಸಾಧನೆಗೆ ತೊಡಗುವುದಿಲ್ಲ ''

"ಏನೇ ಆದರೂ ಉಳಿದ ಎಷ್ಟೋ ದಾಳಿಗಾರರಿಗಿಂತ ಮೇಲು ಅಲ್ಲವೆ? ನಮ್ಮ ರಾಜ್ಯ ಗೆದ್ದುದಲ್ಲದೆ, ಸಂಪತ್ತೆಲ್ಲವೂ ಸೆಳದೊಯ್ದಿದ್ದರೆ ನಾವೇನು ಮಾಡುವುದು?''

'ಅದೇನೋ ನಿಜವೆ ಆ ದೃಷ್ಟಿಯಿಂದ ನೋಡಿದರೆ, ನರಪತಿಯು ನೂರಾರು ಪಾಲು ಮೇಲು, ಎಂದು ನಿಸ್ಸಂದೇಹವಾಗಿ ಹೇಳಬಹುದು."

'ಅದು ಮಾತ್ರ ನಿಜ. ನರಪತಿಯಾಗವೆ ಇನ್ನಾರಾದರೂ ಆಗಿದ್ದರೆ ಇಷ್ಟರಲ್ಲಿ ಎಷ್ಟೋ ಉತ್ಪಾತಗಳನ್ನುಂಟು ಮಾಡಬಹುದಿತ್ತು. ಇದು ವರೆಗೆ ನಮ್ಮ ಯಾವ ಸಂಗತಿಯಲ್ಲಿಯೂ ಕೈಹಾಕಲ್ಲವಿಷ್ಟೇ ಅಲ್ಲ, ಬೇಕಾದ ಸಹಾಯ ಮಾಡುತ್ತಲಿರುವನು.''

ನಮ್ಮ ಅರಸು ಬೆಳಗಾಗುವಷ್ಟರಲ್ಲಿ ಎಲ್ಲಿ ಹೋಗಿರಬಹುದು?''

''ಏನು, ನೀವು ಅರಿಯದವರಂತೆ ಕೇಳುತ್ತಲಿರುವಿರಲ್ಲ?''

'ಅಂದರೆ?' 'ಅಂದರೇನು? ಪೊಟ್ಟನೂರು ಕಿಲ್ಲೆಯಿಲ್ಲವೆ?'

''ನಿಜ, ನಿಜ; ಆದರೆ ಅಷ್ಟು ಅವಧಿಯಲ್ಲಿ ಹೇಗೆ ಹೋದರು?''

''ಅದನ್ನು ನಾನರಿಯೆ; ಆದರೆ ಅವರು ಹಾಗೆ ಪೊಟ್ಟನೂರಿಗೆ ಪ್ರಯಾಣ ಬೆಳೆಯಿಸಿದುದು ಮಾತ್ರ ಸತ್ಯವು."

"ಒಳ್ಳೇದು. ಈಗ ಮುಂದಿನ ಯೋಚನೆಯೇನು?"

"ಮುಂದಿನದೇನು?" "ನರಪತಿಯ ಸ್ವಾಗತದ ವಿಷಯ."

"ಅಹುದು. ಈ ಸಮಯ ನರಪತಿಯನ್ನು ಕೆರಳಿಸುವುದರಿಂದ ಲಾಭವಿಲ್ಲ. ಸೋತ ಜನಾಂಗವಾದ ನಮ್ಮ ಸಂಗಡ ಅವನು ಇಷ್ಟು ಔದಾರ್ಯದಿಂದ ವರ್ತಿಸುತ್ತಲಿರಲು, ನಾವೂ ಕೂಡ ಅವನಿಗೆ ಯೋಗ್ಯ ಮನ್ನಣೆ ತೋರಿಸಲೇ ಬೇಕು. ನಮ್ಮ ಅಂತರಂಗದಲ್ಲಿ ಅದೇನೇ ಇದ್ದರೂ, ನಾವದನ್ನು ಬಹಿರಂಗದಲ್ಲಿ ತೋರಿಸದೆ, ಒಳ್ಳೇ ಪ್ರೀತರಾದಂತೆ ಆದರ-ಸತ್ಕಾರ ತೋರಿಸಲೇ ಬೇಕು. ಇನ್ನೊಂದು ವಿಷಯವೆಂದರೆ, ನಮ್ಮ ಅರಸಿಗೆ ಸಾಕಷ್ಟು ಅವಧಿ ದೊರೆಯುವಂತೆ ಮಾಡುವುದಾದರೂ ನಮ್ಮ ಕರ್ತವ್ಯವೇ ಆಗಿದೆ"

'ಅದು ಮಾತ್ರ ನಿಜ. ನಮ್ಮ ದೊರೆಯಾದರೇನು, ಸಾಮಾನ್ಯನಲ್ಲ. ಏನು ಮಾಡಬೇಕು..... ....?'

'ಕೊಂಚ ಅಲಕ್ಷ್ಯವಾಯಿತು. ಇಲ್ಲವಾಗಿದ್ದರೆ ಆರು ತಿಂಗಳಾದರೂ ಕೋಟೆಯ ದರುಶನವಾಗಗೊಡುತ್ತಿರಲಿಲ್ಲ.'

'ಅದಿರಲಿ. ಅಂದಿನ ಆ ವೀರನ ಸಾಹಸವು ವರ್ಣಿಸಲು ತಕ್ಕುದಲ್ಲವೆ?'

'ಅದು ಮಾತ್ರ ನಿಜ ನೋಡಿ. ಮುಂಜಾವು ನಾನವುಗಳನ್ನು ನೋಡಹೋಗಿದ್ದೆನು. ಅದನ್ನು ನೋಡಿ ನಾನು ಗಾಬರಿಯಾಗಿ ಹೋದೆನು. ಆ ಗೋಡೆಯಲ್ಲಿ ಅವನು ಮೊಳೆಗಳನ್ನು ಹೇಗೆ ಬಡೆದನೋ, ಅವುಗಳ ಮೇಲೆ ಹೇಗೆ ಏರಿದನೋ ಎಲ್ಲವೂ ಆಶ್ಚರ್ಯಕರವೇ ಆಗಿರುತ್ತದೆ. ಹಗಲಿನಲ್ಲಿ ಕೂಡ ಬಡಿದು ಸಿದ್ಧವಿರುವ ಆ ಮೊಳೆಗಳ ಮೇಲೆ ಹತ್ತಿ ಕೋಟೆಯ ಮೇಲೇರಲು ಸಾಧ್ಯವಿಲ್ಲ. ಹೀಗಿದ್ದು, ಆ ವೀರನು ಇರುಳಿನಲ್ಲಿ ಅವುಗಳನ್ನು ಬಡಿಯುತ್ತ ಹೇಗೆ ಹತ್ತಿದನೊ, ಕೆಳಗೆ ಹೇಗೆ ಉರುಳಲಿಲ್ಲವೊ, ಹೇಗೆ ಭಯಪಡಲಿಲ್ಲವೊ? ಎಲ್ಲವೂ ವಿಲಕ್ಷಣವೇ ಆಗಿದೆ!'

'ಕರ್ನಾಟಕದರಸಿನ ವೀರಸೇನಾಪತಿ ರಾಮಲಿಂಗನೇ ಆತನು. ಕೆಚ್ಚೆದೆಯ ತರುಣನಿರುವನು. ಅವನ ಧೈರ್ಯ-ಸಾಹಸಗಳು ನಿರುಪಮವಾದುವು.'

'ಅಂತಹ ಅಸಾಮಾನ್ಯ ಸೇನಾಪತಿ ದೊರಕಿರುವ ಮೂಲಕವೇ ಸಿಂಹಾಚಲವು ಒಂದು ಹನಿ ನೆತ್ತರು ಬೀಳದೆ ಅವರ ವಶವಾಯಿತು.'

'ಆಗಲಿ. ಇಷ್ಟಕ್ಕೇ ಮುಗಿಯಲಿಲ್ಲ. ಇನ್ನೂ ಈ ಸಂದರ್ಭದಲ್ಲಿ ನರಪತಿಗೆ ಅನೇಕ ಸಂಕಟಗಳು ಬಂದೊದಗತಕ್ಕುವಿವೆ. ಇರಲಿ. ಸದ್ಯ ನಾವೆಲ್ಲರೂ ಅವನ ಈ ವಿಜಯಕ್ಕೆ ಸಂತೋಷವನ್ನೇ ವ್ಯಕ್ತಪಡಿಸುವಾ. ಮುಂದೆ ಸಮಯಾನುಸಾರ ನೋಡೋಣ.'

ಇಂತಹ ಚರ್ಚಾಕೂಟಗಳು ಅಲ್ಲಲ್ಲಿ ನಡೆದು, ನರಪತಿಯಿಂದ ಸಿಕ್ಕುವ ಸಹಾಯದ ಲಾಭಪಡೆಯಬೇಕೆಂದೂ ನರಪತಿಯ ಆಗಮನದ ಸಮಯದಲ್ಲಿ ಯೋಗ್ಯ ಆದರೋತ್ಸಾಹಗಳನ್ನು ತೋರಿಸತಕ್ಕುದೆಂದೂ ನಿರ್ಧರಿಸಿದರು.

ನರಪತಿ ಡಂಗುರ ಸಾರಿದ್ದಂತೆಯೇ ಸಿಂಹಾದ್ರಿಯಲ್ಲಿ ಎಲ್ಲ ವ್ಯವಸ್ಥೆಯನ್ನೂ ಮಾಡಿದನು ದೀನರು, ದುಃಖಿತರು, ಅನಾಥರು ಅಲ್ಲಿಯ ಸಹಾಯ ಹೊಂದಿ ನರಪತಿಯನ್ನು ಹಾಡಿ ಹರಸಹತ್ತಿದರು. ಅಪ್ಪಾಜಿ-ರಾಮಲಿಂಗರು ಸ್ವತಃ ನಗರದಲ್ಲಿ ತಿರುಗಾಡಿ, ಜನತೆಯ ದುಃಖನಿವಾರಣೆಗೆ ಯತ್ನಿಸುತ್ತಿದ್ದರು ಅಂದು ಕಿಲ್ಲೆಯನ್ನೇರಿದ ಅಸಾಧಾರಣ ಸಾಹಸಿ ರಾಮಲಿಂಗನೇ ಎಂದು ಜನತೆಗೆ ತಿಳಿಯಲು, ಅವರವನನ್ನು ಬಹಳವಾಗಿ ಗೌರವಿಸತೊಡಗಿದರು. ಕರ್ನಾಟಕದ ವೀರರ ಹೆಸರು ಅಂದು ಸಿಂಹಾದ್ರಿಯ ನಿವಾಸಿಗಳೆಲ್ಲರ ಹೃದಯದಲ್ಲಿ ನೆಲೆಗೊಂಡಿದ್ದಿತು.

ಎಲ್ಲ ದೇವಾಲಯಗಳಲ್ಲಿ ಅರ್ಚನೆ-ಭಜನೆಗಳಿಗಾರಂಭವಾಯಿತು. ಸಾವಿರಾರು ಅನಾಥರಿಗೆ ನಿತ್ಯವೂ ಸುಗ್ರಾಸ ಭೋಜನ ದೊರೆಯಲಾರಂಭಿಸಿತು.

ಮುಂದೆ ಅಲ್ಪಾವಕಾಶದಲ್ಲಿಯೇ ವಿಜಯನಗರದರಸಿನ ಪುರಪ್ರವೇಶದ ಮುಹೂರ್ತ ನಿಶ್ಚಿತವಾಯಿತು. ಅಂದಿನಾವೈಭವವು ವರ್ಣನೆಗೆ ಮೀರಿದುದು. ವಿಜಯನಗರದರಸಿನ ವೈಭವವು ಬಹಳವಾಗಿದ್ದಿತೆಂದು ಇತಿಹಾಸುಕಾರರು ಸಮ್ಮತಿಸಿರುವರು. ಆದರಲ್ಲಿಯೂ ಅಂದು ಪರದೇಶದಲ್ಲಿ ತಮ್ಮ ವೈಭವಗಳನ್ನು ತೋರಿಸಿ, ಜನತೆಯ ಮನವನ್ನಾಕರ್ಷಿಸಬೇಕಾಗಿದ್ದಿತು. ಅಂದಿನ ಆ ಮೆರವಣಿಗೆ ಒಳ್ಳೇ ವೈಭವಪೂರ್ಣವೂ ಉತ್ಸಾಹಭರಿತವೂ ಆಗಬೇಕೆಂದು ಮಂತ್ರಿ-ಸೇನಾಪತಿಗಳು ಬಹಳವಾಗಿ ದಕ್ಷತೆ ವಹಿಸಿದ್ದರು.

ಸಿಂಹಾದ್ರಿಯ ನಿವಾಸಿಗಳಾದರೂ ಅಂದು ತಮ್ಮ ಮನ್ನಣೆ ತೋರಿಸಲು ಹಿಂದೆ ಬೀಳಲಿಲ್ಲ. ಅನೇಕರು ಮನಸ್ಸಿಲ್ಲದಿದ್ದರೂ ಆ ಉತ್ಸವದಲ್ಲಿ ಭಾಗವಹಿಸಲೇಬೇಕಾಗಿದ್ದಿತು; ಆದರೆ ಅಂತಹ ಜನರು ಬಹಳ ಸ್ವಲ್ಪಿದ್ದರು. ಆ ನಾಲ್ಕೆಂಟು ದಿನಗಳಲ್ಲಿ ಕರ್ನಾಟಕ ಸಾರ್ವಭೌಮ ಅಲ್ಲಿಯ ಜನತೆಗೆ ತೋರಿದ ಆದರಾತಿಥ್ಯಗಳಿಂದಲೂ, ಅಲ್ಲಿಯ ದೀನರು-ದರಿದ್ರಿಗಳಿಗೆ ಇತ್ತ ಸಾಹಿತ್ಯ-ಸಾಮಗ್ರಿಗಳಿಂದಲೂ, ಅಲ್ಲನ ದೇವಾಲಯಗಳನ್ನು ಮತ್ತೆ ಬಹು ಸುಂದರವಾಗುವಂತೆ ಕಟ್ಟಿಸಿ, ಅಲ್ಲಿ ಭಜನಾರ್ಚನೆಗಳನ್ನು ನಡೆಯಿಸಿದುದರಿಂದಲೂ ಅಲ್ಲಿಯ ನಿವಾಸಿಗಳೆಲ್ಲರೂ ಬಹುತರವಾಗಿ ಸಂತುಷ್ಟರೇ ಆಗಿದ್ದರು. ಅವರು ಅಂದು ಉತ್ಸಾಹದಿಂದಲೇ ವಿಜಯನಗರದ ವೀರನರಪತಿ ಶ್ರೀಕೃಷ್ಣದೇವರಾಯನನ್ನು ಸ್ವಾಗತಿಸುವದರಲ್ಲಿ ಸನ್ನದ್ಧರಾಗಿ, 3-4 ದಿನಗಳಲ್ಲಿ ನಗರ ಶೃಂಗಾರಮಾಡಿದರು.

ನಿಜವಾಗಿಯೂ ಅಂದಿನ ಸಿಂಹಾಚಲದ ಶೋಭೆ ವರ್ಣನೀಯವಾಗಿದ್ದಿತು. ವಿಜಯಶಾಲಿಯಾದ ತಮ್ಮ ರಾಜನನ್ನೇ ಸ್ವಾಗತಿಸುವದಿದ್ದಲ್ಲಿ ಅವರು ಅದೆಷ್ಟು ಉತ್ಸಾಹತೋರಿಸಬಹುದಾಗಿದ್ದಿತೋ, ಅದಕ್ಕಿಂತಲೂ ಹೆಚ್ಚಾಗಿಯೇ ಉತ್ಸಾಹದಿಂದ ಶ್ರೀಕೃಷ್ಣದೇವರಾಯನ ಸ್ವಾಗತಕ್ಕೆ ಸಿದ್ಧರಾಗಿದ್ದರು.

ಎಲ್ಲರೂ ತಮ್ಮ ತಮ್ಮ ಮನೆಗಳನ್ನು ಉತ್ತಮೋತ್ತಮ ಬಣ್ಣಗಳಿಂದ ಅಂದವಾಗಿ ಚಿತ್ರಿಸಿ, ತಳಿರು-ತೋರಣಗಳಿಂದಲಂಕರಿಸಿದ್ದರು ಬೀದಿಗಳಲ್ಲೆಲ್ಲ ಹಂದರ ಹಾಕಿ, ಅದನ್ನು ಸುಂದರವಾಗಿ ಅಲಂಕರಿಸಿದ್ದರು ನೆಲವನ್ನೆಲ್ಲ ಗೋಮಯದಿಂದ ಸ್ವಚ್ಛವಾಗಿ ಸಾರಿಸಿ ಅಂದಚಂದದ ರಂಗವಲ್ಲಿಗಳನ್ನು ಹಾಕಿದ್ದರು. ಸುಗಂಧದ ನೀರಿನಿಂದ ಮೇಲೆ ಧಳಿ ಹೊಡೆದುದರಿಂದ, ಎಲ್ಲಿ ನೋಡಿದರೂ ಸುಗಂಧಮಯ ವಾತಾವರಣವೇ ಹರಡಿದ್ದಿತು

ಆ ದಿವಸ ಮುಂಜಾವಿನಲ್ಲಿಯೇ ಎದ್ದು ಸುವಾಸಿನಿಯರು ಅಂದವಾದ ವಸ್ತ್ರಾಭರಣಗಳಿಂದ ಭೂಷಿತರಾಗಿ, ಕನ್ನಡನಾಡೊಡೆಯನ ಆಗಮನ ನಿರೀಕ್ಷಣೆಯಲ್ಲಿ ಮಗ್ನರಾಗಿದ್ದರು. ಎಲ್ಲರೂ ಚಿನ್ನದ್ದುರಿವಾಣದಲ್ಲಿ ರನ್ನದಾರುತಿಗಳನ್ನು ಸಿದ್ಧವಾಗಿರಿಸಿ ಹಸನ್ಮುಖದಿಂದ ನಿಂತುಕೊಂಡಿದ್ದರು. ದೇವಾಲಯಗಳಲ್ಲಿ ಮಂಗಲವಾದ್ಯಗಳು ಮುಂಬೆಳಗಿನಿಂದಲೂ ಮೊಳಗಲಾರಂಭಿಸಿದ್ದವು.

ಮೆರವಣಿಗೆ ಪ್ರಭಾತ ಕಾಲಕ್ಕೇನೆ ಶಿಬಿರದಿಂದ ಹೊರಟಿತು. ಮುಂದೆ ಮುಂದೆ ಮಂಗಲ ವಾದ್ಯಗಳು ಮಂಗಲ ಗೀತಗಳನ್ನು ಪಾಡುತ್ತ ಹೊರಟಿದ್ದವು. ಅದರ ಹಿಂಬದಿಗೆ ಕುದುರೆಯ ಸವಾರರು ಶಿಸ್ತಿನಿಂದ ನಡೆದಿದ್ದರು. ಅವರ ಹಿಂದಿನಿಂದ ಕನ್ನಡಸಾಮ್ರಾಜ್ಯದರಸು ವೈಭವಪೂರ್ಣವಾಗಿ ಶೃಂಗರಿಸಿದ ಆನೆಯ ಮೇಲಣ ಚಿನ್ನರನ್ನದಂಬಾರಿಯಲ್ಲಿ ಕುಳಿತಿದ್ದನು. ಆ ಮೇಲೆ ವಿಜಯನಗರ ಸಾಮ್ರಾಜ್ಯದ ಅಧಿಕಾರಿಗಳು ಸುವಸ್ತ್ರಾಭರಣಗಳಿಂದ ಭೂಷಿತರಾಗಿ ಹೊರಟಿದ್ದರು. ಈ ಮೆರವಣಿಗೆ ಸಾವಕಾಶವಾಗಿ, ಮಾರ್ಗದಲ್ಲಿನ ಜನರ ಮನ್ನಣೆಗಳನ್ನು ಸ್ವೀಕರಿಸುತ್ತ ಸಿಂಹಾಚಲದ ಹೆಬ್ಬಾಗಿಲಿಗೆ ಒಂದೂವರೆ ಪ್ರಹರದ ಸುಮಾರಕ್ಕೆ ತಲುಪಿತು. ಕೂಡಲೆ ಅಲ್ಲಿ ಆತುರದಿಂದ ನೆರೆದ ಸುವಾಸಿನಿಯರು ಕನ್ನಡ ಸಮ್ರಾಟನಿಗೆ ಕುಂಕುಮವಿಟ್ಟು, ಕದಲಾರುತಿ-ಮಂಗಲಾರುತಿ ಬೆಳಗಿದರು. ಅಲ್ಲಿ ನೆರೆದ ಪಟ್ಟಣದ ಪ್ರಮುಖರು ವಂದನೆಪೂರ್ವಕವಾಗಿ ಸ್ವಾಗತಿಸಿದರು. ಸಿಂಹಾದ್ರಿಯ ವಾದ್ಯಗಳು ಮಂಗಲಗೀತಗಳೊಂದಿಗೆ ವೀರನಗರಪತಿಯನ್ನು ಸ್ವಾಗತಿಸಿದವು.

ಅಲ್ಲಿಂದ ಮೆರವಣಿಗೆ ಕೋಟೆಯನ್ನು ಪ್ರವೇಶಿಸಿತು ಆಗಿನ ಆ ಅಪೂರ್ವ ವೈಭವವನ್ನು ನೋಡಿದವರೇ ಧನ್ಯರು ಅವರ ಕಣ್ಣುಗಳೇ

ಸಾರ್ಥಕವಾದುವು. ಆ ಶ್ರೇಷ್ಠ ದೊರೆ ವೀರನರಪತಿ ಶ್ರೀಕೃಷ್ಣದೇವರಾಯನ ಒಡನಾಡಿಯಾಗಿ, ಆತನ ವೀರ ಸೈನಿಕರಾಗಿ ಬಾಳಿದ, ತಮ್ಮ ಪ್ರಭುವಿನ ಸಲುವಾಗಿ ತನುಮನ ಧನಗಳನ್ನರ್ಪಿಸಿದ, ಕನ್ನಡ ನಾಡಿನ ಕೀರ್ತಿಪ್ರಭೆಯಿಂದ ಭರತಖಂಡವನ್ನೆಲ್ಲ ಬೆಳಗಿದ, ವಿಜಯನಗರದ ವಿಜಯ ಸ್ಮರಣೆ ಕನ್ನಡಿಗರ ಹೃದಯದಲ್ಲಿ ಚಿರಸ್ಥಾಯಿಯಾಗುವಂತೆ ಮಾಡಿದ ಅಂದಿನ ಆ ಕನ್ನಡ ನಾಡ ಜೀವಿಗಳೇ ಪುಣ್ಯವಂತರು; ಅವರೇ ಕನ್ನಡ ಮಾತೆಯ ಸತ್ಪುತ್ರರು; ಮಾತೆಯ ಮನ್ನಣೆಗೆ ಪಾತ್ರರಾದವರು. ವಿಜಯನಗರದಲ್ಲಿದ್ದಾಗಲೇ ಆತ್ಯಂತಿಕ ಸೌಖ್ಯಭೋಗದಿಂದ ಹೃಷ್ಟರು. ಅದರಲ್ಲಿಯೂ ವೀರನರಪತಿಯೊಡನೆ ಎಲ್ಲೆಲ್ಲಿಯೂ ತಮ್ಮ ವಿಜಯಧ್ವಜವನ್ನು ಮೆರೆಯಿಸುತ್ತ, ಸಿಂಹಾದ್ರಿಯನ್ನು ಕೈವಶ ಮಾಡಿಕೊಂಡು, ಗಜಪತಿಯನ್ನೋಡಿಸಿ, ಸಿಂಹಾಚಲದ ಜನತೆಯ ಆದರೋತ್ಸಾಹಗಳಿಗೆ ಕಾರಣೀಭೂತರಾಗಿ, ಹೆಮ್ಮೆಯಿಂದ ಸಿಂಹಾಚಲ ಪ್ರವೇಶ ಮಾಡಿ, ಅವರಿಂದ ಬಹಳವಾಗಿ ಮನ್ನಣೆ ಹೊಂದುವಾಗ್ಗೆ ಆ ವೀರ ಕನ್ನಡಿಗರ, ಶೂರ ಕನ್ನಡಿಗರ, ಧೀರ ಕನ್ನಡಿಗರ ಹೃದಯಗಳು ಆನಂದದಿಂದ ಉಕ್ಕೇರಿ ಹೋಗಿರಬಹುದಲ್ಲವೆ? ಮಾತೃಭೂಮಿಯ ಹೆಸರು ದಿಗಂತರಗಳಿಗೂ ಹರಡಿತು; ವಿಜಯನಗರದ ವಿಜಯಪತಾಕೆ ಎಲ್ಲೆಡೆಯಲ್ಲೂ ಹಾರಾಡಿತು; ಕನ್ನಡಿಗರು ಎಲ್ಲರ ಮನ್ನಣೆಗೆ ಪಾತ್ರರಾದರು. ಇಂತು ತಮ್ಮ ಜೀವನೋಚ್ಚ ಧ್ಯೇಯವನ್ನೇ ಕೈವಶ ಮಾಡಿದುದಕ್ಕಾಗಿ ಆ ಭಾಗ್ಯಶಾಲಿ ಕನ್ನಡಿಗರು, ಆ ಮಹತಿವೆತ್ತ ಕನ್ನಡಿಗರು, ಆ ಕೀರ್ತಿಶೇಷ ಕನ್ನಡಿಗರು ಹರ್ಷಮುದದಿಂದ ಕುಣಿದಾಡಿರಬಹುದಲ್ಲವೆ?

ಅಂದಿನ ಆ ಅಪೂರ್ವ ವೈಭವವನ್ನು ಕನ್ನಡಿಗರು ಕಣ್ತುಂಬ ನೋಡಿ ಕಣ್ಸಾರ್ಥಕತೆ ಮಾಡಿಕೊಂಡರು. ಮನದಣೀ ನೋಡಿ ಜನುಮ ಸಾಫಲ್ಯ ಸಾಧಿಸಿದರು.

ಸಿಂಹಾಚಲದ ಬೀದಿ ಬೀದಿಗಳಲ್ಲಿ ಮೆರವಣಿಗೆ ಹೊರಟಾಗ್ಗೆ ಸಿಂಹಾಚಲ ನಿವಾಸಿಗಳು ಕನ್ನಡ ಪ್ರಭುವಿಗಿತ್ತ ಮನ್ನಣೆ ಬಣ್ಣನೆಗೆ ಮೀರಿತು ಅಲ್ಲಲ್ಲಿ ನರಪತಿಯ ಮೇಲೆ ಪೂಮಳೆಗರೆಯುತ್ತಲಿದ್ದರು. ಅಲ್ಲಿನ ಪುರಸುಂದರಿಯರು ನರಪತಿಗೆ ಆರುತಿ ಎತ್ತಿದರು, ಬಾಯ್ತುಂಬ ಹರಸಿದರು, ದೃಷ್ಟಿ ಮುರಿದರು. ಆ ಪ್ರಭುವಿನ ಮನ್ಮಥಸದೃಶ ರೂಪವನ್ನು ಮನದಣಿ ನೋಡಿ ಆನಂದಿತರಾದರು.

ಮೆರವಣಿಗೆ ಎರಡೂವರೆ ಪ್ರಹರದ ಸಮಯಕ್ಕೆ ನಾಗರಿಕರು ಶೃಂಗರಿಸಿದ್ದ ಓಲಗ ಚಾವಡಿಗೆ ತಲುಪಿತು. ಅಲ್ಲಿ ಅನೇಕ ಮುಂದಾಳುಗಳು ವೀರನರ

ಪತಿಯನ್ನು ಆದರಪೂರ್ವಕವಾಗಿ ಸ್ವಾಗತಿಸಿದರು. ಅಪ್ಪಾಜಿ, ರಾಮಲಿಂಗ, ರಾಮಕೃಷ್ಣ ಮುಂತಾದ ವಿಜಯನಗರದ ವಿದ್ವನ್ಮಣಿಗಳು, ವೀರರತ್ನಗಳು, ವಿನೋದ ಚತುರರು ಅಲ್ಲಿ ಅತ್ಯಾನಂದಪೂರ್ವಕ ಸ್ವಾಗತ ಪಡೆದರು.

ನಗರದ ಮುಂದಾಳುಗಳು ನರಪತಿಯ ಗುಣಗಾನ ಮಾಡಿದರು ಒಬ್ಬಿಬ್ಬರು ತಮ್ಮನ್ನು ಸೋತ ಗುಲಾಮರ ದೃಷ್ಟಿಯಿಂದ ನೋಡದೆ ಆದರ ಪೂರ್ವಕ ನೋಡಬೇಕೆಂದು ಬಿನ್ನವಿಸಿಕೊಂಡರು. ಇನ್ನು ಬೇರೆ ಕೆಲವರು ನರಪತಿಯು ಆ ವರೆಗೆ ತಮಗೆ ತೋರಿದ ಆದರಕ್ಕೆ ನರಪತಿಯನ್ನಭಿನಂದಿಸಿ ತಮ್ಮ ರಾಜನನ್ನು ಮಿತ್ರದೃಷ್ಟಿಯಿಂದ ಉಪಚರಿಸಬೇಕೆಂದು ಸೂಚಿಸಿದರು.

ಆ ಮೇಲೆ ಅಪ್ಪಾಜಿ—ವಿಜಯನಗರದ ಚತುರಮಂತ್ರಿಪುಂಗವನು—ಎದ್ದು ತನ್ನ ಪ್ರೌಢಭಾಷೆಯಿಂದಲೂ, ವಿಚಾರ ಪ್ರಫುಲ್ಲತೆಯಿಂದಲೂ ಸಿಂಹಾದ್ರಿಯ ಜನತೆಯ ತಲೆದೂಗಿಸಿ, ಅವರೊಡನೆ ಮಿತ್ರ ಬಾವನೆಯಿಂದ ನಡೆದುಕೊಳ್ಳುವ ಆಶ್ವಾಸನೆಯಿತ್ತನು.

ಕೊನೆಗೆ ನರಪತಿಯು ಒಂದು ಚಿಕ್ಕ ಭಾಷಣ ಮಾಡಿದನು. ದಿಗ್ವಿಜಯವೆಂದರೆ, ಅನ್ಯ ಅರಸರ ಅಸ್ತಿತ್ವ ಅಳಿಸಿಬಿಡುವದಲ್ಲವೆಂದೂ, ಪರಕೀಯ ಪ್ರಜೆರನ್ನು ಪೂರ್ಣ ಗುಲಾಮರನ್ನಾಗಿ ಮಾಡುವುದಲ್ಲವೆಂದೂ, ಉಳಿದ ನಾಡುಗಳನ್ನು ನಾಶಮಾಡುವುದಲ್ಲವೆಂದೂ ಹೇಳಿದನು. ಆದರಲ್ಲಿಯೂ ತಾನು ಹೊರಟುದು ಭಾರತದ ಅರಸರಲ್ಲೆಲ್ಲ ಮೈತ್ರಿ ಸಂಪಾದಿಸಿ ಭಾರತದ ವೀರರಲ್ಲಿ ಒಕ್ಕಟ್ಟನ್ನುಂಟುಮಾಡುವುದಕ್ಕಾಗಿಯೇ ಎಂದು ತಿಳಿಸಿದನು. ಗಜಪತಿ ಮುಹಮ್ಮದೀಯರೊಡನೆ ಗುಪ್ತ ಸಂಚು ನಡೆಯಿಸಿದುದರ ಮೂಲಕವೇ ಅವನ ಶಾಸನ ಮಾಡುವದಕ್ಕಾಗಿ ಅಲ್ಲಿ ಬಂದುದೆಂದೂ ಹೇಳಿದನು. ಗಜಪತಿ ತನ್ನಾ ಹೀನ ವರ್ತನೆಗೆ ಹೇಯಗೊಂಡು ಹುರುಳಿಲ್ಲದ ಹೀನತನವನ್ನು ಹೋಗಲಾಡಿಸಿ ತನ್ನ ಮಿತ್ರನಾಗುವುದಾದರೆ ಅದರಿಂದ ತನಗೆ ಆನಂದವೇ ಎಂದು ಸೂಚಿಸಿದನು.

---

## ೨ ಸಿಂಹಾವಲೋಕನ

ಕ್ರಿಸ್ತ ಶಕದ ಸಾವಿರದೈದು ನೂರಾ ಒಂಬತ್ತನೆಯ ವರುಷ. ಕನ್ನಡಿಗರ ಹೆಮ್ಮೆಯದಾದ ವಿಜಯನಗರ ಸಾಮ್ರಾಜ್ಯವು ಉನ್ನತಿಯತ್ತ ಮುಂದೆ ಸಾಗಿದ್ದತು. ಸಂಗಮ ಮನೆತನದವರಾದ ಹುಕ್ಕ ಬುಕ್ಕರು ಶ್ರೀವಿದ್ಯಾರಣ್ಯರ ಸಹಾಯದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ ಆಳಿದರು.

ಅವರ ಹಿಂದೆ ಹಲವು ಸಂಗಮ ಅರಸರು ಆಳುತ್ತಲೆ ಮುಂದೆ ಸಾಳುವ ಅರಸರು ಅದನ್ನು ಕೈವಶಮಾಡಿಕೊಂಡರು. ಅವರಾದರೂ ಒಳ್ಳೇ ವೈಭವದಿಂದ ರಾಜ್ಯವಾಳಿ, ಕನ್ನಡಿಗರ ಉನ್ನತಿಗೆ ಶಕ್ತಿಮೀರಿ ಯತ್ನಿಸಿದರು. ಆಗ್ಗೆಯೂ ವಿಜಯನಗರದ ವೈಭವವು ವಿಶೇಷವಾಗಿ ಬೆಳೆಯಿತು. ಅನೇಕ ಪರಕೀಯ ಪ್ರವಾಸಿಗರು ಭಾರತಕ್ಕೆ ಬಂದು ವಿಜಯನಗರದ ವೈಭವವನ್ನು ನೋಡಿ ಬಹಳ ಆನಂದಿತರಾದ ಉದಾಹರಣೆಗಳು ವಿಪುಲವಾಗಿವೆ. ಸಾಳುವರಾಳಿಕೆಯ ಕೊನೆಯ ಭಾಗದಲ್ಲಿ ಇಟಲಿಯ ವರ್ಥೆಮನೆಂಬ ಪ್ರವಾಸಿ ಬರೆದ ವಿಜಯಪುರದ ಒಂದು ಬಣ್ಣನೆ ಹೀಗಿದೆ,

"ವಿಜಯನಗರವು ಅತಿ ವಿಸ್ತಾರವೂ, ಭದ್ರವೂ ಆದ ದೊಡ್ಡ ಪಟ್ಟಣವಾಗಿರುತ್ತದೆ. ಈ ರಾಜಧಾನಿಯು ಸಕಲ ಸಂಪತ್ತುಗಳಿಂದ ಸಮೃದ್ಧವಾದುದಿದೆ ಸುತ್ತಲಿನ ಪ್ರದೇಶವು ಬಹಳ ರಮಣೀಯವಾದುದಿದೆ. ಹವಾಮಾನವಂತೂ ಅತ್ಯುತ್ತಮವಾಗಿದೆ. ಇಲ್ಲಿಯ ಅರಸನು ತನ್ನ ಬಳಿಯಲ್ಲಿ ಯಾವಾಗಲೂ ೪೦೦೦೦ ಕುದುರೆಯಾಳುಗಳನ್ನೂ ೪೦೦ ಗಜಪತಿಗಳನ್ನೂ ಇರಿಸಿರುತ್ತಾನೆ. ಒಂದು ಆನೆಯ ಮೇಲೆ ೬-೭ ಜನರು ಏರಲು ಬರುವಂತಿದೆ ಸಮರದಲ್ಲಿ ಆನೆಯ ಸೊಂಡಿಲುಗಳಿಗೆ ಹದನವಾದ ಕತ್ತಿಗಳನ್ನು ಕಟ್ಟುತ್ತಾರೆ.

"ರಾಜನು ಮೊಳವುದ್ದಾದ ಉತ್ಕೃಷ್ಟ ಜರತಾರೀ ಟೊಪ್ಪಿಗೆ ಧರಿಸುತ್ತಾನೆ. ಆತನ ಕುದುರೆಯ ಅಲಂಕಾರಗಳ ಬೆಲೆಯೇ ಗಣನೆಗೆ ಮೀರಿದುದಿದೆ. ನಮ್ಮಲ್ಲಿಯ ಎಷ್ಟೋ ಪಟ್ಟಣಗಳನ್ನು ಆ ಕುದುರೆಯಾಭರಣಗಳಿಂದ ಕೊಳ್ಳಬಹುದು ......"

ಹೀಗೆ ಪರದೇಶದವರು ಸ್ತುತಿಸಿದರೆಂದಲ್ಲಿ ಆ ಸಾಮ್ರಾಜ್ಯದ ವೈಭವವನ್ನು ಊಹಿಸಿಯೇ ಅರಿಯಬೇಕು. ಸಾಳುವ ಮನೆತನದವರು ವೈಭವದಿಂದ ರಾಜ್ಯವಾಳುತ್ತಿರಲು, ತುಳು ಮನೆತನದವನಾದ ವೀರನರಸಿಂಹ ೧೫೦೩ರಲ್ಲಿ ಅದನ್ನು ಸೆಳೆದುಕೊಂಡು ತಾನೇ ಆಳಹತ್ತಿದನು.

ವೀರನರಸಿಂಹನ ಈ ಅತಿಕ್ರಮಣವು ಜನತೆಗೆ ಸಮ್ಮತವಾಗಲಿಲ್ಲ. ಅಸಂತೋಷ ಜನತೆಯಲ್ಲಿ ತಲೆದೋರತೊಡಗಿತು. ಪ್ರಾಂತಾಧಿಕಾರಿಗಳೂ ಮಂಡಲೇಶ್ವರರೂ ಪುಂಡಾಟಿಕೆ ಹೂಡಿದರು. ಇದೇ ಸಮಯ ಕಾಯುತ್ತಲಿದ್ದ ಓರಿಸದ ಗಜಪತಿಯು ವಿಜಯನಗರ ರಾಜ್ಯವನ್ನು ಪ್ರವೇಸಿಸಿ, ಕೊಂಡವೀಡು, ಉದಯಗಿರಿ ಮುಂತಾದ ಕೋಟೆಗಳನ್ನು ಕೈವಶ ಮಾಡಿಕೊಂಡನು. ಅತ್ತ ಮುಹಮ್ಮದೀಯರೂ ತೊಂದರೆ ಕೊಡಹತ್ತಿದರು. ಹೀಗೆ ವೀರ ನರಸಿಂಹನಿಗೆ ಮನೆಯಲ್ಲಿಯೂ ಹೊರಗೂ ಪೀಡೆಗಳು ಬಹಳವಾದುವು. ಅವನು

ಎರಡು-ಮೂರು ವರ್ಷಗಳ ವರೆಗೆ ಅವಿಶ್ರಾಂತವಾಗಿ ಹೋರಾಡಿ ಎಲ್ಲ ಪುಂಡಾಟಿಕೆಗಳನ್ನೂ ಪರಕೀಯರ ಆಕ್ರಮಣಗಳನ್ನೂ ಶಾಂತಗೊಳಿಸಿದನು. ಕಂಚಿ, ಕಾಲಹಸ್ತಿ ಮುಂತಾದ ಹಲವು ಪುಣ್ಯಸ್ಥಳಗಳಲ್ಲಿ ದೇವಾಲಯಗಳಿಗೆ ದಾನವಿತ್ತನು. ಹೀಗೆ ಅವನು ಮೂರು ವರ್ಷಗಳ ವರೆಗೆ ಸತತವಾಗಿ ಯತ್ನಿಸಿ ಸಾಮ್ರಾಜ್ಯದಲ್ಲಿ ಶಾಂತತೆ ಸ್ಥಾಪಿಸಿದನು; ಆದರೆ ಅವನ್ನು ಬಹಳಕಾಲ ಅನುಭವಿಸುವ ಯೋಗವಿರಲಿಲ್ಲ. ಅವನು ಅದೇ ವರುಷವೇ ಅಂದರೆ ಕ್ರಿ. ಶ. ೧೫೦೯ನೆಯ ವರುಷವೇ ಬೇನೆ ಬಿದ್ದನು. ಎಷ್ಟು ಔಷಧೋಪಚಾರಗಳಾದರೂ ಉಳಿಯುವ ಚಿಹ್ನ ತೋರಲಿಲ್ಲ. ಆತನಿಗೆ ಮರಣಕಾಲದಲ್ಲಿ ಒಂದು ಭಯವು ಬಂದೊದಗಿತು. ತಾನು ಅಷ್ಟು ಕಷ್ಟ-ನಷ್ಟಗಳನ್ನು ಸಹಿಸಿ ಸ್ಥಾಪಿಸಿದ ಸಾಮ್ರಾಜ್ಯವನ್ನು ತಾನಿಲ್ಲದಿದ್ದರೂ ತನ್ನ ಮಗನಾದರೂ ಉಪಭೋಗಿಸಬೇಕೆಂದು ಬಹಳವಾಗಿ ಬಯಸುತ್ತಲಿದ್ದನು; ಆದರೆ ತಾನು ಸಾಯುತ್ತಲೇ ಸಿಂಹಾಸನವು ತನ್ನ ಮಗನಿಗೆ ಸಿಕ್ಕದೆಂಬ ಭೀತಿ ಅವನನ್ನಾವರಿಸಿಕೊಂಡಿತು.

ಒಬ್ಬ ಅರಸು ಮರಣವೈದುತ್ತಲೆ ಅವನ ಮಗನು ಸಮರ್ಥನಿದ್ದರೆ ಮಾತ್ರ ಸಿಂಹಾಸನವು ಅವನಿಗೆ ಉಳಿವುದು. ಅವನು ಅಪ್ರಬುದ್ಧನಾಗಲಿ, ಅವಿವೇಕನಾಗಲಿ, ಅಪ್ರಬಲನಾಗಲಿ ಇದ್ದುದಾದರೆ ರಾಜ್ಯಲಕ್ಷ್ಮಿ ಯಾವನೊಬ್ಬ ಪ್ರಬಲ ಸಾಮಂತ ಸರದಾರನನ್ನಾಗಲಿ, ರಾಜಬಂಧುವನ್ನಾಗಲಿ ಆಶ್ರಯಿಸುವುದು ಸ್ವಾಭಾವಿಕವು. ಇದೇ ಸ್ಥಿತಿ ಅಂದು ವೀರ ನರಸಿಂಹನ ರಾಜ್ಯದಲ್ಲಿದ್ದಿತು. ವೀರನರಸಿಂಹನಿಗೆ ಒಬ್ಬ ಮಗನಿದ್ದನು; ಆದರೆ ಜಗತ್ತಿನ ರೀತಿ-ನೀತಿಗಳನ್ನಾಗಲಿ, ರಾಜನೀತಿಯನ್ನಾಗಲಿ, ಯುದ್ಧಕೌಶಲ್ಯವನ್ನಾಗಲಿ ಅರಿಯುವಷ್ಟು ಪ್ರಬುದ್ಧ ಅವನಾಗಿರಲಿಲ್ಲ. ಇನ್ನೂ ಚಿಕ್ಕ ಬಾಲಕ-ಬರಿಯ ಎಂಟು ವರುಷಗಳು ಮಾತ್ರ. ಅಂತಹ ಆ ಚಿಕ್ಕಮಗುವಿನಿಂದ ತನ್ನ ತಂದೆಯ ಸಿಂಹಾಸನ ಕಾಯ್ದುಕೊಳ್ಳುವುದೆಂದೂ ಸಾಧ್ಯವಿಲ್ಲವೆಂದು ವೀರನರಸಿಂಹನರಿತಿದ್ದನು. ಇಷ್ಟೇ ಕಾರಣದ ಮೂಲಕವಾಗಿದ್ದರೆ ವೀರನರಸಿಂಹನು ಭಯಪಡುತ್ತಲಿರಲಿಲ್ಲ. ಏಕೆಂದರೆ, ಸಾಳುವ ತಿಮ್ಮನು ಅವನ ಮಂತ್ರಿಯಿದ್ದನು. ಈತನೇ ವಿಜಯನಗರದ ಸುಪ್ರಸಿದ್ಧ ರಾಜನೀತಿ ನಿಪುಣ, ಚತುರಮಂತ್ರಿ ಅಪ್ಪಾಜಿಯು. ಅಪ್ಪಾಜಿಯ ರಾಜನಿಷ್ಠೆಯ ಬಗ್ಗೆಯಾಗಲಿ, ಅವನ ಚತುರಬುದ್ಧಿಮತ್ತೆಯ ವಿಷಯಕವಾಗಿಯಾಗಲಿ ವೀರನರಸಿಂಹನಿಗೆ ಕಿಂಚಿತ್ತಾದರೂ ಸಂದೇಹವಿರಲಿಲ್ಲ. ಅಪ್ಪಾಜಿಯು ವಿಜಯನಗರದರಸುಗಳ ಏಕನಿಷ್ಠ ಸೇವಕನಿರುವನೆಂದು ವೀರನರಸಿಂಹನರಿತಿದ್ದನು. ಅವನು ತನಗೆ ಎಂದೂ ಎರಡು ಬಗೆಯಲಾರನೆಂಬ ಬಗ್ಗೆ ಅವನಿಗೆ ಭರವಸೆಯಿದ್ದಿತು. ಹಾಗೆಯೇ ಅಪ್ಪಾಜಿ ಮನಸ್ಸು ಮಾಡಿದರೆ

ಎಂತಹ ಸಂಕಟಗಳನ್ನಾದರೂ ಎದುರಿಸಿ ತನ್ನ ಮಗನಿಗೇನೇ ಪಟ್ಟವನ್ನು ಕಾಯ್ದಿಡುವನೆಂಬ ಬಗ್ಗೆ ಅವನಿಗೆ ನಂಬುಗೆಯಿದ್ದಿತು. ಅಪ್ಪಾಜಿಯಲ್ಲಿ ವಿಶ್ವಾಸವಿಟ್ಟು, ಮಗನನ್ನು ಅಪ್ಪಾಜಿಯ ಕರದಲ್ಲಿ ಕೊಟ್ಟು, ಎಲ್ಲ ಭಾರವನ್ನೂ ಅಪ್ಪಾಜಿಯ ಮೇಲೆ ಬಿಟ್ಟು ಹೋಗಿದ್ದರೆ ತನ್ನ ಮಗನ ಹಾನಿಯಾಗದೆಂದು ವೀರನರಸಿಂಹನ ತಿಳಿವಿದ್ದಿತು; ಆದರೆ—ಆದರೆ ವೀರನರಸಿಂಹನ ಈ ಎಲ್ಲ ವಿಶ್ವಾಸ-ನಂಬುಗೆಗಳಿಗೆ ಬೊಡ್ಡಿಗೊಡಲಿಯೊಂದಿದ್ದಿತು. ಅಪ್ಪಾಜಿಯಂತಹ ಏಕನಿಷ್ಠ ಸ್ವಾಮಿಭಕ್ತನಾದ ಸೇವಕನನ್ನು ಕೂಡ ಹಿಡಿದೆಳೆಯುವ ಪ್ರಬಲ ವಾದ ಸಾಧನವೊಂದಿದ್ದಿತು. ಆ ಮೂಲಕವಾಗಿಯೆ ತನ್ನ ಮಗನಿಗೆ ದೊರೆ ತನ ದೊರೆಯದೆ ಬೇರೆಯವರಿಗೆ ದೊರೆಯಬಹುದೆಂಬ ಭಯವು ಅವನನ್ನಾ-ವರಿಸಿಕೊಂಡಿದ್ದಿತು. ಅಂತಹ ವಿಘ್ನವೆಂದರೆ ಕೃಷ್ಣದೇವರಾಯನು.

ವೀರನರಪತಿ ಶ್ರೀಕೃಷ್ಣದೇವರಾಯನ ಹೆಸರು ಕನ್ನಡಿಗರ ಹೃದಯ ದಲ್ಲಿ ಕೊರೆದು ಮನದಲ್ಲಿ ಮೂಡಿ ಹೋಗಿರುವದು. ವಿಜಯನಗರ ಸಾಮ್ರಾಜ್ಯದ ವಿಜಯಪತಾಕೆಯನ್ನು ಎಲ್ಲೆಡೆಯಲ್ಲೂ ಮೆರೆಯಿಸಿದ ವೀರನಿವ; ಕನ್ನಡಿಗರ ಶೌರ್ಯವನ್ನು ಭಾರತೀಯರೆಲ್ಲರ ನಿದರ್ಶನಕ್ಕೆ ತಂದುಕೊಟ್ಟ ಶೂರನಿವ; ಕರ್ನಾಟಕದ ಹೆಸರು ಭಾರತದಿತಿಹಾಸದಲ್ಲಿ ಕೊನೆಯವರೆಗೆ ಸ್ಥಿರವಾಗುವಂತೆ ಮಾಡಿದ ಧೀರನಿವ; ತನ್ನ ಅನುಪಮ ಸಾಹಸದಿಂದಲೂ ಅಸಮ ಭುಜಬಲದಿಂದಲೂ ಉತ್ತರ ಹಿಂದುಸ್ಥಾನದ ಅನೇಕ ವೀರ-ಶೂರ ಅರಸರುಗಳನ್ನು ಮಣಿಸಿದ ರಾಜಮಣಿಯಿವ; ವಿಜನಗರದ ಘಾತಕ್ಕು ದ್ಯುಕ್ತರಾಗಿದ್ದ ಅನೇಕ ಮಹಮ್ಮದೀಯ ಅರಸರುಗಳನ್ನು ಮಣ್ಣುಮುಕ್ಕಿ ಸಿದ ರಾಜಶ್ರೇಷ್ಠನಿವ. ಈತನು ವೀರನರಸಿಂಹನ ತಮ್ಮನು. ಈ ತಮ್ಮನ ಸಲುವಾಗಿಯೇ ವೀರನರಸಿಂಹನಿಗೆ ಭೀತಿಯುಂಟಾಗಿದ್ದಿತು. ತನ್ನ ಅಂತ ವಾಗುತ್ತಲೇ ಸಿಂಹಾಸನವು ತನ್ನ ಮಗನಿಗೆ ದೊರಕದೆ, ತಮ್ಮನಾದ ಕೃಷ್ಣ ದೇವರಾಯನಿಗೆ ಹೋಗಬಹುದೆಂಬದೇ ಅವನ ಅಂಜಿಕೆಯಾಗಿದ್ದಿತು. ಅದಕ್ಕೆ ತಕ್ಕ ಆಧಾರಗಳೂ ಅವನ ಬಳಿಯಲ್ಲಿದ್ದುವು.

ಕೃಷ್ಣದೇವರಾಯನೆಂದರೆ, ಪ್ರಜೆಗಳಿಗೆ ಅಚ್ಚುಮೆಚ್ಚಿನವನಾಗಿದ್ದನು. ಅವನನ್ನು ಕಂಡ ಪ್ರತಿಯೊಬ್ಬನೂ ಅವನಿಗೆ ಮಣಿಯದಿರುತ್ತಿರಲಿಲ್ಲ. ಅವನ ಗುಣಗಳನ್ನರಿತ ಪ್ರತಿಯೊಬ್ಬನೂ ಅವನನ್ನು ಹೊಗಳದಿರುತ್ತಿರಲಿಲ್ಲ ಅವನ ಶೂರತನವನ್ನರಿತ ಪ್ರತಿಯೊಬ್ಬನೂ ಅವನ ಶೌರ್ಯವನ್ನು ನೆನೆದು ಉದ್ರೇಕಗೊಳ್ಳದಿರುತ್ತಿರಲಿಲ್ಲ. ಕೃಷ್ಣದೇವರಾಯನು ರಾಜಕಾರ್ಯದಲ್ಲಿ ನಿಪುಣನಾಗಿದ್ದನು; ಶೂರರಲ್ಲಿ ಶ್ರೇಷ್ಠನಾಗಿದ್ದನು; ಉದಾರಿಗಳಲ್ಲಿ ಹಿರಿಯ

ನಾಗಿದ್ದನು; ಪ್ರಜಾದಕ್ಷತೆಯಲ್ಲಿ ಮಿಂರಿದವನಾಗಿದ್ದನು. ಪ್ರಜೆಗಳೆಲ್ಲರೂ ಅವನನ್ನು ತಮ್ಮ ಹಿತಕರ್ತೃವೆಂದೇ ತಿಳಿದಿದ್ದರು. ರಾಜನೀತಿನಿಪುಣ ಅಪ್ಪಾಜಿ ಕೂಡ ಕೃಷ್ಣದೇವರಾಯನ ಮಹತಿಗೆ ಮನಸೋತಿದ್ದನು; ಅವನ ವಿದ್ವತ್ತಿಗೆ ತಲೆದೂಗಿದ್ದನು; ಅವನ ಔದಾರ್ಯಕ್ಕೆ ಅಚ್ಚರಿಪಡುತ್ತಿದ್ದನು.

ವೀರನರಸಿಂಹನು ಕೃಷ್ಣದೇವರಾಯನನ್ನು ಪೂರ್ಣವಾಗರಿತಿದ್ದನು; ಅಂತೆಯೇ ಭೀತನಾಗಿದ್ದನು. ಈ ಸಂಗತಿಯ ಬಗ್ಗೆ ಅವನು ಮೊದಲೇ ಯೋಚಿಸಿರಲಿಲ್ಲ; ಏಕೆಂದರೆ, ರಾಜ್ಯವಾಕ್ರಮಿಸುವ ಪೂರ್ವದಲ್ಲಿ ರಾಜ್ಯವನ್ನು ವಶಪಡಿಸಿಕೊಳ್ಳುವ ವಿಚಾರವೇ ಸಾಕಷ್ಟಾಗಿದ್ದಿತು. ವಶಮಾಡಿಕೊಂಡೊಡ ನೆಯೇ ಪುಂಡಾಟಿಕೆ-ಬಂಡಾಟಿಕೆಗಳನ್ನು ಸದೆಬಡೆಯುವದರಲ್ಲಿ ಎರಡು-ಮೂರು ವರುಷ ಕಳೆದು ಹೋಯಿತು. ಇನ್ನು ರಾಜ್ಯದತ್ತ ಚಿತ್ತವೀಯ ಬೇಕೆನ್ನುವಷ್ಟರಲ್ಲಿ ಮರಣ ಸಮೀಪಿಸಿತು ಹೀಗೆ ಮರಣಾಸನ್ನನಾಗುತ್ತಲೇ ಮಗನ ಬಗ್ಗೆ ಯೋಚಿಸಹತ್ತಿದನು. ತಾನು ಇನ್ನೂ ಬದುಕಿ ತನ್ನ ಮಗನಿಗೇ ಪಟ್ಟವುಳಿಯುವಂತೆ ಹಂಚಿಕೆಹಾಕಬೇಕೆಂದು ಅವನ ಮನವಿದ್ದಿತು, ಆದರೆ ದೈ-ವೀಯೋಗವೇ ಬೇರೆಯಾಯಿತು. ಪರಮೇಶ್ವರನ ಸಂಕೇತವನ್ನರಿತವರಾರು? ಕನ್ನಡಿಗರನ್ನು ಸಾಳುವ ಮನೆತನದವರಿಂದ ತಪ್ಪಿಸಿ ಶ್ರೀಕೃಷ್ಣದೇವರಾಯ ನಂತಹ ವೀರನರಪತಿಯ ಕೈಗೆ ಕೊಟ್ಟು ಕನ್ನಡಿಗರಿಗೆ ಎಲ್ಲೆಡೆಗಳಿಂದಲೂ ಮನ್ನಣೆ ದೊರೆಯುವಂತೆ ಮಾಡುವುದಿದ್ದಿರಬೇಕೆಂದು ತೋರುತ್ತದೆ. ಅದಕ್ಕೆ ವೀರನರಸಿಂಹನನ್ನು ಸೂತ್ರನನ್ನಾಗಿ ಉಪಯೋಗಿಸಿದನು ಶ್ರೀಕೃಷ್ಣದೇವ ರಾಯನೇ ಸಾಳುವರಿಂದ ರಾಜ್ಯ ಕಸಿದುಕೊಂಡಿದ್ದರೆ, ಅದರಿಂದ ಶ್ರೀಕೃಷ್ಣ ದೇವರಾಯನ ಮಹತಿಗೊಂದು ಕುಂದು ಬರುತ್ತಲಿದ್ದಿತು. ಅವನ ಚಾರಿತ್ರ್ಯ ಕ್ಕೊಂದು ಕಲಂಕವುಂಟಾಗುತ್ತಲಿದ್ದಿತು. ಅವನ ಅಂತಹ ಅತೀವ ಮೇಲ್ಮೆ ಯಲ್ಲೊಂದು ಕೀಳ್ಮೆ ಕಾಲಿಡುತ್ತಲಿದ್ದಿತು. ಅವನ ಅತ್ಯಂತ ತೇಜಸ್ವೀ ಪ್ರಭಾವ ಶಾಲೀ ಕೀರ್ತಿಯಲ್ಲೊಂದು ಕಪ್ಪು ಕಲೆಯುಳಿಯುತ್ತಲಿದ್ದಿತು. ಆ ಮೂಲಕ ವಾಗಿಯೇ ವೀರನರಸಿಂಹನನ್ನು ನಿರ್ಮಿಸಿ ಆ ಎಲ್ಲ ನಿಂದೆ, ದೋಷ, ಕುಂದು-ಕೊರತೆಗಳಿಗೆ ಅವನನ್ನು ಕಾರಣನಾಗಿ ಮಾಡಿರಬಹುದು ಅಂತೆಯೇ ವೀರನರಸಿಂಹನು ಸಾಳುವರಿಂದ ರಾಜ್ಯಕಸಿದು, ಕಂಟಕಗಳನ್ನೆಲ್ಲ ನಸಿಸಿ, ಕೃಷ್ಣದೇವರಾಯನಿಗೆ ಬಿಟ್ಟು ಹೋಗಬೇಕಾಗಿದ್ದಿತು. ಆದ್ದರಿಂದಲೇ ಅವನು ಅಷ್ಟು ದುಃಖಿತನಾಗಿದ್ದನು. ಹೇಗಾದರೂ ರಾಜ್ಯವು ಮಗನಿಗೆ ದೊರೆಯುವಂತೆ ಮಾಡಬೇಕಾಗಿದ್ದಿತು. ಆದಕ್ಕಾಗಿ ಅವನು ಬಹಳ ಯೋಚಿಸಿದನು. ಒಂದೇ ಒಂದು ಉಪಾಯದ ಹೊರತು ಇನ್ನೇನೂ

ತಿಳಿಯಲಿಲ್ಲ. ಆದರದು ಸಾಧಿಸುವ ಉಪಾಯುವಾಗಿರಲಿಲ್ಲ. ಏಕೆಂದರೆ, ಶ್ರೀಕೃಷ್ಣದೇವರಾಯನ ಕೊಲೆ ಮಾಡುವ ಮತ್ತು ಮಾಡಿಸುವ ಸಮರ್ಥ ರಾರು? ಶ್ರೀಕೃಷ್ಣದೇವರಾಯನಂತಹ ಕನ್ನಡ ಸತ್ಪುತ್ರನ ಮೇಲೆ ಯಾರ ದಾದರೂ ಕೈಏಳಬಹುದೆ? ಅದೆಂದೂ ಸಾಧ್ಯವಿರಲಿಲ್ಲ. ಸಾಧ್ಯವಿರಲಿಲ್ಲ ವೆಂದು ಸುಮ್ಮನೆ ಕುಳಿತರೂ ನಡೆಯುವಂತಿರಲಿಲ್ಲ. ತನ್ನ ಮಗನಿಗೆ ಪಟ್ಟ ದಕ್ಕಬೇಕಾದರೆ ಈ ಒಂದು ಹಂಚಿಕೆಯು ಹೊರತು ಇನ್ನೇನೂ ಸಾಧ್ಯವಿರಲಿಲ್ಲ. ಹೀಗೆ ವಿಶೇಷವಾಗಿ ತೊಂದರೆಗೆ ಸಿಕ್ಕು ಯೋಚಿಸಿ ಕೊನೆಗೆ ವೀರನರಸಿಂಹನು ಅಪ್ಪಾಜಿಗೆ ಶರಣು ಹೋದನು, ಹೇಳಿಕೊಂಡನು, ಆಣೆಯಿಟ್ಟನು. ಅಪ್ಪಾ ಜಿಗೆ ಆ ವಿಚಾರ ಕೇಳುತ್ತಲೆ ಮೈಮೇಲೆ ಮುಳ್ಳು ಬಂದವು. ಅವನಾದರೂ ವೀರನರಸಿಂಹನಿಗೆ ಬಹಳವಾಗಿ ಮನವೊಲಿಸಿದನು, ಆಶ್ವಾಸನೆ ಕೊಟ್ಟನು, ಉಪದೇಶ ಮಾಡಿದನು. ಏನಾದರೇನು? ಶ್ರೀಕೃಷ್ಣದೇವರಾಯನ ಕಣ್ಣು ಕಿತ್ತು ತಂದು ತೋರಿಸಲೇಬೇಕೆಂದು ಅರಸು ಹಟ ಹಿಡಿಯಲು, ಅಪ್ಪಾಜಿ ಇಬ್ಬಗೆಯ ಎಳೆದಾಟಕ್ಕೆ ಸಿಲುಕಿದನು. ಶ್ರೀಕೃಷ್ಣರಾಯನನ್ನು ಕೊಲ್ಲಿಸು ವುದೇ! ಅವನಿಗೆ ಆ ಯೋಚನೆಯೇ ಮಹಾಘಾತುಕವಾದದೆಂದು ಭಾವನೆ ಯಾಯಿತು. ಹಾಗಾದರೆ ಸಾಯಲಿದ್ದ ಅರಸು ದುಃಖದಿಂದ ಬಳಲುವಂತೆ ಮಾಡುವುದೇ? ಅದೂ ಸಮ್ಮತವಾಗಲಿಲ್ಲ. ಕೊನೆಗೆ ಕನ್ನಡ ಮಾತೆಯ ಉದ್ಧಾರಕ್ಕಾಗಿ, ಕನ್ನಡಿಗರ ಶ್ರೇಷ್ಠ ಹಿತಕ್ಕಾಗಿ, ಕನ್ನಡ ನಾಡಿನ ಅಭಿವೃದ್ಧಿ ಗಾಗಿ, ಕನ್ನಡದ ಮೇಲ್ಮೆಗಾಗಿ ಶ್ರೀಕೃಷ್ಣದೇವರಾಯನನ್ನು ಉಳುಹಲೇ ಬೇಕು; ಆದರೆ ಅದರಿಂದ ಅವನಿಗೆ ದುಃಖವಾಗಕೂಡದು. ಇಂತಹ ಒಂದು ಚತುರ ಉಪಾಯವನ್ನು ಶೋಧಿಸಿದನು. ಕೃಷ್ಣದೇವರಾಯನನ್ನು ಗುಪ್ತ ವಾಗಿ ಯಾರೂ ಅರಿಯದಂತಹ ಸ್ಥಳವೊಂದರಲ್ಲಿರಿಸಿ, ಕೃಷ್ಣರಾಯನನ್ನು ಕೊಲ್ಲಿ ಸಿದಂತೆ ಅರಸಿಗೆ ಹೇಳಿಬಿಟ್ಟನು. ಅವನಿಗೆ ನಂಬುಗೆಯಾಗುವಂತೆ ಒಂದು ಆಡು ವಧಿಸಿ, ಅದರ ಎರಡೂ ಕಣ್ಣುಗಳನ್ನು ಕಿತ್ತು ತಂದು ತೋರಿಸಿದನು. ಆನಂದದ ಭರದಲ್ಲಿ ಮೋಸವನ್ನರಿಯದೇ ಅರಸು ಮರಣ ಹೊಂದಿದನು. ಒಡನೆಯೇ ಅಪ್ಪಾಜಿ ಕೃಷ್ಣದೇವರಾಯನನ್ನು ಕರೆತಂದು ಪಟ್ಟಗಟ್ಟಿದನು.

ಹೀಗೆ ಕನ್ನಡಿಗರ ದೈವಬಲದಿಂದಲೇ ಕೃಷ್ಣದೇವರಾಯನಿಗೆ ವಿಜಯ ನಗರದ ಸಿಂಹಾಸನವು ದೊರೆತಿತೆನ್ನಬಹುದು.

ಕೃಷ್ಣದೇವರಾಯ ಪಟ್ಟಕ್ಕೆ ಬಂದಾಗ್ಗೆ ಅಣ್ಣನ ಆಳಿಕೆಯ ಪರಿಣಾಮ ವಾಗಿ ಬೊಕ್ಕಸವು ಬರಿದಾಗಿ ಹೋಗಿದ್ದಿತು. ಸೈನ್ಯಬಲವು ಸವೆದು ಹೋಗಿ ದ್ದಿತು. ಈ ಎರಡೂ ಇಲ್ಲದೆ ಆತನು ಮುಂದೊರೆವುದು ಹೇಗೆ? ಮತ್ತು

ಆಗಿನ ಪರಿಸ್ಥಿತಿಯೆಂದರೂ ಎಂತಹದು! ವಿಜಾಪುರ, ಗೋವಳಕೊಂಡ, ಬೀದರ ಮುಂತಾದ ಸ್ಥಳಗಳಲ್ಲಿನ ಮಹಮ್ಮದೀಯರು ವಿಜಯನಗರವನ್ನು ನಾಮಶೇಷ ಮಾಡಬೇಕೆಂದು ಹವಣಿಸುತ್ತಲಿದ್ದರು ಅವರಲ್ಲಿ ಓರಿಸದ ಗಜಪತಿಯೂ ಕೂಡಿದ್ದನು. ಕೃಷ್ಣದೇವರಾಯನು ಈ ಎಲ್ಲರ ಉಪಟಳದಿಂದ ತಪ್ಪಿಸಿ ಕೊಂಡು ಯಾರೊಬ್ಬರ ದಾಳಿಗೂ ಆಹುತಿಯಾಗದಂತೆ ವಿಜಯನಗರವನ್ನು ರಕ್ಷಿಸಬೇಕಾಗಿದ್ದಿತಷ್ಟೇ ಅಲ್ಲ; ವಿಜಯನಗರವನ್ನು ಪಾದಾಕ್ರಾಂತ ಮಾಡ ಬೇಕೆನ್ನುವ ಅವರ ಕಾಲುಗಳನ್ನೇ ಕಡಿದು, ವಿಜಯನಗರದ ವೀರರ ಸ್ಮರಣೆ ಅವರಿಗೆ ಬಹಳ ದಿವಸ ಉಳಿಯುವಂತೆ ಮಾಡಬೇಕೆಂಬ ಬಯಕೆ ಬಲವಾಗಿ ದ್ದಿತು. ಆದುದರಿಂದ ಆವನು ಕೂಡಲೇ ಆ ಕಾರ್ಯಕ್ಕೆ ತೊಡಗಬೇಕಾಯಿತು. ಚತುರನಾದ ಅಪ್ಪಾಜಿಯ ಸಹಾಯವೂ ಅವನಿಗಿದ್ದದರಿಂದ ಅಸಾಧ್ಯವಿರಲಿಲ್ಲ.

ಪಟ್ಟಕ್ಕೆ ಬಂದ ಕೂಡಲೆ ತನ್ನ ಮಾಂಡಲಿಕರ ಪರಿಚಯ ಮಾಡಿಕೊಳ್ಳ ಲೋಸುಗ ಒಂದು ಔತಣವನ್ನೇರ್ಪಡಿಸಿದನು. ಅಂದು ಎಲ್ಲರೂ ಸಂತುಷ್ಟ ರಾಗುವಂತೆ ಕಾರ್ಯಕ್ರಮಗಳನ್ನೇರ್ಪಡಿಸಿದನು. ಅರಸನ ಆದರದಿಂದ ಸರ್ವರೂ ಸಂತುಷ್ಟರಾದರು. ಅದೇ ಸಂಧಿಯನ್ನು ಸಾಧಿಸಿ ವಿಜಯನಗರ ಸಾಮ್ರಾಜ್ಯದ ವಸ್ತುಸ್ಥಿತಿಯ ಸಂಪೂರ್ಣ ಚಿತ್ರವನ್ನು ಅವರಿಗೆ ತಂದುಕೊಟ್ಟು, ಅವರೆಲ್ಲರೂ ಶಕ್ತಿಮೀರಿ ಸಹಾಯ ಮಾಡದಿದ್ದರೆ ಸಾಮ್ರಾಜ್ಯವು ಬಹಳ ದಿನ ಉಳಿಯದೆಂದೂ, ಆದರಿಂದ ಅಂತಹ ಸ್ವತಂತ್ರ, ಉಜ್ವಲ ರಾಷ್ಟ್ರವನ್ನು ಪರ ಕೀಯರ ವಶಮಾಡಿದ ಹೇಡಿತನವು, ಹೀನತನವು, ಅಪವಾದವು ತಮ್ಮ ಮೇಲೆ ಬರುತ್ತದೆಂದೂ, ತಾಯ್ನಾಡಿನೇಳ್ಗೆಗಾಗಿ ಯತ್ನಿಸದಿದ್ದರೆ, ಮಾತೃ ಭೂಮಿಯ ಮೇಲ್ಮೆಗೆ ತ್ಯಾಗಮಾಡದಿದ್ದರೆ ಪರಮಾತ್ಮನಲ್ಲಿ ತಾವೆಲ್ಲರೂ ಘೋರ-ಅಪರಾಧಿಗಳಾಗಬೇಕಾದೀತೆಂದೂ, ಮುಂದಿನ ಇತಿಹಾಸದಲ್ಲಿ ತಮ್ಮ ಹೆಸರು ಕಪ್ಪು ಅಕ್ಷರಗಳಿಂದ ಬರೆಯಲ್ಪಡುವುದೆಂದೂ ವಿವರಿಸಿದನು.

ರಾಯನ ಹಂಚಿಕೆ ಕೈಗೂಡಿತು. ಕನ್ನಡ ವೀರರೆಲ್ಲರೂ ಮಾತೃಭೂಮಿ ಗಾಗಿ, ತಾಯ್ನಾಡ ಏಳ್ಗೆಗಾಗಿ, ವಿಜಯನಗರ ಸಾಮ್ರಾಜ್ಯ ರಕ್ಷಣೆಗಾಗಿ 'ನಾ' 'ನಾ' ಎನ್ನುತ್ತ ಮುಂದೆ ಬಂದರು. ಅಲ್ಪಾವಕಾಶದಲ್ಲಿ ಶ್ರೀಕೃಷ್ಣದೇವರಾಯ ನಿಗೆ ಸಾಕಷ್ಟಕ್ಕೆ ಹೆಚ್ಚೇ ಸೈನ್ಯವೂ ಸಂಪತ್ತೂ ದೊರೆಯಿತು.

ರಾಯನು ಹೀಗೆ ತನ್ನ ಸೈನ್ಯವನ್ನು ಸಿದ್ಧಮಾಡಿಕೊಂಡು ವಿಜಯ ನಗರವನ್ನು ಆಗಾಗ್ಗೆ ಪ್ರವೇಶಿಸಿ ಪೀಡೆ ಕೊಡುತ್ತಲಿದ್ದ ಪರಕೀಯರಾಕ್ರಮಣ ವನ್ನು ತಡೆದುದಲ್ಲದೆ, ಅವರಿಂದ ಕನ್ನಡ ರಾಜ್ಯವು ಮುಕ್ತವಾಗುವಂತೆ ಅವ ರಿಗೆ ದಂಡನೆ ಮಾಡಬೇಕೆಂದು ಸನ್ನದ್ಧನಾಗಿ ಸಮಯನಿರೀಕ್ಷಿಸುತ್ತಿದ್ದನು.

ಕೃಷ್ಣದೇವರಾಯನು ಬಲ ಬೆಳೆಸುತ್ತಲಿರುವ ವಾರ್ತೆ ಅನೇಕ ರಾಜರಿಗೆ ತಿಳಿಯಿತು. ಅವರಿಗಿದು ಸಹನವಾಗಲಿಲ್ಲ.

ಹಿಂದುಸ್ಥಾನವನ್ನು ಸಂಪೂರ್ಣವಾಗಿ ಆಕ್ರಮಿಸಬೇಕೆಂದು ತವಕಪಡುತ್ತಲಿದ್ದ ಮಹಮ್ಮದೀಯ ಅರಸರು ವಿಜಯನಗರದ ವೃದ್ಧಿಯಾಗುತ್ತಲಿದ್ದ ಬಲವನ್ನು ದ್ವೇಷಿಸುತ್ತಲಿದ್ದುದು ಸಹಜವು; ಆದರೆ ಓರಿಸದ ಗಜಪತಿಯು ಹಿಂದೀಯ ರಾಜನೋರ್ವನು-ಪರರೊಡನೆ ಬೆರೆತು ತಮ್ಮದೇ ಆದ ಒಂದು ಸ್ವತಂತ್ರ ಸಾಮ್ರಾಜ್ಯವನ್ನು ನಾಶಗೊಳಿಸಬೇಕೆಂಬಯಿಸಿದುದು ಅತ್ಯಂತ ಹೀನತನವೆಂದು ಬೇರೆ ಹೇಳಬೇಕಾಗಿಲ್ಲ. ಹಿಂದೀಯರ ಈ ಒಡಕಿಗಾಗಿಯೇ ನಮ್ಮ ಭಾರತವು ಅನೇಕ ಶತಮಾನಗಳಿಂದ ಪರಕೀಯರ ದಾಳಿಗೀಡಾಗುತ್ತಲಿದೆ. ಕೃಷ್ಣದೇವರಾಯನಿಗೆ ಈ ವಿಷಯವೇ ರೊಚ್ಚಿಗೆಬ್ಬಿಸಿತು. ಗಜಪತಿಯು ಮಹಮ್ಮದೀಯರಿಗಿಂತಲೂ ಅತ್ಯಂತ ಹೀನನಾಗಿ ತೋರಿ, ಅವನ ಕಿವಿಹಿಂಡಿ, ಅವನನ್ನು ದಾರಿಗೆ ತರಬೇಕೆಂದು ನಿರ್ಧರಿಸಿದನು. ಅನೇಕರು ಅವನೊಡನೆ ಸಂಧಿ ಸಾಧಿಸಬೇಕೆಂದು ಸೂಚಿಸಿದರು; ಆದರೆ ತಾವಾಗಿಯೇ ಸಂಧಿಗೆ ಮುಂದಾದರೆ ಅದರಿಂದ ಗಜಪತಿ ಇನ್ನೂ ಕೊಬ್ಬೇರಬಹುವಲ್ಲವೆ, ಅದರಿಂದ ತಮ್ಮ ಮಹತಿಗೆ ಕುಂದು ಬರುವದೆಂದು ತಿಳಿದು, ಅಭಿಮಾನದಿಂದ ವೀರನರಪತಿಯು ಅದಕ್ಕೆ ಸಮ್ಮತಿಸಲಿಲ್ಲ. ಗಜಪತಿಯ ರಾಜ್ಯದ ಮೇಲೆ ದಾಳೀ ಮಾಡಿ, ಅವನನ್ನು ಸೋಲಿಸಿಯೇ ದಾರಿಗೆ ತರಬೇಕೆಂದು ನಿರ್ಧರಿಸಿದನು. ಇದಾದರೂ ಮಹಾಪ್ರಯಾಸಕರವೇ ಆಗಿದ್ದಿತು; ಏಕೆಂದರೆ, ಓರಿಸವು ಆಗಿನ ಕರ್ನಾಟಕದಿಂದ ನಾಲ್ಕೈದು ನೂರು ಮೈಲುಗಳಷ್ಟು ದೂರವಿದ್ದಿತು. ಮಧ್ಯದಲ್ಲೆಲ್ಲ ವಿಜಯನಗರ ದ್ವೇಷಕರಾದ ಮಹಮ್ಮದೀಯರು. ಇವರನ್ನೆಲ್ಲ ಸೋಲಿಸದ ಹೊರತು ಓರಿಸಕ್ಕೆ ತಲುಪುವಂತಿರಲಿಲ್ಲ. ಅಷ್ಟೆಲ್ಲ ಮಹಮ್ಮದೀಯ ರಾಜರನ್ನು ಸೋಲಿಸಿ, ತನ್ನ ವರೆಗೆ ತಲುಪುವುದಶಕ್ಯವೆಂದೇ ಗಜಪತಿಯು ನಂಬುಗೆಯಿದ್ದಿತು. ಅಂತೆಯೇ ಅವನು ಕೃಷ್ಣರಾಯನ ಬೆಳೆವ ಬಲವನ್ನು ಕುಗ್ಗಿಸುವುದಕ್ಕೆ ವಿಜಾಪುರ, ಗೋವಳಕೊಂಡ ಮುಂತಾದ ಮಹಮ್ಮದೀಯ ರಾಜರೊಡನೆ ಒಂದು ಸಂಧಿ ಮಾಡಿಕೊಂಡನು. 'ಮೊದಲು ಮಹಮ್ಮದೀಯ ವೀರ ರಾಜನಾದ ವಿಜಾಪುರದರಸು ಕನ್ನಡ ಸಾಮ್ರಾಜ್ಯದಲ್ಲಿ ನೂಕಿ ರಾಯನನ್ನು ಕೆಣಕಬೇಕು. ರಾಯನು ಯುದ್ಧಕ್ಕೆ ಪ್ರವೃತ್ತನಾಗುತ್ತಲೇ ಉಳಿದ ಮಹಮ್ಮದೀಯ ಅರಸರು ಒಬ್ಬೊಬ್ಬರೇ ವಿಜಾಪುರದರಸನನ್ನು ಕೂಡಬೇಕು. ವೈರಿಯ ಪಕ್ಷವು ಹೀಗೆ ದಿನೇ ದಿನೇ ಬೆಳೆಯುತ್ತಲೆ ನಡೆಯಲು, ರಾಯನು ಕೈಕಾಲು ಕಳಚಿದವನಾಗಿ ಮುಂದೊರವುದೇ ಸಾಧ್ಯವಾಗದು. ಒಂದು ವೇಳೆ

ಮುಹಮ್ಮದೀಯರೇ ಸೋತರೆ, ರಾಯನು ಕನಲಿ, ಕೃಷ್ಣೆಯನ್ನು ದಾಟಿ ಓರಿಸದ ರಾಜ್ಯದ ಮೇಲೆ ಧುಮುಕುವುದು ಖಂಡಿತವು. ಆಗ್ಗೆ ಗಜಪತಿ ಅವನನ್ನು ಚನ್ನಾಗಿ ಉಪಚರಿಸಿಬೇಕು.' ಎಂಬುದೇ ಆ ಸಂಧಿಯ ಗುಪ್ತಕಾರ್ಯಕ್ರಮವು.

ಗಜಪತಿಯ ಈ ಗುಪ್ತ ಕಟ್ಟು ರಾಯನಿಗೆ ಗುಪ್ತಚಾರರ ಮುಖಾಂತರ ತಿಳಿಯುತ್ತಲೇ ಅವನು ಕೆರಳಿದ ಕೇಸರಿಯಂತಾದನು-ಕೋಪದಿಂದ ಕಿಡಿಕಿಡಿಯಾದನು-ಪಿತೃವಧೆಯಿಂದುರಿದು ಬಿದ್ದ ಪರಶುರಾಮನಂತಾದನು! ಗಜಪತಿಯನ್ನು ಚನ್ನಾಗಿ ಶಿಕ್ಷಿಸಿಯೇ ಬಿಡಬೇಕೆಂದು ನಿರ್ಧರಿಸಿದನು

ಕನ್ನಡಿಗರ ವೀರಸೇನಾಪತಿ ರಾಮಲಿಂಗನಂತೂ ವಿಜಯನಗರ ಸಾಮ್ರಾಜ್ಯಕ್ಕೆ ಕೇಡು ಬಗೆಯಬೇಕೆಂದಿದ್ದ ದ್ರೋಹಿಗಳನ್ನು ಚನ್ನಾಗಿ ದಂಡಿಸಲು ಹಾತೊರೆಯುತ್ತಿದ್ದನು. ನರಪತಿ ತನ್ನ ಚತುರಮಂತ್ರಿ ಅಪ್ಪಾಜಿಯೊಡನೆ ಆಲೋಚಿಸಿ ಒಂದು ಸೇನೆ ಕೊಟ್ಟು ಮುಂದೆ ಕಳುಹಿದನು ಸೇನಾನಿ ರಾಮಲಿಂಗನ ಅಬ್ಬರವು ಅಸದಳವಾಗಿದ್ದಿತು. ಮದುವಣಿಗನಂತೆ ಉಲ್ಲಾಸದಿಂದ ಹೊರಟು ವಿಜಯನಗರದ ಹದ್ದಿನೊಳಗೆ ಪ್ರವೇಶಿಸಲು ಸಿದ್ಧವಾದ ಅರಿಶಿಬಿರವನ್ನು ಸಮುದ್ರತೆರೆಯಂತೆ ಅಪ್ಪಳಿಸಿದನು. ಅವನ ಬಿರುಸಾದ ಹೊಡತಕ್ಕೆ ಶತ್ರುಗಳು ತಡೆಯದಾದರು. ಮುಹಮ್ಮದೀಯ ಅರಸರು ತಮ್ಮ ಬಲವನ್ನೆಲ್ಲ ಕಲೆಹಾಕಿ ಮುಂದೆ ಬರುವಷ್ಟರಲ್ಲಿ ನರಪತಿ ಸೈನ್ಯ ಸಹಿತವಾಗಿ ಬಂದೆರಗಿದನು.

ಚಂಡಭಾಸ್ಕರನನ್ನು ಹಿಂದೆ ಹಾಕುವ ರಾಯನ ಪ್ರಚಂಡ ಸೈನ್ಯದ ಹೊಡತಕ್ಕೆ ಶತ್ರುಗಳು ತಲ್ಲಣಿಸಿದರು-ತತ್ತರಿಸಿದರು-ಕಂಗೆಟ್ಟರು. ಹಿಂದೆ ಹೊಳೆ, ಮುಂದೆ ರಾಯನ ಪಡೆ. ಶತ್ರುಸೈನಿಕರು ಕನ್ನಡಿಗರ ಹೊಡತ ತಡೆಯದೆ ಹೊಳೆಯಲ್ಲಿ ಹಾರತೊಡಗಿದರು. ಶತ್ರುಶಿಬಿರವೆಲ್ಲವೂ ಉಧ್ವಸ್ಥವಾಯಿತು. ಶತ್ರುಸೈನಿಕರು ನಿರ್ನಾಮವಾದರು. ಶತ್ರುಬಲದೊಡೆಯರ ಸದ್ದಿಲ್ಲದಾಯಿತು. ಈ ಯುದ್ಧದಲ್ಲಾದ ಮುಹಮ್ಮದೀಯರ ನಷ್ಟವು ಅಪರಿಮಿತವಾಯಿತು. ಅಸಂಖ್ಯ ಸೈನಿಕರು ಪ್ರಾಣಕ್ಕೆ ಎರವಾದರು. ಸಾವಿರಾರು ಕುದುರೆಗಳೂ, ಅಗಣಿತದ ಸಂಪತ್ತೂ ರಾಯನ ಕೈಸೇರಿತು. ಕನ್ನಡಿಗರ ಅಂದಿನ ಅಪೂರ್ವ ಶೌರ್ಯವು ಇತಿಹಾಸಿನಲ್ಲಿ ಚಿರಸ್ಥಾಯಿಯಾಗಿದೆ.

ಹೀಗೆ ಓರಿಸಕ್ಕೆ ಹೋಗುವ ಮಾರ್ಗದಲ್ಲಿನ ಮೊದಲಿನ ಮುಳ್ಳು ಕಿತ್ತುವಷ್ಟರಲ್ಲಿ ಮಳೆಗಾಲವಾರಂಭವಾಯಿತು. ರಾಯನ ಪಡೆಗೂ ವಿಶ್ರಾಂತಿ ಅವಶ್ಯವಾಗಿದ್ದಿತು. ಆದುದರಿಂದ ಮಳೆಗಾಲ ಮುಗಿಯುತ್ತಲೇ ಮುಂದೊರೆಯಬೇಕೆಂದು ನಿರ್ಧರಿಸಿ ಗಜಪತಿಯ ಮೇಲೆ ದಂಡೆತ್ತಿ ಹೋಗಲು ಸಿದ್ಧನಾದನು.

ಮಳೆಗಾಲ ಮುಗಿಯುತ್ತಲೆ ನರಪತಿ ತನ್ನ ಪ್ರಯಾಣಕ್ಕೆ ಸನ್ನದ್ಧನಾದನು. ಗಜಪತಿಯ ಚಿಗಪ್ಪನಾದ ತಿರುಮಲ ರಾವುತನು ಉದಯಗಿರಿಯಲ್ಲಿ ರಾಜ್ಯವಾಳುತ್ತಲಿದ್ದನು. ಅವನನ್ನು ಹಾಗೆಯೇ ಬಿಟ್ಟು ಮುಂದೊರೆದರೆ, ಮುಂದೆ ಅವನಿಂದ ತೊಂದರೆಯಾಗಬಹುದೆಂದೆಣಿಸಿ, ಮೊದಲು ಉದಯಗಿರಿಯನ್ನು ವಶಪಡಿಸಿಕೊಳ್ಳುವ ಉದ್ಯೋಗಕ್ಕೆ ತೊಡಗಿದನು. ಉದಯಗಿರಿಯು ಬಹು ಭದ್ರವಾದ ದುರ್ಗವು. ಅದಕ್ಕಾಗಿ ರಾಯನು ಬಹಳ ಕಷ್ಟ ಸಹಿಸಬೇಕಾಯಿತು. ಎಲ್ಲರೂ ಬಹಳವಾಗಿ ಯತ್ನಿಸಿ ಕೊನೆಗೆ ಕೋಟೆಯನ್ನು ಕೈವಶಮಾಡಿಕೊಳ್ಳಬೇಕಾದರೆ ಒಂದೂವರೆ ವರ್ಷ ಬೇಕಾಯಿತು. ಆದರೂ ಬಿಡಲಿಲ್ಲ ತಿರುಮಲ ರಾವುತನನ್ನು ಕೈದು ಮಾಡಿದ್ದರಿಂದ ಗಜಪತಿಯ ಅರ್ಧಬಲವನ್ನೇ ವಶಪಡಿಸಿಕೊಂಡಂತಾಯಿತು.

ಗಜಪತಿಯನ್ನು ಸೋಲಿಸಿಯೇ ತೀರಬೇಕೆಂದು ಕೃತಸಂಕಲ್ಪನಾದ ರಾಯನು ಓರಿಸದ ಗಂಡುಮೆಟ್ಟಾದ ಕೊಂಡವೀಡಿಗೆ ಹೋದನು. ಗಜಪತಿಯು ಕೊಂಡವೀಡಿನ ರಕ್ಷಣೆಗೋಸುಗ ಬಹಳ ದಕ್ಷತೆ ವಹಿಸಿದ್ದನು. ಸ್ವತಃ ತಾನೇ ಅಲ್ಲಿಗೆ ಬಂದುದಲ್ಲದೆ, ಬೇರೆ ಬೇರೆ ನಾಯಕರನ್ನು ಪಡೆಸಹಿತ ಕರೆಯಿಸಿಕೊಂಡಿದ್ದನು.

ಹೀಗೆ ತನ್ನ ಆ ದೊಡ್ಡ ಸೈನ್ಯದೊಡನೆ ಗಜಪತಿ ಒಂದು ಹೊಳೆಯ ದಂಡೆಯ ಮೇಲೆ ತಳಊರಿದ್ದನು. ನರಪತಿಗೆ ಅವರೊಡನೆ ಕಾದಬೇಕಾದರೆ ಹೊಳೆಯನ್ನಿಳಿದು ಮೇಲೆ ಹೋಗಬೇಕಾಗಿದ್ದಿತು. ಹೊಳೆಯ ಆಚೇ ದಂಡೆಯಲ್ಲಿಯೇ ಗಜಪತಿಯ ಸೈನ್ಯವು ನಾಲ್ಕಾರು ದಿನ ಹೊಳೆಯ ಈಚೆಯ ದಂಡೆಯಲ್ಲಿ ನರಪತಿ ಆಚೇ ದಂಡೆಯಲ್ಲಿ ಗಜಪತಿಯು ಕುಳಿತರು. ನರಪತಿಯನ್ನು ಪೇಚಿನಲ್ಲಿ ಕೆಡವಬೇಕೆಂದೇ ಗಜಪತಿಯು ಆ ಯುಕ್ತಿಯನ್ನು ಶೋಧಿಸಿ ತೆಗೆದಿದ್ದನು. ನರಪತಿ ಸ್ವಲ್ಪ ಗೊಂದಲದಲ್ಲಿ ಬಿದ್ದನು. ಅಪ್ಪಾಜಿಯನ್ನೂ ರಾಮಲಿಂಗನನ್ನೂ ಕೂಡಿಕೊಂಡು ಬಹಳವಾಗಿ ವಿಚಾರಿಸಿದನು. ಕೊನೆಗೆ ಯುದ್ಧದ ನಿಯಮಗಳಿಗನುಸಾರವಾಗಿ ಗಜಪತಿಗೆ ಒಂದು ಪತ್ರ ಕಳುಹಿದರು. ಅವರು ಗಜಪತಿಗೆ ಎರಡು ಸೂಚನೆ ಮಾಡಿದ್ದರು. ನರಪತಿಯು ತಾನು ಹಿಂದೆ ಸರಿದು ಗಜಪತಿಗೆ ಸ್ಥಳ ಮಾಡಿಕೊಡಲು ಸಿದ್ಧನಿದ್ದನು. ಅವನು ಹೊಳೆಯಿಳಿದು ಬರಬಹುದೆಂಬದು ಒಂದು, ಇಲ್ಲವೆ ಗಜಪತಿ ಹಿಂದೆ ಸರಿದು ನರಪತಿಗೆ ಅವಕಾಶ ಕಲ್ಪಿಸಿ ಕೊಟ್ಟರೆ ನರಪತಿಯು ಹೊಳೆದಾಟಿ ಬರುವನೆಂಬದಿನ್ನೊಂದು; ಆದರೆ ಗಜಪತಿ ಎರಡಕ್ಕೂ ಒಪ್ಪಲಿಲ್ಲ.

ಆದುದರಿಂದ ನರಪತಿ ಅಲ್ಲಿಂದಲೇ ಗಜಪತಿಯ ಮೇಲೆ ಬೀಳಬೇಕಾಯಿತು. ನಾಲ್ಕೆಂಟು ದಿನ ವಿಶ್ರಾಂತಿ ಸಿಕ್ಕಿದ್ದರಿಂದ ಸೈನಿಕರೆಲ್ಲರೂ ಹೊಸ ಹುರುಪಿನಿಂದ ಸಿದ್ಧರಾಗಿದ್ದರು. ಮುಂದೊರೆದು ಹೋಗಲು ರಾಮಲಿಂಗನೇ ಸಿದ್ಧನಾಗಿದ್ದನು. ನರಪತಿಗೆ ಹೇಳಿ, ಕೊಂಚ ತಡೆದು ಬಂದು ಕೂಡುವಂತೆ ಸೂಚಿಸಿ, ವೀರ ಪಡೆಯನ್ನು ಕೂಡಿ ಹೊರಟನು.

ಕನ್ನಡಿಗರ ವೀರ ಸೇನಾನಿ ರಾಮಲಿಂಗನು ಗಜಯೂಥಗಳನ್ನು ಭೇದಿಸಿ ಹೊರಟ ಮೃಗರಾಜನಂತೆ ಅಬ್ಬರದಿಂದ ಬೊಬ್ಬಿರಿದು ಮುಂದಾದನು. ಗಜಪತಿ ಶಕ್ಯವಿದ್ದಮಟ್ಟಿಗೆ ತಡೆಯನ್ನುಂಟುಮಾಡಿದನು. ವೈರಿಗಳ ಕೂರ್ಗಣೆಗಳಿರಿತಕ್ಕೆ, ಭಾಲೆಗಳ ಕಡಿತಕ್ಕೆ, ಕತ್ತಿಗಳ ಹೊಡತಕ್ಕೆ ಕಿಂಚಿತ್ತಾದರೂ ಹಿಂದೆಗೆಯದೇ, ಅಲ್ಪವಾದರೂ ಅಳುಕದೇ ತನ್ನ ಅಸಮ ಧೈರ್ಯದಿಂದ ಮುಂದೊರೆದು ಗಜಪತಿಯ ಪಡೆಯನ್ನಾಕ್ರಮಿಸಿದರು. ಅಲ್ಪಾವಕಾಶದಲ್ಲಿಯೇ ನರಪತಿ ಬಂದು ಕೂಡಿದನು. ನರಪತಿಯ ಆ ಇರಿತಕ್ಕೆ ಶತ್ರುಸಮೂಹವು ಸೂರ್ಯನುದಿಸುತ್ತಲೆ ಮಂಜು ಮಾಯವಾಗುವಂತೆ ಕರಗಿ ಹೋಯಿತು ಗಜಪತಿಯ ಸಹಾಯಕರೆಲ್ಲರೂ ಕಾಲ್ದೆಗೆದರು. ಗಜಪತಿಯು ಜೀವರಕ್ಷಿಸಿಕೊಳ್ಳಲು ಅಲ್ಲಿಂದ ಓಡಿ ಸಿಂಹಾಚಲ ಕೋಟೆಯನ್ನು ಹೊಕ್ಕನು ನರಪತಿಯು ಅಲ್ಲಿಯೂ ಬೆನ್ನಟ್ಟಿದನು. ಅನೇಕರು ಅಷ್ಟು ದೂರ ವೈರಿನಾಡಿನಲ್ಲಿ ಪ್ರವೇಶಿಸುವುದು ಘಾತುಕವೆಂದು ಸೂಚಿಸಿದರು ಗಜಪತಿಯ ಸೋಲು ಸಾಕಷ್ಟಾಗಿದ್ದ ಮೂಲಕ ಅಲ್ಲಿಂದಲೇ ಮರಳಬೇಕೆಂದು ಬಿನ್ನವಿಸಿದರು; ಆದರೆ ಕೆಚ್ಚೆದೆಯ ವೀರನಾದ ನರಪತಿಗೆ ಅವರ ಸೂಚನೆ ಸಮ್ಮತವಾಗಲಿಲ್ಲ. ಅವನು ಅವರ ಸೂಚನೆಗಳನ್ನೆಲ್ಲ ಗಮನಿಸದೆ ಮುಂದೆ ಸಾಗಿ ಸಿಂಹಾದ್ರಿಯನ್ನು ಮುತ್ತಿ ವಶಪಡಿಸಿಕೊಂಡನು. ಈ ಸಂಗತಿ ಹಿಂದಿನ ಪ್ರಕರಣದಲ್ಲಿ ಬಂದಿದೆ

ಇತಿಹಾಸಿನಲ್ಲಿ ಕನ್ನಡಿಗರ ಈ ಸಮಯ ಸ್ತೋತ್ರಾರ್ಹವಾದ ವಿಜಯಗಳಿಂದ ತುಂಬಿಹೋಗಿದೆ. ಅಂದಿನ ಕನ್ನಡಿಗರು ವೀರತನದಿಂದ ಮುಂದೆ ಮುಂದೆ ಸಾಗಿ ತಮ್ಮ ನಾಡಿನಿಂದ ಐದುನೂರು ಮೈಲುಗಳಷ್ಟು ವೈರಿನಾಡಿನಲ್ಲಿ ಹೋಗಿದ್ದರು. ವೈರಿಗಳ ಮಧ್ಯದಲ್ಲಿಯೇ ಬೀಡು ಬಿಟ್ಟಿದ್ದರು. ಶತ್ರು ಸೈನ್ಯದ ಸಮೀಪದಲ್ಲಿಯೇ ಶಿಬಿರ ಸ್ಥಾಪಿಸಿದ್ದರು. ವೈರಿಯೆದೆಯನ್ನು ಮೆಟ್ಟಿ ಕುಳಿತಿದ್ದರು!

---

## ೩ ಜಗನ್ಮೋಹಿನಿ.

ಪ್ರೊಟ್ಟನೂರಿನ ಭದ್ರವಾದ ರಾಜಮಂದಿರ. ಅದರಲ್ಲಿಯೂ ಒಳ್ಳೇ ಭದ್ರವಾದ ನೆಲಮನೆ. ರಾತ್ರಿಯ ಸಮಯವಾದುದರಿಂದ ನಾಲ್ಕಾರು ಮೇಣ ಬತ್ತಿಗಳು ತಮ್ಮ ಮಂದಪ್ರಕಾಶವನ್ನು ಬೀರಿ ದಟ್ಟವಾದ ಕತ್ತಲೆಯನ್ನು ತಕ್ಕಮಟ್ಟಿಗೆ ಹೊಡೆದೊಡಿಸಲು ಯತ್ನಿಸುತ್ತಲಿದ್ದುವು. ಆ ಮಂದಪ್ರಕಾಶ ದಲ್ಲಿಯೂ ಅಲ್ಲಿಯ ರನ್ನದಾಸನಗಳು ಥಳಥಳಿಸುತ್ತಲಿದ್ದುವು. ಉರಿಯುತ್ತ ಲಿದ್ದ ಬತ್ತಿಗಳು ನಾಲ್ಕಾರೇ ಇದ್ದರೂ ಹೊಳೆಯುವ ರನ್ನಗಳಿಂದ ಸಾವಿರಾರು ಬತ್ತಿಗಳು ಉರಿಯುತ್ತಲಿದ್ದಂತೆ ಭಾಸವಾಗುತ್ತಲಿದ್ದಿತು. ಇದಕ್ಕಿಂತಲೂ ಹೆಚ್ಚಾಗಿ ವರ್ಣನಾರ್ಹ ವಿಷಯಗಳೇ ಅಲ್ಲಿರಲಿಲ್ಲವೆನ್ನಬಹುದು; ಅಥವಾ ಯಾರಿಗೆ ಗೊತ್ತು, ನಿಬಿಡ ಕತ್ತಲೆಯಲ್ಲಿ ಕಾಣದಿದ್ದರೂ ಇರಬಹುದು.

ಆ ಕೋಣೆಯಲ್ಲಿ ಒಂದು ಆಸನದಲ್ಲಿ ಓರಿಸದೊಡೆಯ ಗಜಪತಿ ಪ್ರತಾಪ ರುದ್ರದೇವ ಕುಳಿತಿದ್ದನು. ಆ ಕೋಣೆಯಲ್ಲಿಯ ವಾತಾವರಣಕ್ಕನುಸರಿಸಿ ಅವನ ಅಂತರಂಗವು ಮಾರ್ಪಟ್ಟಿದ್ದಿತೋ ಇಲ್ಲವೆ ಅವನ ಅಂತಃಕರಣದ ಪ್ರತಿಬಿಂಬವೇ ಆ ನೆಲಮನೆಯಾಗಿದ್ದಿತೋ ಹೇಳುವುದೇ ಬಿರಿಯಾಗಿದ್ದಿತು. ಅವನ ಹೃದಯದಲ್ಲಿ ಎಲ್ಲಿ ನೋಡಿದರೂ ಕತ್ತಲೆ ಬೀಡುಬಿಟ್ಟದ್ದಿತು. ಪೂರ್ವವೈಭವವನ್ನು ಪಡೆಯುವ ಬಗ್ಗೆ ಅವನು ತೀರ ಔದಾಸೀನ್ಯ ತಳೆ ದಿದ್ದನು. ಅಂತಹ ಕತ್ತಲೆಯಲ್ಲಿಯೂ ಒಂದೆರಡು ಆಶಾಕಿರಣಗಳು ಮಿನು ಗುತ್ತಲಿದ್ದವು. ಭಿನ್ನ ಭಿನ್ನ ಹಂಚಿಕೆಗಳ ಬಗ್ಗೆ ಯೋಚಿಸುತ್ತಲಿದ್ದನು. ಅವುಗಳಿಂದ ತನ್ನ ಉದ್ದಿಷ್ಟ ಸಾಧಿಸಬಹುದೆಂಬ ಆಶಾಜ್ಯೋತಿಯತ್ತ ಹೊರಳು ತ್ತಲೆ, ಎಲ್ಲೆಡೆಯಲ್ಲೂ ವ್ಯಾಪಿಸಿದ್ದ ನಿರಾಶೆ ಮತ್ತೆ ಮತ್ತೆ ಮುಸುಗುತ್ತಲಿದ್ದಿತು. ಭವಿಷ್ಯದ ವಿಷಯಕವಾದ ಆಶಾನಿರಾಶೆಗಳಲ್ಲಿಯೇ ಮಗ್ನನಾಗಿ ಕುಳಿತುದ್ದನು.

ಗಜಪತಿಯ ಹೆಸರು ಈ ಮೊದಲೇ ಬಂದಿದೆ. ಆತನು ಓರಿಸದರಸು. ವಿಜಯನಗರದಲ್ಲಿ ವೀರ ನರಸಿಂಹನಾಳುತ್ತಿದ್ದಾಗ್ಗೆ ಓರಿಸದಲ್ಲಿ ಪ್ರತಾಪ ರುದ್ರ ದೇವನಾಳುತ್ತಲಿದ್ದನು. ಒಳ್ಳೇ ಪ್ರತಾಪಶಾಲಿಯಾದ ಅರಸು; ಆದರೆ ಭಾರ ತೀಯರ ದುರ್ದೈವದ ಮೂಲಕವಾಗಿಯೋ ಏನೋ ಅವನ ಕಣ್ಣು ಮೊದಲಿ ನಿಂದಲೂ ವಿಜಯನಗರದ ಮೇಲೆ ಬಹಳವಿತ್ತು. ಪರಕೀಯರು ಬಂದು ನಮ್ಮ ತಲೆಯನ್ನೇರಿ ಕುಳಿತರೂ ನಡೆಯುವುದು; ಆದರೆ ನಮ್ಮವರು ನಮ್ಮ ಸನಿಹಕ್ಕೆ ಸಹ ಸುಳಿಯುವಂತಿಲ್ಲ. 'ಮನೆಗೆ ಮಾರಿ ಪರರಿಗುಪಕಾರಿ' ಎಂಬ ನಾಣ್ಣುಡಿ ಯಾದರೂ ಇದೇ ಮೂಲಕ ಉಂಟಾಗಿರಬಹುದೆಂದು ತೋರುತ್ತದೆ. ಪರಕೀ

ಯರಿಗೆ, ಪರಧರ್ಮೀಯರಿಗೆ ನಮ್ಮಲ್ಲಿ ಸತ್ಕಾರ ಬಹಳ ಈ ಬಗ್ಗೆ ಭಾರತೀಯರು ಪ್ರಸಿದ್ಧರೇ ಇರುವರು; ಮತ್ತು ಇದು ಹೊಗಳಲು ಯೋಗ್ಯವಾದ ಗುಣವೇ ಇರುತ್ತದೆ; ಆದರೆ ಪರಕೀಯರನ್ನಾದರಿಸಿ ಕರೆಯುವ ನಾವೇ ನಮ್ಮವರನ್ನು ಕಂಡರಾಗುವುದಿಲ್ಲ. ಪ್ರತಾಪ ರುದ್ರದೇವನಾದರೂ ಭಾರತೀಯನೇ ಅಲ್ಲವೆ? ಆದುದರಿಂದ ಅವನಿಗೆ ಕನ್ನಡ ಸಾಮ್ರಾಜ್ಯವು ಪ್ರಬಲವಾಗುವುದು ಸಹನವಾಗುತ್ತಿರಲಿಲ್ಲ. ಹೇಗಾದರೂ ಅದನ್ನು ನಿರ್ನಾಮಗೊಳಿಸಬೇಕೆಂದು ಅವನು ಯತ್ನಿಸುತ್ತಲಿದ್ದನು. ಅನ್ಯ ರಾಜರ ಉತ್ಕರ್ಷ ಯಾವ ರಾಜನಿಗೂ ಸಹನವಾಗುವುದಿಲ್ಲವೆಂಬುದು ಸಹಜವು. ಹಾಗೆಯೇ ಪ್ರತಾಪರುದ್ರದೇವನು ಕನ್ನಡ ಸಾಮ್ರಾಜ್ಯದ ನಾಶವನ್ನಿಚ್ಛಿಸಿ ಹಾಗೆ ಯತ್ನಿಸಿದರೆ ಅದರಲ್ಲಿ ಅವನ ದೋಷವೇನೂ ಇರಲಿಲ್ಲವೆನ್ನಬಹುದು; ಆದರೆ ಅದಕ್ಕೆ ಅವನು ಹಿಡಿದ ದಾರಿ ಸರಿಯಾಗಿರಲಿಲ್ಲ. ವಿಜಯನಗರ ಸಾಮ್ರಾಜ್ಯವನ್ನು ಘಾತಿಸಲು ಅವನು ಕೈಕೊಂಡ ಉಪಾಯವು ವಿಜಯನಗರವನ್ನೂ ಅದರೊಡನೆ ತನ್ನನ್ನೂ ಘಾತಿಸಿ, ಆದರಿಂದ ಭಾರತವನ್ನೇ ಪರಕೀಯರ ವಶಮಾಡುವಂತಹದಾಗಿದ್ದಿತು. ವಿಜಯನಗರ ಸಾಮ್ರಾಜ್ಯವನ್ನು ಸ್ವತಃ ದಾಳಿ ಮಾಡುವಷ್ಟು ಬಲವು ಅವನಲ್ಲಿರಲಿಲ್ಲ. ಅದಕ್ಕಾಗಿ ಮಹಮ್ಮದೀಯರ ಸಹಾಯ ಪಡೆಯಲು ಇಚ್ಛಿಸಿದನು; ಮತ್ತು ಪಡೆದನು. ವಿಜಯನಗರದ ವೀರ ನರಪತಿ ಬಲಶಾಲಿಯಿದ್ದುದರಿಂದ ಮಹಮ್ಮದೀಯರನ್ನು ಹಣಿದುದಲ್ಲದೆ, ಅಷ್ಟೆಲ್ಲ ವ್ಯೂಹಕ್ಕೆ ಕಾರಣನಾದ ಗಜಪತಿಯನ್ನೂ ಪೊಟ್ಟನೂರು ಸೇರಿಸಿದನು. ಒಂದು ವೇಳೆ ವಿಜಯನಗರದರಸು ನಿರ್ಬಲನಾಗಿದ್ದ ಸಮಯದಲ್ಲಿ ಎಲ್ಲವೂ ವಿಪರೀತವಾಗುತ್ತಿದ್ದಿತಲ್ಲವೆ? ಮಹಮ್ಮದೀಯರು ವಿಜಯನಗರವನ್ನಷ್ಟೇ ಹಣಿದು ನಿಲ್ಲದೆ, ಸ್ವತಃ ಪ್ರತಾಪರು ದ್ರದೇವನನ್ನೇ ಪಟ್ಟದಿಂದ ತಳ್ಳಲು ಹಿಂದು ಮುಂದೆ ನೋಡುತ್ತಲಿರಲಿಲ್ಲ. ಭಾರತದಿತಿಹಾಸದಲ್ಲಿ ಭಾರತೀಯರ ಈ ಗುಣಕ್ಕಾಗಿ ಹೊಂದಿದ ಕಷ್ಟ-ನಷ್ಟಗಳು ಅಪಾರವಾದುವಿವೆ. ಆಧುನಿಕ ಕಾರಣದಲ್ಲಿ ಕೂಡ ಈ ಸಂಗತಿಯು ಪೂರ್ಣ ಮರೆಯಾಗಿಲ್ಲ. ಭಾರತದಲ್ಲಿಯೇ ಹುಟ್ಟಿ ಬೆಳೆದು, ಭಾರತದನ್ನವನ್ನುಣ್ಣುವ ನಾವೆಲ್ಲರೂ ಭಾರತೀಯರೆಂಬ ಒಂದೇ ಒಂದು ಧರ್ಮದಲ್ಲಿ ಐಕ್ಯಭಾವದಿಂದ ನಡೆದು, ಭಾರತದುನ್ನತಿಗೆ ಯತ್ನಿಸಬೇಕಲ್ಲದೆ ನಮ್ಮ ನಮ್ಮಲ್ಲಿಯ ಭಿನ್ನಭಾವನ್ನು ಇನ್ನಾದರೂ ಮರೆಯುವುದು ಯೋಗ್ಯವಾಗಿದೆ. ಇರಲಿ.

ಗಜಪತಿಯು ವಿಜಯನಗರವನ್ನಳಿಸಲು ಮಹಮ್ಮದೀಯರೊಡನೆ ಮಾಡಿದ ಒಳಸಂಚೂ ಮತ್ತು ಅದನ್ನು ನರಪತಿ ಹೊಡೆದು ಹಾಕಿದ ಸಂಗ

ತಿಯೂ ಹಿಂದೆ ಬಂದಿದೆ. ಶ್ರೀಕೃಷ್ಣದೇವರಾಯನ ಬಲವು ಬಹಳವಾಗಿದ್ದಿತೆಂದು ಗಜಪತಿಯರಿತಿದ್ದನು. ಅಂತೆಯೇ ಅವನು ಮೊದಲು ವಿಜಯನಗರ ಸಾಮ್ರಾಜ್ಯಕ್ಕೆ ಸಮೀಪದವರಾದ ಗೋವಳಕೊಂಡ, ಬೇದರ ಮುಂತಾದ ಸ್ಥಳಗಳಲ್ಲಿನ ಸುಲ್ತಾನರು ವಿಜಯನಗರವನ್ನು ನುಗ್ಗಬೇಕೆಂದು ಯೋಜಿಸಿದ್ದನು. ಆ ಸುಲ್ತಾನರಿಗೆ ರಾಯನೆಂದೂ ಹಣಿಯನೆಂದು ಅವನು ತಿಳಿದಿದ್ದನು; ಆದರೆ ಅದರಿಂದ ರಾಯನ ಬಲವು ಬಹಳಮಟ್ಟಿಗೆ ನಷ್ಟವಾಗುವ ಮೂಲಕ, ಅವನು ತನ್ನ ಅಳವಿನೊಳಗೆ ಬಂದಾಗ್ಗೆ ಅವನನ್ನು ಸುಲಭವಾಗಿ ಸೋಲಿಸಬಹುದೆಂದು ಅವನ ಹಂಚಿಕೆಯಾಗಿದ್ದಿತು; ಆದರೆ ರಾಯನ ಬಲವು ಗಜಪತಿಯ ಊಹೆಗೆ ಬಹಳ ಮಿಕ್ಕಿ ಹೊಯಿತು. ಮಹಮ್ಮದೀಯರ ದಾಳಿಯಿಂದ ರಾಯನ ಬಲವು ಕುಂದುವುದರ ಬದಲು ಬೆಳೆಯಿತು; ಏಕೆಂದರೆ, ಮಹಮ್ಮದೀಯರ ದಾಳಿಯಿಂದ ಅಸಂಖ್ಯ ಶಸ್ತ್ರಾಸ್ತ್ರಗಳೂ, ಅಗಣಿತ ಸಂಪತ್ತೂ ದೊರೆಯಿತು. ಅದರಿಂದ ರಾಯನು ತನ್ನ ಬಲವನ್ನು ಬಹಳವಾಗಿ ಬೆಳೆಯಿಸಿದನು.

ರಾಯನು ಮಹಮ್ಮದೀಯ ಸುಲ್ತಾನರನ್ನೆಲ್ಲ ಸೋಲಿಸಿದ ಸಂಗತಿ ಗಜಪತಿಗೆ ತಿಳಿಯಿತು ತಾನು ಊಹಿಸಿದ್ದಂತೆಯೇ ಆಯಿತೆಂದು ತನ್ನ ಮುಂದಿನ ಸಿದ್ಧತೆಗೆ ತೊಡಗಿದನು ರಾಯನು ದಂಡೆತ್ತಿ ಕೊಂಡವೀಡು ಕೋಟೆಗೆ ಬರುತ್ತಲೆ ರಾಯನನ್ನು ಇರುಕಿನಲ್ಲಿ ಹಿಡಿಯಬೇಕೆಂದು ಹೊಳೆಯನ್ನು ಮುಂದಿಟ್ಟುಕೊಂಡು ತಳವೂರಿದನು. ರಾಯನು ಅದಕ್ಕೆ ಬೆದರದೆ ತಾನೇ ಮುಂದೊರೆದು ತನ್ನ ಅಸಮ ಸಾಹಾಸದಿಂದಲೂ, ಅನುಪಮ ಚಾತುರ್ಯದಿಂದಲೂ ಗಜಪತಿಯನ್ನು ಓಡಿಸಲು, ಪ್ರತಾಪ ರುದ್ರದೇವನು ಗಾಬರಿಯಾದನು. ಅದು ವರೆಗೆ ತನ್ನ ಊಹೆಯಂತೆಯೇ ಸಂಭವಿಸಿದುದು ಆಯತ್ತದ ವೇಳೆಯಲ್ಲಿ ತೀರ ವಿಪರೀತವಾಗಲು ಅವನು ಕೈಕಾಲುಗೆಟ್ಟನು. ಒಡನೆಯೇ ಅವನು ಓಡಿ ಸಿಂಹಾದ್ರಿಯನ್ನು ಸೇರಿದನು. ಸಿಂಹಾಚಲವು ಬಲು ಭದ್ರವಾದ ದುರ್ಗವಿದ್ದಿತು. ರಾಯನು ಆರು ತಿಂಗಳು ಮುತ್ತಿಗೆ ಹಾಕಿ ಕುಳಿತರೂ ಕೋಟೆಯ ಒಂದು ಕಲ್ಲು ಕೂಡ ಅಲ್ಲಾಡಿಸಲಾರನೆಂದು ಗಜಪತಿಗೆ ಭರವಸೆಯಿದ್ದಿತು. ಅವಶ್ಯಕವಾದ ಭದ್ರತೆಯೊಡನೆ ತಾನು ತನ್ನ ಮುಂದಿನ ಕಾರ್ಯಕ್ರಮವನ್ನು ಯೋಚಿಸುತ್ತ ಸಿಂಹಾಚಲದಲ್ಲಿ ವಸತಿಹಾಕಿದನು; ಆದರೆ ಅಲ್ಲಿಯೂ ಗಜಪತಿಯ ನಿರೀಕ್ಷಣೆ ತಪ್ಪಿತು. ಕನ್ನಡಿಗರ ಸೇನಾನಿ ರಾಮಲಿಂಗನು ತನ್ನ ಸಾಹಸದಿಂದಲೂ ಬುದ್ಧಿಮತ್ತೆಯಿಂದಲೂ ಕೈವಶ ಮಾಡಿಕೊಂಡ ಸಂಗತಿ ಹಿಂದೆಯೇ ಬಂದಿದೆ.

ಅಂದಿನಿರುಳು ಗಜಪತಿ ತನ್ನ ಒಬ್ಬಿಬ್ಬ ಮಂತ್ರಿಗಳೊಡನೆ ಯೋಚಿಸುತ್ತ ಕುಳಿತಿದ್ದನು. ಹೊರಗಡೆ 'ವೈರಿಗಳು' ಎಂಬ ಕೂಗು ಕೇಳುತ್ತಲೇ ಗಡಬಡಿಸಿಕೊಂಡೆದ್ದು ನೋಡುವಷ್ಟರಲ್ಲಿ ವೈರಿಗಳು ನಿಜವಾಗಿಯೂ ದುರ್ಗಪ್ರವೇಶ ಮಾಡಿರುವಂತೆ ತಿಳಿಯಿತು. ಆ ವೇಳೆಯಲ್ಲಿ ಅವನ ಸ್ಥಿತಿ ಬಹಳ ಶೋಚನೀಯವಾಯಿತು. ಅವನ ಮನೆಮಂದಿಯೆಲ್ಲವೂ ಮಲಗಿದ್ದಿತು. ಸೋಲು-ಗೆಲವುಗಳು ಅನಿಶ್ಚಿತವಿದ್ದರೂ ದುರ್ಗವು ಅಂದೇ ವೈರಿಗಳ ಕೈಸೇರಬಹುದೆಂದು ಅವನೆಂದೂ ಊಹಿಸಿರಲಿಲ್ಲ. ತನ್ನ ಪರಿವಾರದವರ ಭದ್ರತೆಗೆ ಸಾಕಷ್ಟು ಅವಧಿಯಿದೆಯೆಂದು ತಿಳಿದು ಸ್ವಸ್ಥಚಿತ್ತದಿಂದ ತನ್ನ ಮುಂದಿನ ಯೋಚನೆಯಲ್ಲಿ ಮಗ್ನನಾಗಿದ್ದನು ಅವನಿಗೆ ಹೆಚ್ಚಾಗಿ ವಿಚಾರಕ್ಕವಕಾಶವೂ ಇರಲಿಲ್ಲ. ಆದಷ್ಟು ಬೇಗನೆ ಯೋಗ್ಯ ಉಪಾಯ ಕೈಕೊಳ್ಳಬೇಕಾಗಿದ್ದಿತು. ಒಡನೆಯೆ ಅವನು ತನ್ನ ಮನೆಯುವರನ್ನೊಡಗೊಂಡು ಗುಪ್ತಮಾರ್ಗವಾಗಿ ಪೊಟ್ಟನೂರು ಕಿಲ್ಲೆ ಸೇರಬೇಕಾಯಿತು.

ಪೊಟ್ಟನೂರಲ್ಲಿ ನೆಲಸಿದ ಸಮಯದಲ್ಲಿ ಗಜಪತಿಗೆ ನರಪತಿಯ ವಾರ್ತೆಗಳು ಆಗಾಗ್ಗೆ ತಲುಪುತ್ತಲೆ ಇದ್ದುವು. ರಾಯನು ಸಿಂಹಾದ್ರಿಯಲ್ಲಿ ತೋರುತ್ತಲಿದ್ದ ಔದಾಯವನ್ನೂ, ಅವನು ಅಲ್ಲಿನ ಜನತೆಯನ್ನು ಆಕರ್ಷಿಸುತ್ತಲಿದ್ದ ಬಗೆಯನ್ನೂ, ತನ್ನ ಪ್ರಜೆಗಳು ನರಪತಿಯಲ್ಲಿ ಶ್ರದ್ಧೆಯುಳ್ಳವರಾಗುತ್ತಲಿದ್ದ ಸಂಗತಿಯನ್ನೂ ಕೇಳುತ್ತಲಿದ್ದನು. ರಾಯನ ಔದಾರ್ಯವೆಲ್ಲವೂ ರಾಜನೀತಿಯೇ ಎಂದು ಅವನು ತಿಳಿದಿದ್ದನು. ಓರಿಸವನ್ನು ವಿಜಯನಗರಕ್ಕೆ ಜೋಡಿಸಲದ್ಯುಕ್ತನಾದ ರಾಯನು, ಅಲ್ಲಿನ ಪ್ರಜೆಗಳ ಪ್ರೇಮಸಂಪಾದನೆಗೆಂದೇ ಅಷ್ಟೆಲ್ಲ ವ್ಯೂಹ ರಚಿಸಿದ್ದನೆಂದು ಗಜಪತಿಯು ಭಾವಿಸಿದನು. ನರಪತಿಯು ನಡೆಯಿಸಿದುದನ್ನೆಲ್ಲ ಗಜಪತಿ ಕೇಳುತ್ತಲೇ ಇದ್ದನು. ಅದರಿಂದ ಅವನಿಗೆ ತಳಮಳವಾಗುತ್ತಲಿದ್ದಿತ್ತು. ತನ್ನ ಸ್ವಂತದ್ದಾದ ಸ್ಥಳದಲ್ಲಿ ಬೇರೊಬ್ಬನು ಬಂದು ಕುಳ್ಳಿರಲು, ಯಾರಿಗಾದರೂ ಹಾಗೆನಿಸುವುದು ಸಹಜವು.

ತಾನು ಓರಿಸದ ರಾಜ್ಯಕ್ಕೆ ಹೊರತಾಗಿ ಅಡವೀಪಾಲಾಗುವ ಸಮಯ ಬಂದಿತೆಂದು ಗಜಪತಿಯು ಬಹಳವಾಗಿ ಯೋಚಿಸಿದನು. ಅಂದು ಅವನಿಗೆ ಅನೇಕ ಸಂಗತಿಗಳು ಸ್ಮರಣೆಗೆ ಬಂದವು. ರಾಯನು ಇಷ್ಟು ಬಲಶಾಲಿಯಿರಬಹುದೆಂದು ಅವನು ಕನಸು-ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ ರಾಯನ ಬಲದ ಕಲ್ಪನೆ ಅವನಿಗಿದ್ದುದಾಗಿದ್ದರೆ ಅವನೆಂದೂ ಕನ್ನಡ ರಾಜ್ಯಕ್ಕೆ ದಾಳಿಯಿಕ್ಕುತ್ತಲಿರಲಿಲ್ಲ. ಕನ್ನಡಿಗರಿಗೂ ತನಗೂ ನಡುವಿರುವ ಅಂತರ ಬಹಳ.

ಬಹಳ. ಮಧ್ಯದಲ್ಲಿ ಮಹಮದೀಯರು ಅವರನ್ನು ಸೋಲಿಸಿ ತನ್ನ ರಾಜ್ಯದ ವರೆಗೆ ರಾಯನು ಬರಲಾರನೆಂದೇ ಅವನ ಕಲ್ಪನೆ; ಆದರೆ ಸತ್ಯವು ಕಲ್ಪನೆಯಂತಾಗದೆ, ತೀರ ಭಿನ್ನವಾಯಿತು.

ಹೀಗೆ ಗಜಪತಿಯು ಚಿಂತಾಕ್ರಾಂತನಾಗಿ ಕುಳಿತಿರುವಾಗಲೆ ಆತನ ಪ್ರೀತಿಯ ಪುತ್ರಿ ಜಗನ್ಮೋಹಿನಿ ಅಲ್ಲಿಗೆ ಬಂದಳು. ತಂದೆ ಸೋಲಿನಪಮಾನದಲ್ಲಿ ಬೆಂದು ಹೋಗುತ್ತಲಿದ್ದುದನ್ನು ನೋಡಿ ಆಕೆಗೆ ಅತೀವ ಕಳವಳವಾಯಿತು ಪ್ರೇಮಭರದಿಂದ ತಂದೆಯ ಬಳಿಯಲ್ಲಿ ಕುಳಿತು ಪ್ರೇಮಪೂರ್ಣ ಸ್ವರದಿಂದ 'ಪಿತಾಜೀ' ಎಂದಳು

ಪ್ರತಾಪರುದ್ರದೇವ ಸಮಾಧಿಯಿಂದೆಚ್ಚತ್ತನು. ಎದುರಿನಲ್ಲಿ ಮಮತೆಯ ಮಗಳು ಜಗನ್ಮೋಹಿನಿ ಕುಳಿತುದನ್ನು ನೋಡಿ, ಆತನಿಗೆ ಬಹಳ ಸಂಕಟವಾಯಿತು. ನಡುಗುವ ಸ್ವರದಲ್ಲಿ 'ಮಗು, ಮೋಹಿನಿ, ಪ್ರತಾಪರುದ್ರದೇವನ ಪ್ರತಾಪವೆಲ್ಲವೂ ಅಡಗಿ ಹೋಯಿತು. ಇನ್ನು ನಿನ್ನ ಪಿತಾಜಿಯು ಪುರುಷನಿದ್ದರೂ ಸ್ತ್ರೀಗಿಂತಲೂ ಕೀಳನಾಗಿರುವನು ಇದುವರೆಗೆ ಸಮ್ರಾಟನಿದ್ದ ಗಜಪತಿಯು ಇಂದು ಕೀಳರಿಗಿಂತಲೂ ಕೀಳನಾಗಿರುವನು. ನನ್ನ ವಿಷಯಕ್ಕೆ ನನಗೆ ಯೋಚನೆಯೇನೂ ಇಲ್ಲ, ಆದರೆ . '

'ಆದರೇನು ಪಿತಾಜಿ? ನೀವು ಇನ್ನೇತರ ವಿಷಯಕವಾಗಿ ದುಃಖಿಸುವಿರಿ?'

'ಏತರವಿಷಯಕವಾಗಿಯೆಂದರೇನು ಮಗು? ವಿಶಾಲ ಕಲಿಂಗ ಸಾಮ್ರಾಜ್ಯಕ್ಕಾಗಿ-ಇದುವರೆಗೆ ಸ್ವಾತಂತ್ರ್ಯಾನಂದದೊಳು ಮುಳುಗಿ ಹೋಗಿ ಸುಖವನುಭವಿಸಿದ ನಮ್ಮ ಪ್ರಜರ ಸಲುವಾಗಿ-ರಾಜವೈಭವದಿಂದ ಮೆರೆದು ಸಕಲಾನಂದವನ್ನನುಭವಿಸಿದ ನನ್ನ ಮನೆತನದವರಾದ ನಿಮ್ಮೆಲ್ಲರ ಸಲುವಾಗಿ.

'ಪಿತಾಜಿ, ಹೀಗೆ ಚಿಂತೆಯಲ್ಲಿ ಕೊರಗುವುದರಿಂದಾಗುವ ಲಾಭವೇನು? ಸೋಲು-ಗೆಲವುಗಳು, ಸಿರಿತನ-ಬಡತನಗಳು ಸ್ಥಿರವಾದುವೆ? ಮತ್ತು ಹೀಗೆ' ಚಿಂತೆಯಲ್ಲಿ ಕುಳಿತುಬಿಟ್ಟರೆ ಮುಂದಿನ ಕಾರ್ಯಹಾನಿಯಾಗುವದಲ್ಲದೆ, ಶರೀರ ಸ್ವಾಸ್ಥ್ಯಯೂ ಕೆಡುವ ಸಂಭವವಿದೆ. ಇದಲ್ಲದೆ ನಮ್ಮ ದೇಶದ ವಿಷಯಕವಾಗಿಯಾಗಲಿ ಜನತೆಯ ವಿಷಯಕವಾಗಿಯಾಗಲಿ ಅಷ್ಟು ಭೀತರಾಗಲು ಕಾರಣವಿಲ್ಲ.' 'ಅದೇಕೆ ಮಗು?'

'ಏಕೆಂದರೇನು ಪಿತಾಜಿ? ಕನ್ನಡದೊರೆಯು ನಮ್ಮ ದೇಶವನ್ನು ಸ್ವಬಾಹುಸಾಮರ್ಥ್ಯದಿಂದ ಗೆದ್ದಿರಬಹುದು, ನಮ್ಮ ರಾಜ್ಯವನ್ನು ಕೈವಶಮಾಡಿಕೊಳ್ಳ ಬಂದ ಪರಕೀಯನಿರಬಹುದು, ನಮ್ಮ ನಾಡಿಗೆ, ನಮ್ಮ ಜನತೆಗೆ ತೀರಾ ಹೊಸಬನಿರಬಹುದು; ಆದರ ' 'ಆದರೆ ಏನು?'

'ಕರ್ನಾಟಕದರಸು ನಮ್ಮ ನಾಡವರ ಮೇಲೆ ಯಾವ ವಿಧವಾಗಿಯೂ ಬಲುಮೆ ಮಾಡನು. ನಮ್ಮ ಸಾಮ್ರಾಜ್ಯವನ್ನು ತನ್ನ ರಾಜ್ಯಕ್ಕೆ ಜೋಡಿಸಿ ಕೊಂಡ ಮೇಲೆ ಇದನ್ನು ತನ್ನ ಪ್ರಜೆಗಳಿಗಿಂತಲೂ ಯಾವ ವಿಧದಲ್ಲಿಯೂ ಕೀಳ್ಮೆ ಯಿಂದ ನೋಡನು. ನಮ್ಮ ನಾಡವರ ನೆಮ್ಮದಿಗೆ ನಸುವಾದರೂ ಭಂಗಬರಲಿ ಕ್ಕಿಲ್ಲ. ಈಗಿರುವಂತೆಯೇ ಮುಂದೂ ಅವರು ಸುಖವಾಗಿಯೇ ಇರಬಹುದು.'

"ಅದು ಹೇಗೆ ಹೇಳುತ್ತೀ ಮಗು?"

"ನಿತ್ಯವೂ ಸಿಂಹಾಚಲದಲ್ಲಿ ಕನ್ನಡದರಸು ತೋರುತ್ತಲಿರುವ ಔದಾರ್ಯವನ್ನು ನೀವು ಕೇಳಿಲ್ಲವೆ? ಆತನು ಪ್ರತಿನಿತ್ಯ ಮಾಡುತ್ತಲಿರುವ ದಾನ-ಧರ್ಮಗಳನ್ನೂ, ಕೊಡುತ್ತಲಿರುವ ಸಿರಿ-ಸಂಪತ್ತುಗಳನ್ನೂ, ನೀಡುತ್ತ ಲಿರುವ ಅನ್ನ-ನೀರುಗಳನ್ನೂ ನೀವರಿತಿಲ್ಲವೆ?'

"ಮಗು ಮೋಹಿನಿ, ನೀನಿನ್ನೂ ರಾಜಕಾರಣದ ಮರ್ಮವರಿಯುವಷ್ಟು ಬಲ್ಲಿದಳಾಗಿಲ್ಲ. ಎಲ್ಲರಂತೆ ನೀನೂ ಮೋಸ ಹೋಗುವೆ"

"ಅಂದರೇನು ಪಿತಾಜಿ?"

"ಮಗು, ಕರ್ನಾಟಕದರಸು ಈಗ ನಡೆಯಿಸಿರುವದು ಅವನ ನಿಜ ಔದಾರ್ಯವಲ್ಲ. ಅವನು ಕೊಡಗೈಯಿಂದ ನೀಡುತ್ತಿರುವದು ನಮ್ಮ ನಾಡವರನ್ನು ಸುಖಿಸಬೇಕೆಂಬ ಇಚ್ಛೆಯಿಂದಲ್ಲ" "ಹಾಗಾದರಿನ್ನೇನು?"

"ನಮ್ಮ ಪ್ರಜೆಗಳ ಹೃದಯಗಳನ್ನು ಅಪಹರಿಸಬೇಕಾಗಿದೆ, ತಾನು ಉದಾರಿಯೂ ದಾನಿಯೂ ಎಂದು ನಮ್ಮ ಜನತೆ ಭಾವಿಸುವಂತೆ ಮಾಡಬೇಕಾ ಗಿದೆ. ನಮ್ಮ ಜನತೆಯನ್ನು ಸಂಪೂರ್ಣವಾಗಿ ಆಕರ್ಷಿಸಬೇಕಾಗಿದೆ."

'ರಾಜಕಾರಣವೇನೋ ಹಾಗಿರಬಹುದು; ಆದರೆ ' 'ಆದರೇನು?'

"ಇದು ವರೆಗೆ ಭಾರತದ ಮೇಲೆ ದಂಡೆತ್ತಿ ಬಂದ ಅನೇಕ ರಾಜರಲ್ಲಿ ಒಬ್ಬ ನಾದರೂ ಹೀಗೆ ಮಾಡದೆ ಸೋತ ರಾಷ್ಟ್ರವನ್ನು ಸಂಪೂರ್ಣವಾಗಿ ನಷ್ಟ ಗೊಳಿಸಿದುದರ ಕಾರಣವೇನು? ಜನತೆಯ ಮಾನ-ಪ್ರಾಣಗಳನ್ನು ತುಳಿದು ಹಾಕಿದುದೇಕೆ? ಕ್ರೂರ ಪಶುಗಳಿಗಿಂತಲೂ ಹೀನತರವಾಗಿ ಅವರು ವರ್ತಿಸಿದು ದೇಕೆ? ಅವರಿಗೆ ರಾಜಕಾರಣ ತಿಳಿದಿರಲಿಲ್ಲವೆ? ಅವರ ಹಾಗೆ ಕನ್ನಡದರಸೂ ಮಾಡಿದ್ದರೆ ಅವನನ್ನಾರು ಕೇಳುವವರಿದ್ದರು? ಪಿತಾಜಿಯವರೇ, ಅಂತಹರ ಆ ಪರರಾಜರೊಡನೆ ಹೋಲಿಸಿದಲ್ಲಿ ನರಪತಿಯು ನೂರು ಪಾಲು ಮೇಲೆಂದು ತೋರುವುದಿಲ್ಲವೆ?"

'ಬರಿಯ ನೂರೇಕೆ? ಮೋಹಿನಿ, ಸಾವಿರವೆನ್ನು. ಅಂತಹ ನೀಚರಿ ಗಿಂತಲೂ ನರಪತಿ ಲಕ್ಷಾವಧಿ ಪಟ್ಟು ಶ್ರೇಷ್ಠನಿರುತ್ತಾನೆ. ನಮ್ಮ ಕಲಿಂಗವು

ಸೋತಿದ್ದರೂ ಅದಕ್ಕೆ ಅಂತಹ ಹಾನಿಯಾಗಿಲ್ಲ. ಕಲಿಂಗ ಮಹಿಳೆಯರ ಮಾನ-ಮನ್ನಣೆಗಳಿಗೆ ಕಿಂಚಿತ್ತಾದರೂ ಭಯವಿಲ್ಲ. ನಮ್ಮ ಸಿರಿ-ಸಂಪತ್ತುಗಳಿಗೆ ಅತ್ಯಲ್ಪವಾದರೂ ಧಕ್ಕೆಯಿಲ್ಲದಾಗಿದೆ. ಏನಾದರೂ ಸೋತಿರುವೆವೆಂಬದು ಬೇರೆ ಸಟಿಯಲ್ಲವಷ್ಟೆ?'

'ಅಹುದು. ಅದಕ್ಕೆ ಅಲ್ಲವೆನ್ನುವುದೆಂದಶಕ್ಯವಿದೆ?'

'ಆ ಶಲ್ಯವು ನನ್ನ ಎದೆಯಲ್ಲಿ ನಾಟಿದೆ '

'ಅಹುದು. ಪಿತಾಜಿ, ಅದನ್ನು ನಾನು ಬಲ್ಲೆ; ಆದರೆ ಅದರಿಂದ ದೇಹಕ್ಕೆ ಅಪಾಯ ಮಾಡಿಕೊಳ್ಳುವುದರಿಂದ ಲಾಭವೇನು?'

'ಅದನ್ನಾದರೂ ನಾನು ಬಲ್ಲೆ.'

'ಹಾಗಾದರೆ ಹೀಗೆ ಚಿಂತಾಕ್ರಾಂತರಾಗಿ ಕುಳಿತಿರುವುದು ಯೋಗ್ಯವಲ್ಲವೆಂದು ನನ್ನ ಕಲ್ಪನೆ. ದಯವಿಟ್ಟು ಇನ್ನು ನಿಮ್ಮ ಶರೀರಸ್ವಾಸ್ಥ್ಯಕ್ಕೆ ತೊಂದರೆಯಾಗದಂತೆ ನಡೆಯಬೇಕೆಂದು ನನ್ನ ಬಿನ್ನಹವಿದೆ. ನಿಮ್ಮ ಪ್ರೀತಿಯ ಈ ಪುತ್ರಿಯ ಬಿನ್ನಹಕ್ಕೆ ಮನ್ನಣೆಕೊಡುವಿರಾ?'

'ಮಗು ಮೋಹಿನಿ ಇಂದು ನೀನು ನನ್ನ ಕಣ್ಣು ಚೆನ್ನಾಗಿ ತೆರೆದೆ. ಇಲ್ಲ, ಇನ್ನು ನಿನ್ನ ಪ್ರೇಮಳ ಆಜ್ಞೆಯನ್ನು ತಪ್ಪದೇ ಪಾಲಿಸುವೆನು. ನಾನೀಗಲೆ ನಿರಾಶನಾಗಿಲ್ಲ ನಮ್ಮ ಕಲಿಂಗ ದೇಶದ ಸ್ವಾತಂತ್ರ್ಯಧ್ವಜ ಮೆರೆಯಿಸಲು ನಮ್ಮ ಬಳಿಯಲ್ಲಿ ಇನ್ನೂ ಎದೆಷ್ಟೋ ಬಲವಿದೆ. ನಮ್ಮ ಕಲ್ಪನೆ ಬೇರೆಯಾಗಿದ್ದಿತು. ನರಪತಿ ಇಷ್ಟು ಬಲಿಷ್ಠನಿರಬಹುದೆಂದು ನಾನು ಊಹಿಸಿಸಲಿಲ್ಲ. ನಮ್ಮವರೆಲ್ಲರೂ ಸುಸಂಘಟಿತರಾಗಿ ಮುಂದಾಗಿದ್ದರೆ ಈ ಸೋಲು ಬರುತ್ತಲೇ ಇರಲಿಲ್ಲ ಇನ್ನಾದರೂ ನಾವು ನಮ್ಮ ಬಲವನ್ನೆಲ್ಲ ಒಂದುಗೂಡಿಸಿ ನಿಲ್ಲಬೇಕಾಗಿರುವದು '

'ನಾನು ಹೇಳುವುದಾದರೂ ಅದೇ ಇರುತ್ತದೆ. ಹೀಗೆ ಸುಮ್ಮನೆ ಕುಳಿತಿರುವುದಕ್ಕಿಂತಲೂ ಹುರುಪಿನಿಂದ ಮುಂದಾಗಬೇಕೆಂದು ನನ್ನ ವಿಚಾರ.'

'ಮೋಹಿನಿ, ನಾಳೆ ಜಗನ್ನಾಥನ ರಥೋತ್ಸವವಲ್ಲವೆ?'

'ಅಹುದು ಪಿತಾಜಿ, ಮತ್ತು ನಾನು ಬಂದುದಾದರೂ ಅದಕ್ಕೆಂದೇ; ಆದರೆ ಮಾತಿನಲ್ಲಿ ಮರತೇ ಹೋಯಿತು. ನಾಳೆ ಜಗನ್ನಾಥನ ದರ್ಶನಕ್ಕೆ ಹೋಗಲು ಆತಂಕವೇನು?'

'ಅವಶ್ಯವಾಗಿ ಹೋಗು. ನರಪತಿಯು ನಮ್ಮ ರಾಜ್ಯವನ್ನು ವಶಪಡಿಸಿಕೊಂಡಿದ್ದರೂ, ಅದರಿಂದ ನಮ್ಮ ಹೆಣ್ಣುಮಕ್ಕಳು ಭೀತರಾಗಲು ಕಾರಣವೇನೂ ಇಲ್ಲ. ಸ್ವಾತಂತ್ರ್ಯದಲ್ಲಿದ್ದಂತೆಯೇ ಅವರು ನಿರ್ಭಯರಾಗಿ ತಿರು

ಗಾಡಬಹುದು. ಆದುದರಿಂದ ನಾಳೆ ನೀವು ನಿರಾತಂಕವಾಗಿ ಹೋಗಬಹುದು.'

'ಮತ್ತೆ ನೀವು ಬರುವುದಿಲ್ಲವೆ?'

'ನಾನಾದರೂ ಬರುವೆನು; ಆದರೆ ನಮಗೂ ನಿಮಗೂ ಹೊಂದುಗೂಡ ಲಿಕ್ಕಿಲ್ಲ. ನಾಳೆ ಬೆಳಗಿನಲ್ಲಿಯೇ ಅಮಾತ್ಯ ದಾಮೋದರ ಶರ್ಮರು ಬರುತ್ತ ಲಿರುವರು. ನಾವು ಮುಂಗಾಳಗದ ಬಗ್ಗೆ ಯೋಚಿಸಬೇಕಾಗಿದೆ. ರಥೋ ತ್ಸವದ ಸಮಯಕ್ಕೇನೇ ನಾವು ಬರಬಹುದು. ಆಗ್ಗೆ ಜನಸಂದಣಿ ಬಹಳ ವಾಗುವ ಮೂಲಕ ದೇವದರ್ಶನಕ್ಕೆ ತೊಂದರೆಯಾಗಬಹುದು. ಮುಂಜಾವಿ ನಲ್ಲಿಯೇ ನೀವು ಹೋಗಿ ದೇವದರ್ಶನ ಪಡೆಯುವುದೊಳಿತು.'

'ಹಾಗಾದರೆ ನಾವು ಮುಂಜಾವಿನಲ್ಲಿಯೇ ಹೋಗೋಣವೆ?'

'ಅಹುದು. ಮುಂಜಾವಿನಲ್ಲಿಯೇ ಹೋಗಿ ಬಿಡಿರಿ; ಆದರೆ ವಿಶೇಷ ಆಡಂ ಬರವನ್ನೇನೂ ಇಟ್ಟುಕೊಳ್ಳಬೇಡಿರಿ.'

'ಛೆ! ಎಲ್ಲಿಯದು? ರಾಜಪರಿವಾರವೆಂದು ತಿಳಿಯಗೊಡದಂತೆ ಹೋಗಿ ಬರುವೆವಲ್ಲದೆ, ಕಿಂಚಿತ್ತಾದರೂ ಆಡಂಬರ ತೆಗೆದುಕೊಳ್ಳುವುದಿಲ್ಲ.'

'ಹಾಂ. ಹಾಗೆಯೇ ಮಾಡಿರಿ. ನೀನೇನರಿಯದವಳೆ? ಹೊತ್ತು ಬಂದ ಹಾಗೆ ನಮ್ಮ ಸ್ಥಿತ್ಯಂತರಗಳಲ್ಲಿ ಮಾರ್ಪಾಟು ಮಾಡಬೇಕಾಗುವುದು.'

ಮರುದಿನವೇ ಶ್ರೀ ಜಗನ್ನಾಥನ ರಥೋತ್ಸವವು. ಅಂದಿನ ಆ ಜನ ಸಂದಣಿ, ಆ ಅಂಗಡಿಗಳು, ಆ ಜನತೆಯಲ್ಲಿನ ವಿಲಕ್ಷಣ ಉತ್ಸಾಹ-ಉಲ್ಲಾಸ ಗಳು ಅವರ್ಣನೀಯವಾಗಿದ್ದುವು. ನಾಗರಿಕತೆ ಈಗಿನಂತೆ ಸುಧಾರಣಾ ಶಿಖರ ವನ್ನು ತಲುಪಿರಲಿಲ್ಲವಾದುದರಿಂದ ಜನತೆಯಲ್ಲಿ ಜಗನ್ನಾಥನ ವಿಷಯಕ್ಕೆ ಭಕ್ತಿ ಪ್ರೇಮಗಳು ಬಹಳವಾಗಿದ್ದುವು. ಶ್ರೀ ಜಗನ್ನಾಥನೆಂದರ ಸಕಲ ಜಗತ್ತನ್ನು ನಿರ್ಮಿಸಿ, ಪಾಲಿಸಿ, ಲಯಮಾಡುವ ಸಕಲ ಜಗನ್ನಾಯಕನೆಂದೇ ಜನತೆ ತಿಳಿ ದಿದ್ದರಲ್ಲದೆ ಜಗನ್ನಾಥನೆಂದರೆ ಒಂದು ಕಲ್ಲುಲಿಂಗವೆಂಬ ವಿಚಾರ ಒಬ್ಬನಿಗೂ ಬರಲಿಲ್ಲ. ಅಂತಹ ಜಗನ್ನಾಥನ ದರುಶನ ತೆಗೆದುಕೊಳ್ಳುವದೆಂದರೆ, ತಮ್ಮ ಪಾಪಗಳನ್ನು ತೊಳೆದು ಮುಕ್ತಿಗೆ ಮಾರ್ಗ ಮಾಡಿ ಕೊಳ್ಳುವುದೇ ಎಂದು ಎಲ್ಲರೂ ಭಾವಿಸಿದ್ದರು. ಅದರಲ್ಲಿಯೂ ಅಂದು ಜಗನ್ನಾಥನ ರಥೋತ್ಸವ. ಅಂದು ಆ ಉತ್ಸವವನ್ನು ಕಣ್ತುಂಬ ನೋಡಿ ಜನ್ಮಸಾರ್ಥಕ್ಯ ಸಾಧಿಸುವುದೇ ಪ್ರತಿಯೊಬ್ಬನ ಅಂತಿಮೋದ್ದೇಶವೆಂದು ಅವರು ನಂಬಿದ್ದರು. ಅಂತೆಯೇ ಜನರು ಹಿಂಡುಗಟ್ಟಿಕೊಂಡು ದೂರ ಪ್ರದೇಶಗಳಿಂದ ಬರುತ್ತಲಿದ್ದರು. ಆ ಪ್ರದೇ ಶವೇ ಒಂದು ಜನಮಯ ಸಾಗರದಂತೆ ಕಾಣಿಸಿದರೆ, ತಂಡತಂಡವಾಗಿ ಬರುವ ಜನಹಿಂಡು ವೇಗವಾಗಿ ಹರಿಯುವ ನದಿನದಗಳಂತೆ ಕಾಣುತ್ತಲಿತ್ತು.

ಅಂದು ಆ ಸ್ಥಲದ ಶೋಭೆ ಅವರ್ಣನೀಯವಾಗಿದ್ದಿತು. ರಾಜ-ರಂಕ, ಪಂಡಿತ-ಪಾಮರ, ಕುಲೀನ-ಕುಲಹೀನ ಮುಂತಾಗಿ ಯಾವ ಭೇದಗಳನ್ನೂ ಎಣಿಸದೇ ಲಕ್ಷೋಪಲಕ್ಷ ಜನರು ಅಲ್ಲಲ್ಲಿ ಬೀಡುಬಿಟ್ಟಿದ್ದರು. ಸ್ವಚ್ಛವಾಗಿ ಹರಿಯುವ ವಿಶಾಲವಾದ ನದಿಯು ಅವರಿಗೆ ಅತೀವ ಆನಂದವನ್ನುಂಟು ಮಾಡಿದ್ದಿತು. ಸಾವಿರಾರು ಜನರು ತಮ್ಮ ಸ್ನಾನಾಹ್ನಿಕಗಳಲ್ಲಿ ನಿಮಗ್ನರಾಗಿ ನದಿಯ ದಂಡೆಯಲ್ಲಿ ಕುಳಿತಿದ್ದರು. ಅನೇಕರು ತಮ್ಮ ವಸ್ತ್ರಗಳನ್ನು ಸ್ವಚ್ಛಮಾಡುವುದರಲ್ಲಿದ್ದರು. ಇನ್ನೂ ಅನೇಕರು ಚಕ್ಕಂದದಿಂದ ನದಿಯಲ್ಲಿ ಈಸುತ್ತಲಿದ್ದರು ಅಲ್ಲಲ್ಲಿ ತಮ್ಮ ವಸ್ತ್ರಗಳನ್ನು ಆರಹಾಕಿ, ಸಮೀಪದಲ್ಲಿ ಗುಂಪುಗೂಡಿ ಕುಳಿತ ಜನರಲ್ಲಿ ಅನೇಕ ಬಗೆಯ ಚರ್ಚೆ ನಡೆದಿದ್ದಿತು. ರಾಜಕೀಯ, ಸಾಮಾಜಿಕ, ವೈದಿಕ ವಿಷಯುಗಳೆಲ್ಲವುಗಳಿಗೂ ಚರ್ಚೆಯಲ್ಲಿ ಪೂರ್ಣ ಅವಕಾಶ ದೊರೆತಿದ್ದಿತು. ಅಷ್ಟೆಲ್ಲವುಗಳಲ್ಲಿಯೂ ಮುಖ್ಯವಾದ ವಿಷಯವೆಂದರೆ, ಕನ್ನಡ ಪ್ರಭುವಿನ ಗುಣಗಾನ-ಕರ್ನಾಟಕದರಸಿನ ಔದಾರ್ಯದ ಬಣ್ಣನೆಯೇ-ಅಲ್ಲಿಯ ಮುಖ್ಯ ವಿಷಯವಾಗಿದ್ದಿತು ಪ್ರತಿಯೊಬ್ಬನೂ ಮುಕ್ತಕಂಠದಿಂದ ಶ್ರೀಕೃಷ್ಣದೇವರಾಯನನ್ನು ಹೊಗಳುತ್ತಲಿದ್ದರು. ನರಪತಿಯ ಉದಾರಚರಿತವು ಅಲ್ಲಿಯ ಎಲ್ಲರ ಹೃನ್ಮನಗಳನ್ನೂ ಸೆಳೆದುಬಿಟ್ಟಿದ್ದಿತು.

'ಹರಹರ ಮಹಾದೇವ' ಎಂಬ ಜಯಘೋಷವು ಹತ್ತೂದಿಕ್ಕುಗಳನ್ನು ತುಂಬಿಬಿಟ್ಟಿದ್ದಿತು. ಆ ಘಂಟಾರವ, ಭಜನೆಯ ನಾದ, ಸಂಗೀತದ ಸುಸ್ವರ, ನಾರಿಯರಿಂಚರ ಇವೆಲ್ಲವೂ ಒಂದುಗೂಡಿ ಅತ್ಯಂತ ಮಧುರತಮ, ಸ್ವರ್ಗೀಯ ಸುಮಧುರ ಸ್ವರವೊಂದನ್ನುಂಟು ಮಾಡಿ, ಕೇಳುವವರ ಕರ್ಣರಂಧ್ರಗಳನ್ನು ಭೇದಿಸಿ, ಹೃದಯಗಳಲ್ಲಿನ ಕಲ್ಮಷವನ್ನೆಲ್ಲ ನಶಿಸಿ, ಆತ್ಮದಲ್ಲಿ ಪಾವಿತ್ರ್ಯ ಸ್ಥಾಪನೆ ಮಾಡಿಬಿಡುವಂತಿದ್ದಿತು. ಅಲ್ಲಿದ್ದ ಜನತೆಯೆಲ್ಲ ಒಂದು ಉಚ್ಚ ಭಾವನೆಯಿಂದ ಪ್ರೇರಿತವಾಗಿ ಹೋಗಿದ್ದಿತು. ಜೀವನ ಸಾರ್ಥಕತೆಯಾಗುವುದೆಂದೇ ಎಲ್ಲರೂ ಭಾವಿಸಿ ಅಲ್ಲಿ ನೆರೆದಿದ್ದರು. 'ನಿತ್ಯದ ವ್ಯವಹಾರಗಳು, ತೊಂದರೆಗಳು ಎಲ್ಲವೂ ಇದ್ದೇ ಇರುತ್ತವೆ, ಆದರೆ ಜಗನ್ನಾಥನ ರಥೋತ್ಸವ ಸಿಕ್ಕುತ್ತದೆಯೆ? ಅದನ್ನೊಂದು ಸಲ ನೋಡಿದರೆ ಕಣ್ಣು ಸಾರ್ಥಕವಾಗುತ್ತವೆ, ಮನಸ್ಸು ತಣಿಯುತ್ತದೆ, ದೇಹವು ಪ್ರವಿತ್ರವಾತ್ತದೆ, ಜನ್ಮ ಸಫಲವಾಗುತ್ತದೆ.' ಎಂದು ಎಲ್ಲರೂ ದೃಢವಾಗಿ ನಂಬಿಟ್ಟು ತಮ್ಮ ಮನೆಮಾರುಗಳೆಲ್ಲವನ್ನು ಕೆಲ ಕಾಲ ಮರತೇ ಅಲ್ಲಿ ಬಂದಜಗನ್ನಾಥನ ಪೂಜೆ, ಧ್ಯಾನಗಳಲ್ಲಿ ತೊಡಗಿದ್ದರು.

ಜಗನ್ನಾಥ ದೇವಾಲಯದ ನೋಟವಂತೂ ಪುರಾಣದೊಳಗಿನ ಕೈಲಾಸವನ್ನು ಮರೆಯಿಸುವಂತಿದ್ದಿತು. ಭಕ್ತವೃಂದ ಮೈಮೇಲೆ ಎಚ್ಚರಿಲ್ಲದೆ ಭಕ್ತಿಯ

ಹುಚ್ಚಿನಲ್ಲಿ ಕುಣಿಯುತ್ತಲಿದ್ದರೂ ಅನೇಕರು 'ನಾಮುಂದೆ' 'ನಾಮುಂದೆ' ಎಂದು ಜಗನ್ನಾಥನ ಪೂಜೆಗೆ ನುಗ್ಗುತ್ತಲಿದ್ದರು. ಆಗಲೆ ಪೂಜೆ ಕೊನೆಗಾಣಿಸಿದವರು ಹೃಷ್ಟಮನಸ್ಕರಾಗಿ ಮರಳುತ್ತಲಿದ್ದರು. ಅರ್ಚಕರಿಗಂತೂ ಅಲ್ಪವಾದರೂ ಅವಕಾಶವಿರಲಿಲ್ಲ. ಬಂದಬಂದವರನ್ನು ಆದರಿಸಿ ಕರೆತಂದು, ವಿನಯಪೂರ್ವಕವಾಗಿ ಪೂಜಾಸಾಮಗ್ರಿಗಳನ್ನಿತ್ತು, ವಿಧಿಪೂರ್ವಕವಾಗಿ ಪೂಜೆ ಮಾಡಿಸುವದರಲ್ಲಿ ಅವರಿಗೆ ಸಾಕುಸಾಕಾಗಿಹೋಗುತ್ತಲಿದ್ದಿತು. ಗಳಿಗೆ ಗಳಿಗೆಗೂ ಭಕ್ತವೃಂದ ನುಗ್ಗುತ್ತಲೆ ಇದ್ದಿತು ಎಲ್ಲಿ ನೋಡಿದರೂ ತಳಿರು,-ತೋರಣಗಳು, ಕರ್ಪೂರ-ದೀಪಗಳು, ಊದಬತ್ತಿಗಳು ಮುಂತಾಗಿ ಪವಿತ್ರ ವಾತಾವರಣದಿಂದಲೇ ತುಂಬಿಹೋಗಿದ್ದಿತು.

ಕೈಲಾಸವನ್ನು ಮರೆಯಿಸುವ ಆ ನೋಟದಿಂದ ನರಪತಿಯು ಆನಂದ ತುಂದಿಲನಾದನು. ಆತನು ಬೆಳಗಿನಲ್ಲಿಯೇ ತನ್ನ ಸೇನಾನಿ ರಾಮಲಿಂಗನನ್ನೊಡಗೂಡಿ ಆ ಸ್ಥಳಕ್ಕೆ ಬಂದಿದ್ದನು ಪಂಪಾಪತಿಯ ಉತ್ಸವ ಆತನ ಸ್ಮರಣೆಗೆ ಬಾರದಿರಲಿಲ್ಲ

'ರಾಮಲಿಂಗ, ನೋಡಿದೆಯಾ ಈ ಉತ್ಸವದ ಶೋಭೆಯನ್ನು?'

'ಶೋಭೆ ಅವರ್ಣನೀಯವಾಗಿದೆ ಪ್ರಭುಗಳೇ, ಮುಂಜಾವಿನಿಂದಲೂ ನಾನು ಪಂಪಾಪತಿಯ ಸನ್ನಿಧಾನದಲ್ಲಿದ್ದಂತೆ ಭ್ರಮೆಯಾಗತೊಡಗಿದೆ'

'ನಿಜವಾಗಿಯೂ ಇಲ್ಲಿಯವರ ಭಕ್ತಿ-ಶ್ರದ್ಧೆಗಳು ಅವರ್ಣನೀಯವಾಗಿವೆ'

'ಅಹುದು ಮಹಾಪ್ರಭು ಇನ್ನೊಂದು ವೈಶಿಷ್ಟ್ಯವನ್ನು ನೀವು ಅವಲೋಕಿಸಿರಬಹುದು' 'ಅದೇನು?'

'ಸದ್ಯ ಕಲಿಂಗನಾಡು ಪರಾಜಿತವಾಗಿದ್ದರೂ, ಪರಕೀಯರ ಭೀತಿಯಿಲ್ಲದೆ ಸಕಲ ಸ್ತ್ರೀ-ಪುರುಷರು ಸಮ್ಮಿಲಿತರಾಗಿರುವರು. ಅವರು ಸೋಲನ್ನೂ ಮರೆತಂತೆ ಈ ಉತ್ಸವದಲ್ಲಿ ಪಾತ್ರ ವಹಿಸಿರುವರು.'

'ರಾಮಲಿಂಗ, ಅದು ನಿಮ್ಮಗಳ ಕರ್ತೃತ್ವಶಕ್ತಿಯ ಪರಿಣಾಮ ಕಲಿಂಗನಾಡವರು ಪರಕೀಯರಿಂದ ಸೋಲನ್ನು ಸಂಪಾದಿಸಿದ ಸಂಗತಿಯ ಸ್ಮರಣೆಯನ್ನೇ ಮರೆತಿರುವರು. ನಿವೆಲ್ಲರೂ ಸುವ್ಯವಸ್ಥಿತವಾಗಿ ಕಿಂಚಿತ್ತಾದರೂ ಇಲ್ಲಿಯವರಿಗೆ ಪೀಡೆಯಾಗದಂತೆ ದಕ್ಷರಾಗಿರುವ ಮೂಲಕವೇ ಈ ಜನರು ಹೀಗೆ ನಿರ್ಭೀತರಾಗಿರುವರು.'

'ಎಲ್ಲಿ ನೋಡಿದರೂ ದೊರೆಗಳ ಗುಣಗಾನವೇ ನಡೆದಿದೆ.'

'ಅದಾದರೂ ನಿಮ್ಮದೇ. ಈ ಶ್ರೇಯಸ್ಸೆಲ್ಲವೂ ನಿಜವಾಗಿಯೂ ಕನ್ನಡನಾಡಿನ ವೀರ ಚತುರ ಸೇನಾಪತಿಯಾದ ನಿನಗೇ ಸಲ್ಲುವುದು.'

ಹೀಗೆ ಕರ್ನಾಟಕ ಸಾಮ್ರಾಜ್ಯದೊಡೆಯರ ಗುಣಗಾನ ಮಾಡುವ ಅವರಿಗೆ ಆ ಮಹಾಪ್ರಭುವು ತಮ್ಮ ಮಧ್ಯದಲ್ಲಿಯೇ ಹೀಗೆ ಸಾಮಾನ್ಯ ವೇಷ ದಿಂದಿರುವುದರ ಕಲ್ಪನೆಯೇ ಇಲ್ಲ. ಕೊಂಚ ಮೊದಲು 'ನಮಗೇ ಕೆಲವರು ಪ್ರಭುಗಳ ಮಹಿಮೆ ಬಣ್ಣಿಸಿದರು ನಿಜವಾಗಿಯೂ ಸಾರ್ಥಕರಾದೆವು. ಕರ್ನಾ-ಟಕ ಮಾತೆಯ ಉದರವು ಸಫಲತೆ ಪಡೆಯಿತು. ವಿಜಯನಗರದ ವಿಜಯ ಧ್ವಜವು ಅಮರನಾಗಿ ಮೆರೆಯಿತು.'

'ಹಾಂ, ರಾಮಲಿಂಗ ಮೆಲ್ಲಗೆ. ನಾವು ಇಷ್ಟು ಕಷ್ಟ-ನಷ್ಟಗಳನ್ನು ಸಹಿಸಿ ಗುಪ್ತವೇಷ ತಳೆದುದನ್ನು ಹೊಳೆಗೂಡಿಸಿ ಬಿಟ್ಟೀಯೆ.'

ನರಪತಿ, ಮತ್ತು ಆತನ ಚತುರ ಸೇನಾನಿ ರಾಮಲಿಂಗರಿಬ್ಬರೂ ತಮ್ಮ ರಾಜೋಚಿತ ಮಾನ-ಸನ್ಮಾನಗಳನ್ನೆಲ್ಲ ತೊರೆದು ಸರ್ವಸಾಮಾನ್ಯರಂತೆ ಅಲ್ಲಿ ಬಂದು ಜನಸಂದಣಿಯಲ್ಲಿ ಒಂದುಗೂಡಿ ಅಲೆಯುತ್ತಲಿದ್ದರು ನರಪತಿ ಯನ್ನು ಗುರುತಿಸುವ ಜನರು ತೀರಾ ಸ್ವಲ್ಪ. ಅನೇಕರು ನೋಡಿದ್ದರೂ. ಅದು ಆ ರಾಜಮೆರವಣಿಗೆಯ ಮಧ್ಯದಲ್ಲಿ. ಆ ರಾಜಮನ್ನಣೆಯಿಲ್ಲದೇ ಸಾಮಾನ್ಯ ರಂತೆ ತಿರುಗಾಡುವ ಅವರನ್ನು ಯಾರೂ ಗುರುತಿಸುವಂತಿರಲಿಲ್ಲ; ಆದರೆ ಗುರುತಿಸಕೂಡದೆಂದು ಕಟ್ಟಪ್ಪಣೆಯಿದ್ದಮೂಲಕ ಯಾವ ತೊಂದರೆಯೂ ಇಲ್ಲದೆ ಅವರು ಆನಂದದಿಂದ ವಿಹರಿಸುತ್ತಲಿದ್ದರು. ಈತನೇ ನರಪತಿ, ಎಂದು ತಿಳಿದಿದ್ದಲ್ಲಿ ಅವರಿಗೆ ಅತೀವ ಆದರೋಪಚಾರಗಳಾಗುತ್ತಲಿದ್ದುವು; ಕನ್ನಡ ನಾಡವರೆಂದೂ ಅವರನ್ನು ಮರೆಯುವಂತಿರಲಿಲ್ಲ ಆದರೆ ಆ ನರಶ್ರೇಷ್ಠನಿಗೆ ಅಂತಹ ಬಾಹ್ಯೋಪಚಾರ ಬೇಕಿರಲಿಲ್ಲ. ಅಲ್ಲಿಯವರ ಅಂತರ್ಯಗಳಲ್ಲಿ ಸಂಪೂರ್ಣವಾಗಿ ವಾಸಿಸಿ ಬಿಟ್ಟು ಅವರಿಂದ ಮನ್ನಣೆಗೊಳ್ಳುತ್ತಲಿದ್ದನು. ಆಗಾಗ್ಗೆ ಅವರು ಕೇಳುವ ಕನ್ನಡಿಗರ ಔದಾರ್ಯ, ಕರ್ನಾಟಕ ಸಾಮ್ರಾಜ್ಯದ, ಕೀರ್ತಿ ಕನ್ನಡನಾಡೊಡೆಯನ ಉದಾರಚರಿತೆಗಳನ್ನು ಕೇಳುವುದರಲ್ಲಿಯೇ ತಮ್ಮ ಸಾರ್ಥಕತೆಯಾಯಿತೆಂದು ಅವರು ನಂಬಿದ್ದರು.

ಅವರೀರ್ವರೂ ಒಂದೆರಡು ಗಂಟೆ ಅಲ್ಲಿ ಎಲ್ಲೆಡೆಗೂ ತಿರುಗಾಡಿ, ನದಿ ಯಲ್ಲಿ ಮಿಂದು, ಜಗನ್ನಾಥನ ದರುಶನಕ್ಕೆಂದು ಹೋದರು ಒಡನೆಯೇ ಅರ್ಚಕರು ಮನ್ನಣೆಯಿತ್ತು, ಕರೆದು ಕುಳ್ಳಿರಿಸಿದರು ನರಪತಿಯೂ ಆತನ ಸೇನಾನಿಯೂ ಭಕ್ತಿಯಿಂದ ಜಗನ್ನಾಥನ ಪೂಜೆಗೆ ತೊಡಗಿದರು.

ಅದೇ ಸಮಯಕ್ಕೆ 'ದಾರಿ' 'ದಾರಿ' ಎಂದು ಒಬ್ಬಿಬ್ಬರು ಮುಂದೆ ಮುಂದೆ ದಾರೀ ಬಿಡಿಸುತ್ತ ಬಂದರು. ಅವರ ಹಿಂದಿನಿಂದಲೆ ಜಗನ್ಮೋಹಿನಿ ತನ್ನ ಗೆಳತಿ ಶಶಿಲೇಖಿಯೊಡನೆ ಮಂದಿರದಲ್ಲಿ ಪ್ರವೇಶಿಸಿದಳು. ಅನೇಕರು

ಆ ರಾಜಪುತ್ರಿಗೆ ವಂದನೆಗಳನ್ನರ್ಪಿಸಿದರು. ಆ ವರೆಗೆ ನರಪತಿ ಜಗನ್ನಾಥನ ಪೂಜೆಯಲ್ಲಿಯೇ ಮಗ್ನನಾಗಿದ್ದನು. ಜನಸಂದಣಿಯ ಮೂಲಕ ಗರ್ಭಗುಡಿಯಲ್ಲಿ ಕತ್ತಲು ಬಹಳವಾಗಿದ್ದರೂ. ತೈಲಜ್ಯೋತಿಗಳಿಂದ ಕತ್ತಲೆ ಕೊಂಚ ಕಡಿಮೆಯಾಗಿದ್ದಿತು. ಚನ್ನಾಗಿ ನೋಡಿದ್ದಲ್ಲಿ ಒಬ್ಬರನ್ನೊಬ್ಬರು ಗುರುತಿಸುವಂತಿದ್ದಿತು. ನರಪತಿ ಹೊರಳಿದ್ದರೆ ಜಗನ್ಮೋಹಿನಿಯ ಮೋಹಕ ಸೌಂದರ್ಯ ಪ್ರಭೆಯನ್ನು ಕಾಣದಿರುತ್ತಿರಲಿಲ್ಲ; ಆದರವನು ಅಷ್ಟು ದುರ್ಬಲಮನಸ್ಸಿನವನಿರಲಿಲ್ಲ. 'ಯಾರಾದರೂ ಹೆಣ್ಣುಮಕ್ಕಳಿರಬಹುದು' ಎಂಬ ಭಾವನೆಯಿಂದ ಅವನು ಮುಖವೆತ್ತಿರಲಿಲ್ಲ. ನರಪತಿಯು ಪೂಜೆಮುಗಿಯುತ್ತಲೆ ಮಂಗಲಾರುತಿ ಬೆಳಗಲೆದ್ದನು. ಕರ್ಪೂರದ ಜ್ಯೋತಿ ಹೆಚ್ಚಾಗಲು ಅಲ್ಲಿಯ ಎಲ್ಲವೂ ಸ್ವಚ್ಛವಾಗಿ ಕಾಣಹತ್ತಿತು ಮಂಗಲಾರುತಿ ಬೆಳಗಿ ಜಗನ್ನಾಥನನ್ನು ವಂದಿಸುತ್ತಲಿರುವಾಗಲೆ ಅಕಸ್ಮಾತ್ ಜಗನ್ಮೋಹಿನಿಯ ಮೊಗವನ್ನೀಕ್ಷಿಸಿದನು. ಕೋಲ್ಮಿಂಚು ಹೊಡೆದಂತಾಯಿತು. ಜಿತೇಂದ್ರಿಯನಾದ ಆ ನರಶ್ರೇಷ್ಠನ ಮನಸ್ಸು ಕ್ಷುಬ್ಧಸಾಗರದಂತಾಯಿತು. ಇನ್ನೊಂದು ಸಲ ಅವನ ಅಪ್ಪಣೆ ಮೀರಿ ಕಣ್ಣು ಆ ಸುಂದರಿಯತ್ತ ಧಾವಿಸಲು ಆಕೆಯ ಮೃದುಮಧುರ ನೋಟದಿಂದ ಸಂಪೂರ್ಣವಾಗ ಬಂಧಿಸಲ್ಪಟ್ಟವು ಜಗನ್ಮೋಹಿನಿಯ ಆ ಮನಮೋಹಕ ಸೌಂದರ್ಯದಿಂದ ನರಪತಿಯ ಕಣ್ಮನಗಳೆರಡೂ ಮದವೇರಿದಂತಾದವು. ಬ್ರಹ್ಮರ್ಷಿಪದವನ್ನು ಪಡೆಯಲೋಸುಗ ಪ್ರತಿಜ್ಞೆಯಿಂದ ಕುಳಿತ ವಿಶ್ವಾಮಿತ್ರನ ತಪೋಭಂಗ ಮಾಡಲು ಬಂದ ಮೇನಿಕೆಗಿಂತಲೂ ತನ್ನ ಹೃದಯಸಾಗರವನ್ನು ಕಲುಕಾಡಲು ಒಂದ ಆಕೆಯು ಹೆಚ್ಚೇ ಸುಂದರಳಾಗಿ ತೋರಿದಳು. ಗೌರವರ್ಣದ ತಿಳುವಾದ ಶರೀರಯಷ್ಟಿ, ಗಾಳಿಗಲ್ಲಾಡುವ ಕನಕಲತೆಯಂತಿದ್ದ ಆ ಸುಂದರ ಕಾಯ, ಸಕಲ ಸೌಂದರ್ಯಸಾರವನ್ನೇ ಸಂಗ್ರಹಿಸಿ ಸುಮಧುರವಾಗುವಂತೆ ಚಿತ್ರಿಸಿದಂತಿದ್ದ ಆ ಅವಯವಗಳು—ಎಲ್ಲವೂ ನರಪತಿಯನ್ನು ಸಂಪೂರ್ಣವಾಗಿ ಆಕರ್ಷಿಸಿಬಿಟ್ಟವು. ನರಪತಿ ಅತ್ತ ಹೋಗಕೂಡದಂತೆ ತನ್ನ ಮನಸ್ಸನ್ನು ಚೆನ್ನಾಗಿ ಬಂಧಿಸತೊಡಗಿದ್ದನು; ಆದರದು ಅವನ ಸ್ವಾಧೀನವಿದ್ದರಷ್ಟೆ? ಮದವೇರಿದ ಆನೆಯಂತೆ ಅದು ಅವನ ಕೈಗೆ ಸಿಕ್ಕದೆ ಆ ಸುರಸುಂದರಿಯತ್ತ ಧಾವಿಸುತ್ತಲಿದ್ದಿತು. ಮನವನ್ನು ಹಿಂಬಾಲಿಸಿ ಕಣ್ಣು-ಕಿವಿಗಳೂ ಅತ್ತೇ ಓಡುತ್ತಲಿದ್ದವು.

ಅತ್ತ ಜಗನ್ಮೋಹಿನಿಯ ಸ್ಥಿತಿಯೂ ಹಾಗೆಯೇ ಆಗಿದ್ದಿತು. ಲಜ್ಜೆಯ ಮೂರ್ತಿಯೇ ಆಗಿದ್ದ ಆ ಮಾನಿನಿಯು ಲಜ್ಜೆಯಿಲ್ಲದೆ ನರಪತಿಯನ್ನೀಕ್ಷಿಸುತ್ತಲಿದ್ದಳು. ರಾಯನ ಮಧ್ಯಮವಾದ ನಿಲುವಿಕೆ, ತಪ್ತಕಾಂಚನದಂತಿದ್ದ

ಮೈಕಾಂತಿ, ಶುಭಪ್ರದವಾದ ರೂಪು, ಉಕ್ಕಿನಂತಿದ್ದ ಶರೀರ, ದುಂಡಾದ ದೇಹಯಷ್ಟಿ, ಶೌರ್ಯಕ್ಕೆ ಆಶ್ರಯಸ್ಥಾನವೇ ಆದಂತಿದ್ದ ಗಾಂಭೀರ್ಯ, ನುಡಿವೆಣ್ಣಿನ ಪ್ರೀತಿಯಣುಗ ತಾನೆಂಬ ಭಾವ ತೋರುತಲಿದ್ದ ಮುಖದ ತೆಜ—ಎಲ್ಲವೂ ಜಗನ್ಮೋಹಿನಿಯನ್ನು ಮೂಕಳನ್ನು ಮಾಡಿದವು; ಆಕೆಗೆ ಮಂಕು ಹಿಡಿಸಿದುವು. ತಾನಿದ್ದ ಸ್ಥಳ, ಬಂದ ಕಾರ್ಯ, ಆದ ವೇಳೆ, ನೆರೆದ ಸಂದಣಿಗಳೆಲ್ಲವನ್ನೂ ಮರೆತು, ಮಂತ್ರಮುಗ್ಧಳಂತೆ ನರಪತಿಯ ಸಿರಿಮೊಗವ ನೀಕ್ಷಿಸುತ ಕಂಬದಂತೆ ನಿಂತುಬಿಟ್ಟಳು.

ಜಗನ್ನಾಥನ ದೇವಸ್ಥಾನ ಲಕ್ಷಾವಧಿ ಜನ ನೆರದಿದೆ. 'ಹರಹರ ಮಹಾದೇವ' 'ಜೈ ಜಗನ್ನಾಥ' ಎಂದು ನಭೋಮಂಡಲ ಭೇದಿಸುವಂತೆ ಕೂಗುತ್ತಲಿದ್ದಾರೆ. ಅನೇಕರು ಪೂಜೆಗೆ ನುಗ್ಗುತ್ತಲಿದ್ದಾರೆ. ಪ್ರತಿಕ್ಷಣಕ್ಕೂ ಮಂಗಲಾರುತಿಗಳ ಘಂಟಾರವವಾಗಹತ್ತಿದೆ. ಇಂತಹ ಸಮಯದಲ್ಲಿ ಕೂಡ ಅವರೀರ್ವರು ತಮ್ಮನ್ನೇ ತಾವು ಮರೆತು ನಿಂತಿದ್ದರು. ಅರಸು ಮೈಮರೆತರೆ, ಆತನ ಮಿತ್ರನಂತಿದ್ದ ಸೇನಾಪತಿ ರಾಮುಲಿಂಗನಾದರೂ ಎಚ್ಚರಿಸಬೇಡವೆ? ಹಾಗೆಯೇ ಗೆಳತಿ ಮೈಮರೆತು ನಿಂತರೆ ಆಕೆಯ ಸಖಿ ಶಶಿಲೇಖೆಯಾದರೂ ತನ್ನ ಗೆಳತಿ, ರಾಜನಂದಿನಿಯನ್ನು ಎಚ್ಚರಿಸಬೇಡವೆ? ಅವರೆಂದೂ ತಮ್ಮ ಕರ್ತವ್ಯ ವಿಮ್ಮುಖರಾಗುವವರಲ್ಲ; ಆದರೆ ಮಾಡುವುದೇನು? ಪೂರ್ವವೈರದಿಂದ ಶಿವನ ಪೂಜೆಗೆಂದು ಬಂದ ಅವರಿಂದ ಶಿವನಪೂಜೆ ಮಾಡಿಕೊಡಕೂಡನೆಂದು ಮಾರನು ತನ್ನ ಶರಗಳಿಂದ ಕಟ್ಟಿಹಾಕಿದ್ದನು. ರಾಮುಲಿಂಗ, ಶಶಿಲೇಖೆ ಯರು ಒಬ್ಬರಲ್ಲೊಬ್ಬರು ನೆಟ್ಟ ಕಣ್ಣುಗಳಿಂದ ನೋಡುತ್ತ ನಿಂತಿದ್ದರು. ಅವರ ಈ ಕ್ರಮವು ಅದೆಷ್ಟು ವೇಳೆ ನಡೆಯುತ್ತಲಿದ್ದಿತೋ ಆ ಜಗನಾಥನಿಗೇ ಅರಿಕೆ; ಆದರೆ ಅಲ್ಪಾವಕಾಶದಲ್ಲಿ ಯಾವನೋ ಒಬ್ಬ ಟೊಣಪನು 'ಜೈ ಜಗನ್ನಾಥ' ಎಂದು ಭೀಮಸೇನನಂತೆ ಆರ್ಭಟಿಸಿ ಮುಂದೆ ನುಗ್ಗಿದನು. ಅವನಾ ಗುಡುಗುಧ್ವನಿಗೆ ನಾಲ್ವರೂ ಎಚ್ಚತ್ತರು ನಾಲ್ವರ ಶರೀರಗಳೂ ಬೆವೆತಿದ್ದವು. ಗರ್ಭಗುಡಿಯಲ್ಲಿನ ಜನಸಂದಣಿಯ ಮೂಲಕ ಹಾಗಾಗಿರಬಹುದೆಂದು ಎಲ್ಲರೂ ಭಾವಿಸಿದರು. ನಾಲ್ವರಲ್ಲಿಯೂ 'ಯಾರು ಯಾರು' ಎಂದರಿಯುವ ಕುತೂಹಲ ಬಹಳವಾಯಿತು; ಆದರೆ ಕೇಳುವುದೆಂತು? ಹೇಳುವವರಾರು? ನರಪತಿಯ ಪುಣ್ಯದ ಬಲದಿಂದಲೋ ಏನೊ ಗುಡಿಗಿನಬ್ಬರದಿಂದ ಕೂಗಿದ ಟೊಣಪನು ಮುಂಬರಲು, ಅಲ್ಲಿಯೇ ನಿಂತವರು: 'ಏಕೆ ಮುಂದೂಡುವೆ? ಕೊಂಚ ತಡೆ. ಮುಂದೆ ನಮ್ಮ ರಾಜನಂದಿನಿ ಜಗನ್ಮೋಹಿನೀದೇವಿಯವರು ತಮ್ಮ ಸಖಿ ಶಶಿಲೇಖೆಯೊಡನೆ ನಿಂತುದು ಕಾಣುವುದಿಲ್ಲವೆ?' ಎಂದರು.

## ೪ ಶ್ರೀ ಕೃಷ್ಣದೇವರಾಯ.

ಜಗನ್ನಾಥದೇವಾಲಯದಲ್ಲಿ ಜಗನ್ನಾಥನೆದುರಿನಲ್ಲಿಯೇ ಸಂಭವಿಸಿದ ಪ್ರಣಯ ಸಂಬಂಧವು ಹಿಂದಿನ ಪ್ರಕರ್ಣದಲ್ಲಿ ಬಂದಿದೆ. ಒಬ್ಬರೊಬ್ಬರ ಸೌಂದರ್ಯಾವಲೋಕನೆಯಲ್ಲಿ ಮಗ್ನರಾದ ಆ ಎರಡೂ ಜತೆಗಳು ಬೇಗನೆ ಎಚ್ಚರಾಗುವ ಸಂಭವವಿರಲಿಲ್ಲ. ಅವರಾ ಪ್ರಣಯದಾಟವು ತಮ್ಮ ಹೊರತು ಮತ್ತು ಪ್ರತ್ಯಕ್ಷವಾಗಿ ವಾಸಿಸುತ್ತಲಿದ್ದ ಶ್ರೀ ಜಗನ್ನಾಥನ ಹೊರತು ಇತರರಿಗೆ ತಿಳಿಯಕೂಡದೆಂದು ಜಗನ್ನಾಥನ ಇಚ್ಛೆಯುದ್ದಿತೋ ಏನೋ ಅವರೆಲ್ಲರ ಮಾನ ಉಳಿಸಲು ಆ ಟೊಣಪನು 'ಜೈಜಗನ್ನಾಥ' ಎಂದು ಗುಡುಗಿನ ಧ್ವನಿಯಿಂದ ಕೂಗಿದನು ಒಡನೆಯೇ ನಾಲ್ವರೂ ಎಚ್ಚತ್ತರು. ಗಾಬರಿಯಾಗಿ ಸುತ್ತು ಮುತ್ತು ನೋಡಹತ್ತಿದರು. ಅವರ ಆ ವೇಳೆಯಲ್ಲಿನ ಅವಸ್ಥೆ ಜಗನ್ನಾಥನಿಗೇ ಅರಿಕೆ! ರಾಯನು ತನ್ನ ಖಂಬೀರವಾದ ಮನವನ್ನೂ ಕೂಡ ಅರಕ್ಷಣದಲ್ಲಪಹರಿಸಿದ ಆ ದಿವ್ಯಸುಂದರಿಯ ರೂಪ-ಲಾವಣ್ಯಗಳನ್ನು ಕಂಡು ಅಚ್ಚರಿಬಟ್ಟನು. ಅದೇ ವೇಳೆಯಲ್ಲಿ ತಾನು ಹಾಗೆ ಆ ಮೋಹಿನಿಯ ಮೋಹಕ ರೂಪು ನೆಟ್ಟ ದಿಟ್ಟಿಯಿಂದ ನೋಡುತ್ತ ನಿಂತುದನ್ನು ಎಲ್ಲರೂ ಕಂಡು ಉಪಹಾಸಮಾಡುತ್ತಲಿರಬಹುದೆಂದು, ತನ್ನ ಕಳವು ಕಂಡು ಹಿಡಿದಿರಲೇಬೇಕೆಂದು ಅವನತ್ತ ನೋಡುವಲ್ಲಿ ಅವನೂ ಕಳ್ಳನೇ. ಇದೇ ಸ್ಥಿತಿ ಜಗನ್ಮೋಹಿನಿಯದಾಗಿದ್ದಿತು. ಆಕೆ ತೀರಾ ಭಯಪಟ್ಟಳು. ಅದಾವನೋ ಒಬ್ಬ ಅಪರಿಚಿತನನ್ನು ಹಾಗೆ ನೋಡುತ್ತ ನಿಂತುದಕ್ಕಾಗಿ ತೀರಾ ನಾಚಿಕೆ ಬಟ್ಟಳು ತನ್ನ ಗೆಳತಿ ತನ್ನ ಉಪಹಾಸ ಮಾಡುತ್ತಲಿರಬಹುದೆಂದು ಆಕೆಯನ್ನು ದೃಷ್ಟಿಸುವಲ್ಲಿ ಆಕೆಯೂ ಚೋರಳೇ. ಹೀಗೆ ಅವರು ತಾವು ಮಾಡಿದುದು ಯಾರಿಗೂ ತಿಳಿದಿರಲಿಲ್ಲವೆಂದು ಮನವರಿಕೆ ಮಾಡಿಕೊಳ್ಳುತ್ತಲಿರುವಾಗಲೆ 'ಯಾರು ಯಾರು, ಎಂಬ ಪ್ರಶ್ನೆ ಉಂಟಾಯಿತು; ಆದರೆ ಅಕಸ್ಮಾತ್ತಾಗಿ ರಾಯನಿಗೆ ಆ ಸುರಸುಂದರಿಯ ಸರ್ವಸಂಗತಿಯೂ ತಿಳಿದುಹೋಯಿತು. ಆ ಕಲಿಂಗ ಸುಂದರಿಯ ದೈವೀ ರೂಪಲಾವಣ್ಯಗಳಿಗೆ ತಲೆದೂಗಿದನು. ಭಾವೀ ವಿಚಾರಗಳು ಅವನ ಮನಸ್ಸಿನಲ್ಲಿ ತಾಕಲಾಡುತ್ತಲಿರುವಾಗಲೆ ಅವನು ಮತ್ತೊಮ್ಮೆ ಮೋಹಿನಿಯ ಮುಖವೀಕ್ಷಿಸಿದನು ಮೋಹಿನಿಯ ನಗುಮುಖವು ಅವನನ್ನು ಸ್ವಾಗತಿಸಿತು. ಅವರ ಪರಿಚಯ ತಿಳಿಯುತ್ತಲೆ ರಾಯನು ಅಲ್ಲಿ ನಿಲ್ಲುವುದೊಳಿತಲ್ಲವೆಂದು ಭಾವಿಸಿ ಹೊರಹೊರಟನು. ರಾಮಲಿಂಗನೂ ತನ್ನ ಮನದನ್ನೆಯ ಸಿರಿಮೊಗವ ನಿರೀಕ್ಷಿಸುತ್ತ ರಾಯನನ್ನು ಹಿಂಬಾಲಿಸಿದನು.

ಜಗನ್ಮೋಹಿನಿ ಶಶಿಲೇಖೆಯರ ಸ್ಥಿತಿ ವಿಚಿತ್ರವಾಯಿತು. ಮನಸ್ಸು ಅತಿ ವಿಚಿತ್ರವಾದುದು. ಒಂದೊಂದು ಸಲ ತೀರ ಗುರುತಿಲ್ಲದವರಲ್ಲಿ ತೊಡಗುತ್ತಲೆ ಅವರನ್ನು ಪೂರ್ಣ ಪರಿಚಿತರಿಗಿಂತಲೂ ಹೆಚ್ಚಾಗಿ ನಂಬಿಬಿಡುತ್ತದೆ. ಜಗನ್ಮೋಹಿನಿ ತಾನು ಅರಸು ಕುವರಿ-ಅನುಪಮ ಸುಂದರಿ. ಸಾಮಾನ್ಯ ವೇಷದಲ್ಲಿದ್ದ ರಾಯನಲ್ಲಿ ಪೂರ್ಣ ನೆಟ್ಟ ಮನಸ್ಸುಳ್ಳವಳಾದಳು. 'ಅವನೊಬ್ಬ ಸರ್ವಸಾಮಾನ್ಯ ಮನುಷ್ಯನಿರಬಹುದು. ಅಂತಹನಲ್ಲಿ ಪ್ರೇಮವಿಡುವದು ಅರಗುವರಿ ನಿನಗೆ ಅನುಚಿತವು' ಎಂದು ಒಂದು ಮನ ಹೇಳಿದರೆ, 'ಛೆ! ಉಂಟೇ ಆತನಾವನೋ ರಾಜಪುರುಷನಿರಲೇಬೇಕು. ಇಲ್ಲವಾದರೆ ನನ್ನ ಮನ ನೆಡುವುದುಂಟೆ. ಆತನಾ ಮೋಹಿಕ ಮುಖಕಮಲದ ಮೇಲೆ ಲಾಸ್ಯವಾಡುತ್ತಲಿರುವ ರಾಜತೇಜಸ್ಸನ್ನೂ; ಸರಸತಿಯ ಮುದ್ದುಕುವರನೆಂದು ಸಾರಿಹೇಳುವ ಆ ವಿಶಾಲ ಫಣೆ, ಸಾತ್ವಿಕ ತೇಜವನ್ನು ತೂರುವ ಕಮನೀಯ ಕಣ್ಗಳು, ವಿಶಾಲ ಬಾಹುಗಳು ಇವೆಲ್ಲವೂ ಸಾಮಾನ್ಯ ಮನುಷ್ಯನಿಗೆಂದಾದರೂ ಇರುವುವೇ?' ಎಂದಿನ್ನೊಂದು ಮನಸ್ಸು. ಒಂದಕ್ಕೊಂದು ವಾಗ್ಯುದ್ಧ ನಡೆದಿರುವಾಗಲೆ ರಾಯ ಹೊರಹೊರಡಲು ಆಕೆ ಗಾಬರಿಯಾದಳು. ಆತನ ಯಾವ ಪರಿಚಯವನ್ನಾದರೂ ಪಡೆಯದಿದ್ದರೆ ಆತನ ಪ್ರಾಪ್ತಿಯಾಗುವುದೆಂತು? ಆತನ ಪ್ರಾಪ್ತಿಯಾಗದಿದ್ದರೆ ತನ್ನ ಭಾವೀ ಜೀವನದ ಗತಿಯೇನು? ಜಗನ್ನಾಥ ದೇವಾಲಯವನ್ನು ದಾಟಿ ಹೊರಬಿದ್ದರೆ ಮುಂದೆ ಲಕ್ಷಾವಧಿ ಜನರಲ್ಲಿ ಅವನನ್ನು ಗುರುತಿಸುವುದೆಂತು? ಹೀಗೆ ಒಂದೊಂದೇ ಯೋಚನೆ ಆಕೆಗೆ ಬಹಳವಾಗಿ ತೊಂದರೆಯಿತ್ತುವು. ಸಮಯಸೂಚಕತೆ ಹೆಣ್ಣುಮಕ್ಕಳಲ್ಲಿ ಬಹಳ. ತಟ್ಟನೆ ಆಕೆಗೊಂದು ಉಪಾಯ ಹೊಳೆಯಿತು. ಅಲ್ಲಿಯೇ ಮೆಲ್ಲಗೆ ಶಶಿಲೇಖೆಗೆ ರಾಯ ಇಳಿದ ಸ್ಥಳವನ್ನು ಕಂಡು ಬರುವಂತೆ ಹೇಳಿದಳು. ಶಶಿಲೇಖೆಗಾದರೂ ಅದೇ ಬೇಕಾಗಿದ್ದಿತು. ತಡಮಾಡದೆ ಒಡತಿಯ ಮಾತಿನಂತೆ ಹೊರಬಿದ್ದಳು.

ರಾಯ-ರಾಮಲಿಂಗರೀರ್ವರ ಮನಗಳೂ ಅವರ ಸ್ವಾಧೀನವಿರಲಿಲ್ಲ. ಎಷ್ಟೇ ಯತ್ನ ಮಾಡಿದರೂ ಕೇಳದೇಅವು ಆ ಸುಂದರಿಯರಲ್ಲಿ ಸೇರಿ ಹೋಗಿದ್ದುವು. ಅವರು ಅನಿವಾರ್ಯವಾಗಿ ವ್ಯಗ್ರ ಮನದಿಂದ ಹೊರಬಿದ್ದು ಜನಸಂದಣಿಯಲ್ಲಿ ಮೂಕರಂತೆ ಹೊರಟರು. ಅವರೀರ್ವರಿಗೂ ತಮ್ಮ ಆ ಮನದನ್ನೆಯರ ಇನಿದಾದ ಸಂಸ್ಮರಣೆಯೇ ಸಾಕಷ್ಟಕ್ಕಿಂತ ಮಿಕ್ಕಿ ಹೋಗಿದ್ದಿತು. ಯಾರೊಬ್ಬರೂ ಮಾತಾಡದೆ, ಅತ್ತಿತ್ತ ಮುಖಗಳನ್ನು ಕೂಡ ತಿರುಗಿಸದೆ ಹೊರಟದ್ದರು. ಅವರ ಹಿಂಬದಿಯಲ್ಲಿಯೇ ಶಶಿಲೇಖೆ ಅವರಿಗೆ ಅಲ್ಪವಾದರೂ ಅರಿವಾಗದಂತೆ ಹೊರಟಿದ್ದಳು. ಮೂಗುದಾರದಿಂದೆಳೆದೊಯ್ಯುವ ಪಶುವಿನಂತೆ

ಶಶಿಲೇಖೆಯಾಗಿದ್ದಳು ಆಕೆಗೆ ಮತ್ತು ರಾಮಲಿಂಗನಿಗೆ ಯಾವ ಬಗೆಯ ತೋರಿಕೆಯ ಸಂಬಂಧವಿರದಿದ್ದರೂ ಸೂಕ್ಷ್ಮರೀತಿಯಲ್ಲಿ ಬಹಳ ದೃಢವಾಗಿ ಬಂಧಿಸಲ್ಪಟ್ಟಿದ್ದರು. ರಾಮಲಿಂಗನು ಮುಂದೆ ಮುಂದೆ ಹೊರಟಿದ್ದರೂ ತನ್ನ ಸ್ವಾಧೀನವೇ ತಾನಾಗಿರಲಿಲ್ಲ. ತನ್ನ ಮನಸ್ಸು, ಹೃದಯ, ಚೈತನ್ಯಗಳೆಲ್ಲವೂ ಶಶಿಲೇಖೆಯಲ್ಲಿ ಕಳೆದು ಹೋಗಿದ್ದವು; ಆದರೆ ಅದರ ಅರಿವು ಶಶಿಲೇಖೆಗೆಲ್ಲಿ? ತನ್ನ ಹೃನ್ಮನಗಳನ್ನು ಆಕರ್ಷಿಸಿಎಳೆದೊಯ್ಯುವ ಹೃದಯ ಚೋರನ ಕೈಯಲ್ಲಿ ಸಿಕ್ಕು ಹೋಗಿ ಅವನನುಸರಿಸಿದ ದಾರಿಯಿಂದಲೇ ಸೂತ್ರದ ಗೊಂಬೆಯಂತೆ ಹೊರಟಿದ್ದಳು.

ರಾಯನ ಅವಸ್ಥೆ ವರ್ಣನೆಗೆ ಮೀರಿದ್ದಿತು. ಎಂತೆಂತಹ ಮೋಹಕ ಸೌಂದರ್ಯಕ್ಕೆ ಕಿಂಚಿತ್ತಾದರೂ ಅಳುಕದಿದ್ದ ತನ್ನ ಹೃದಯವು, ಆ ಸುರ ಸುಂದರಿಯ ಮೋಹಪಾಶಕ್ಕೆ ಸಂಪೂರ್ಣವಾಗಿ ಹೇಗೆ ಸಿಕ್ಕಿಬಿದ್ದಿತೆನ್ನುವುದೇ ತಿಳಿಯದಾಯಿತು. ಬಹಳವಾಗಿ ವಿಚಾರಿಸಿದನು, ಮನಸ್ಸು ಗಟ್ಟಿಮಾಡ ಲೆತ್ನಿಸಿದನು, ವಿವೇಕವನ್ನು ಸ್ಮರಿಸಿ ತುಡುಗುದನದಂತಿದ್ದ ಮನವನ್ನು ಹಿಡಿದು ಕಟ್ಟಲೆತ್ನಿಸಿದನು, ಆದರಾ ಮನವು ಇವನಿಗೆ ಸಿಕ್ಕುವಂತಿದ್ದಿತೆ? 'ನಿನ್ನ ವೈಹಿಕ ಆತ್ಮಿಕ ಚೈತನ್ಯವೆಲ್ಲವೂ ನಿನ್ನ ವಶದಲ್ಲಿರದೆ ಮೋಹಿನಿಗೆ ವಶ ವಾಗಿದೆ ನಿನ್ನ ದೃಷ್ಟಿಯೂ ಆ ಭೃಂಗಕುಂತಳೆಯ ಕಮಲಕಣ್ಣುಗಳಲ್ಲಿ ಸೇರಿದೆ. ಇನ್ನು ನಿನಗೆ ನಾನು ಸಿಕುವೆನೆ? ನನ್ನನ್ನು ಹಿಡಿಯುವಷ್ಟು ಶಕ್ತಿವಂತ ಈಗ ನೀನಲ್ಲ . . ' ಮುಂತಾಗಿ ಹಂಗಿಸುತ್ತ ದೂರ ದೂರ ಆ ಸೌಂದರ್ಯ ಲತಿಕೆಯತ್ತವೇ ಧಾವಿಸುತ್ತಲಿದ್ದಿತು.

ಅತ್ತ ಜಗನ್ಮೋಹಿನಿಯಂತೂ ತೀರಾ ಹತಾಶಳಾಗಿದ್ದಳು. ಆ ದಿನವು ಶುಭಸೂಚಕವೋ ಅಶುಭಸೂಚಕವೊ? ಆವುದೂ ತಿಳಿಯುವಂತಿರಲಿಲ್ಲ. ಏನೇ ಆದರು ಅಂದು ಶ್ರೀ ಜಗನ್ನಾಥನ ಸನ್ನಿಧಾನದಲ್ಲಿಯೇ ಮನೋಹಾರಕ ಸುಂದರನ ಸಂದರ್ಶನವಾದುದು ಭಾಗ್ಯಸೂಚಕವೆಂದೇ ನಂಬಿದಳು. ಆತನು ಹೇಗಾದರೂ ತನಗೆ ಪ್ರಾಪ್ತನಾಗಬೇಕೆಂದು ಬಯಸಹತ್ತಿದಳು; ಆದರೆ-ಆದರೆ ಆತನು ಆವನೊಬ್ಬ ಸಾಮಾನ್ಯ ಮನುಷ್ಯನಿದ್ದರೆ ಈ ಕಲ್ಪನೆಯೇ ಆಕೆಗೆ ಸಹನವಾಗದಾಯಿತು 'ತನ್ನ ಮನನೆಡಬೇಕಾಗಿದ್ದಲ್ಲಿ ಆತನು ಯಾವದೊಂದು ರಾಜಮನೆತನದವನಿರಬೇಕೆ'ಂದು ನಂಬುಗೆಯುಂಟಾಗಿದ್ದಿತು. ಕಾಲಿದಾಸನ ಶಾಕುಂತಲ ಆಕೆಯ ಸ್ಮರಣೆಗೆ ಬಂದು ಆಕೆ ಉತ್ತೇಜಿತಳಾದಳು. ಅನನ್ಯ ಭಕ್ತಿಯಿಂದ ಶ್ರೀಜಗನ್ನಾಥನ ಪೂಜೆಗೈದು ತನ್ನ ಮನೋರಮಣ ತನಗೆ ಲಭಿಸುವಂತೆ ಮಾಡಬೇಕೆಂದು ಭಕ್ತಿಯಿಂದ ಬೇಡಿಕೊಂಡಳು.

ಜಗನ್ಮೋಹಿನಿಯು ಜಗನ್ನಾಥನ ಪೂಜೆ ಕೊನೆಗಾಣಿಸಿ ತನ್ನ ಬಿಡಾರಕ್ಕೆ ಮರಳಿದಳು. ಯಾವಾಗಲೂ ಆಕೆಯ ಮನಸ್ಸಿನಲ್ಲಿ ತುಂಬಿದ ಒಂದೇ ಒಂದು ವಿಷಯವೆಂದರೆ, ತನ್ನನ್ನಾಕರ್ಷಿಸಿದ ಆತನ ಸುಂದರ ರೂಪ ಯವ್ವನಗಳು ಆಕೆಯ ಮನದಲ್ಲಿ ಆಳವಾಗಿ ನೆಟ್ಟು ಹೋಗಿದ್ದುವು ಆತನ ಮುಖದ ರಾಜತೇಜವು ಕಣ್ಣುಗಳಲ್ಲಿ ನೆಲೆಸಿ ನಿಂತು ಹೋಗಿದ್ದಿತು. ಆತನು ಎಲ್ಲ ವಿಧದಿಂದಲೂ ತನಗೆ ತಕ್ಕ ಪತಿಯೇ ಎಂದು ಮನವರಿಕೆಯಾಗಿದ್ದಿತು; ಆದರೆ 'ಒಂದು ವೇಳೆ ಅವನು ಕುಲೀನನಿಲ್ಲದಿದ್ದರೆ?' ಆ ಒಂದು ಸಂದೇಹ ಆಕೆಯನ್ನು ಬಹಳವಾಗಿ ಹಿಂಸಿಸುತ್ತಲಿದ್ದಿತು. ಅಂತಹ ಉತ್ಕೃಷ್ಟ ಶರೀರಯಷ್ಟಿಯೂ, ಮುಖದಲ್ಲಿನ'ಅದ್ವಿತೀಯ ತೇಜವೂ, ಉಕ್ಕಿನಂತಹ ಬಾಹುಗಳೂ, ಹರವಾದ ಎದೆಯೂ ಒಳ್ಳೇ ಕುಲದವನಿಗಲ್ಲದೆ ಕುಲಹೀನನಿಗೆಂದೂ ದೊರಕವೆಂದು ಆಕೆಯ ವಿಶ್ವಾಸ. ಆ ಸುಂದರ ತರುಣನು ಕುಲೀನನಿಷ್ಟೇ ಅಲ್ಲ, ರಾಜಮನೆತನದವನೇ ಇರಬೇಕೆಂದು ಆಕೆಯ ಮನಸ್ಸಿಗೆ ಬೋಧೆಯಾಯಿತು; ಆದರೂ 'ಯಾರಿರಬಹುದು?' ಎಂಬ ಶಂಕೆ ಆಕೆಯ ಮನಸ್ಸಿನಲ್ಲಿ ಅಚಲವಾಗಿದ್ದಿತು.

ಜಗನ್ಮೋಹಿನಿಯು ವಿಚಾರಪರವಶಳಾಗಿ ಅತ್ತಿತ್ತ ಇಣುಕದೇ ತಮ್ಮ ಬೀಡಾರಕ್ಕೆ ತಲುಪಿದಳು. ಶಶಿಲೇಖೆ ಇನ್ನೂ ಬಂದಿರಲಿಲ್ಲ. ಅಷ್ಟು ಸಮಯ ಏನು ಮಾಡಿದಳೆಂದು ಆಕೆಯ ಮೇಲೆ ಮುನಿಸುಗೊಂಡಳು ಅತ್ತಿತ್ತ ತಿರುಗಾಡಿದಳು. ಜಗನ್ನಾಥನ ರಥೋತ್ಸವಕ್ಕೆಂದು ನೆರೆದ ಜನಸಮುದಾಯವನ್ನು ನೋಡಿ ಮನರಂಜನೆ ಮಾಡಿಕೊಳ್ಳಲೆತ್ನಿಸಿದಳು. ಬೇರೆ ಬೇರೆ ಜನರು ಬೇರೆ ಬೇರೆ ಕಾರ್ಯಗಳಲ್ಲಿ ನಿಮಗ್ನರಾದುದನ್ನು ನೋಡಿದಳು ಒಂದೆಡೆ ಹತ್ತಿಪ್ಪತ್ತು ಜನ ಗುಂಪು ಕೂಡಿ ಕುಳಿತು ಜಗನ್ನಾಥನ ಮಹಿಮೆ ಕೊಂಡಾಡುತ್ತಲಿದ್ದರು. ಬೇರೊಂದೆಡೆ ಜಗನ್ನಾಥನ ಅರ್ಚನೆ ಪೂರಯಿಸಿಕೊಂಡು ಬಂದ ಹಲವರು ಉಪಹಾರಕ್ಕೆ ತೊಡಗಿದ್ದರು. ಕೆಲವು ಹೆಂಗಳೆಯರೊಂದೆಡೆ ಕಲೆತು ತಮ್ಮ ಮಧುರ ಕಂಠದಿಂದ ಜಗನ್ನಾಥನ ಗುಣಗಾನ ಮಾಡುತ್ತಲಿದ್ದರು. ಚಿಕ್ಕಮಕ್ಕಳಲ್ಲಿ ಕೆಲವು ಆಡುತ್ತಲಿದ್ದವು. ಕೆಲವು ಅಳುತ್ತಲಿದ್ದವು ಏಳುವುದೂ ಬೀಳುವುದೂ ನಡೆದಿದ್ದಿತು. ಬಿದ್ದ ಮಗುಗಳನ್ನು ಹಿರಿಯರೆಬ್ಬಿಸುತ್ತಲಿದ್ದರು. ಆಸನ್ನ ಮರಣರಾದ ಅನೇಕ ವೃದ್ಧರು ತಮಗೆ ಪುನಃ ಜಗನ್ನಾಥನ ರಥೋತ್ಸವ ನೋಡುವ ಸುಸಮಯ ದೊರಕುತ್ತದೆಯೋ ಇಲ್ಲವೋ ಎಂಬ ಸಂದೇಹದಿಂದ ಕೆಮ್ಮುತ್ತ, ಗೂರುತ್ತ ಕುಳಿತಿದ್ದರು. ದೂರಲ್ಲಿ ಜಗನ್ನಾಥನ ಭವ್ಯವಾದ ಸ್ವರ್ಗಿಯ ರಥವು ಗಗನಮಂಡಲ ಭೇದಿಸುವಂತೆ ಕಾಣುತ್ತಲಿದ್ದಿತು. ಸುತ್ತಲಿನ ವಿವಿಧ ಬಣ್ಣದ ಅಂದವಾದ ರೇಷ್ಮೆಯ ಜರತಾರಿಯ ಪತಾಕೆಗಳು

ಅತೀವ ಮನೋಹರವಾಗಿ ಕಂಗೊಳಿಸುತ್ತಲಿದ್ದವು. ತುದಿಯಲ್ಲಿದ್ದ ರತ್ನ ಖಚಿತ ಶಿಖರವು ಸೂರ್ಯಬಿಂಬವನ್ನು ನಾಚಿಸುವಂತಿದ್ದಿತು.

ಜಗನ್ಮೋಹಿನಿ ಸುತ್ತೆಲ್ಲ ನೋಡಿದಳು, ದಶದಿಶೆಗಳನ್ನು ಈಕ್ಷಿಸಿದಳು! ಕೆಲಬಲಗಳನ್ನೆಲ್ಲ ಅವಲೋಕಿಸಿದಳು; ಆದರೆ ಅದರಿಂದ ಆಕೆಯ ಮನಸ್ಸಿಗೆ ನಸುವಾದರೂ ಆನಂದವೆನಿಸಲಿಲ್ಲ. ಯಾವದೊಂದು ಬೆಲೆಯುಳ್ಳ ಒಡವೆ ಯನ್ನು ಕಳೆದುಕೊಂಡವನಿಗೆ ತನ್ನ ಆ ಒಡವೆಯ ದರುಶನದಿಂದಲ್ಲದೆ ಇನ್ನೇತರಿಂದಲೂ ಸಮಾಧಾನವಾಗುವುದಿಲ್ಲ. ಜಗನ್ಮೋಹಿನಿ ತನ್ನ ಹೃದಯ ವನ್ನು ಕದ್ದೊಯ್ದ ಕಳ್ಳನನ್ನರಸುತ್ತಲಿದ್ದಳು. ಆ ಕಳ್ಳನು ಎಲ್ಲಿಯೂ ಕಾಣ ಲಿಲ್ಲ. ಲಕ್ಷಾವಧಿ ಜನ ನೆರೆದಿದ್ದರು. ಅನೇಕರ ಮುಖಗಳು ಸ್ಪಷ್ಟವಾಗಿ ಕಾಣುತ್ತಲಿದ್ದವು; ಆದರೆ ಒಬ್ಬನ ಮುಖವಾದರೂ ತನ್ನ ಆ ಹೃದಯ ಚೋರನ ಮನಶ್ಚಕೋರನಂತೆ ಕಮನೀಯವಾಗಿರಲಿಲ್ಲ. ಜಗನ್ಮೋಹಿನಿ ನೋಡಿದಳು-ಮತ್ತೆ ನೋಡಿದಳು-ಶೋಧಕ ದೃಷ್ಟಿಯಿಂದವಲೋಕಿಸಿದಳು. ಚಿಕಿತ್ಸಕ ಬುದ್ಧಿಯಿಂದರಸಿದಳು. ಪರೀಕ್ಷಕರಂತೆ ನಿರೀಕ್ಷಿಸಿದಳು. ಎಲ್ಲವೂ ವ್ಯರ್ಥವಾಯಿತು. ಅದರಿಂದ ಆಕೆಯ ಮನಸ್ಸಿಗೆ ಅಲ್ಪವಾದರೂ ಆನಂದ ವೆನಿಸಲಿಲ್ಲ. ನೋಡಿ ನೋಡಿ ಬೇಸತ್ತು, ಬಂದು ಕುಳಿತು, ಕಣ್ಣುಮುಚ್ಚಿ ತನ್ನ ಹೃದಯಾಭಿರಾಮನ ಕಮನೀಯ ರೂಪು ಧ್ಯಾನಿಸಹತ್ತಿದಳು. ಜಗ ನ್ನಾಥನ ಸನ್ನಿಧಾನದಲ್ಲಿಯೇ ಆ ಸುಂದರನ ರೂಪು ಚನ್ನಾಗಿ ಕಣ್ತುಂಬ ನೋಡಿದ್ದಳು. ಅಲ್ಪಾವಕಾಶದಲ್ಲಿ ಅದನ್ನೇ ಸ್ಮರಣೆಗೆ ತಂದುಕೊಂಡು ಆ ಸ್ವರ್ಗೀಯ ನೋಟ ನೋಡುವುದರಲ್ಲಿಯೇ ಮಗ್ನಳಾಗಿ ಕುಳಿತಳು.

ಶಶಿಲೇಖೆ ಹೊರಗಿನಿಂದ ಬಂದು ನೋಡುತ್ತಾಳೆ, ರಾಜಕುವರಿಯ ಸಮಾಧಿ ಸಪ್ತವೇದಿಕೆ ದಾಟುವುದರಲ್ಲಿದ್ದಿತು. ಕೊಂಚ ವೇಳೆ ತಡೆದಳು. ರಾಜಪುತ್ರಿ ಬೇಗನೆ ಎಚ್ಚರಿಯುವ ಚಿಹ್ನ ತೋರಲಿಲ್ಲ. ಆಕೆ ಮೆಲ್ಲನೆ 'ರಾಜ ಪುತ್ರೀ!' ಎಂದಳು.

ಶಶಿಲೇಖೆಯ ಸ್ವರ ಕೇಳುತ್ತಲೆ ಜಗನ್ಮೋಹಿನಿಯು ಹಾರಿಬಿದ್ದಳು. ಆಕೆ ಅತ್ಯಾನಂದದಿಂದ, ಲೇಖ! ಏನು, ಸಂಗತಿಯೇನು ಹೇಳು?' ಎಂದಳು.

'ಸಖೀ, ನಾನೇನೋ ಈವರೆಗೆ ಶ್ರಮಬಟ್ಟೆನು.... .. ....'

'ನಿನ್ನ ಉಪೋತ್ಘಾತವೆಲ್ಲ ಆ ಮೇಲೆ ಇರಲಿ. ಮೊದಲು ಹೇಳು, ಅವರಾರೆಂಬದನ್ನು ನೀನು ತಿಳಿದಿದ್ದರೆ?'

'ಯಾರೋ ಉಚ್ಚತರಗತಿಯವರಿದ್ದಂತೆ ತೋರುತ್ತದೆ.'

'ಅದನ್ನು ನೀನೇಕೆ ಹೇಳಬೇಕು? ಅವರಾ ರೂಪು, ಕಾಂತಿಗಳಿಂದ

ತಾನೇ ವ್ಯಕ್ತವಾಗುತ್ತದೆ. ಹೆಚ್ಚೇನಾದರೂ. .. .....'

'ಛೇ! ಗೆಳತಿ, ನಾನು ಬಹಳ ಕಷ್ಟಬಟ್ಟೆನು; ಆದರೆ ಅಲ್ಪವಾದರೂ ತಿಳಿಯಲಿಲ್ಲ' 'ಯಾರನ್ನಾದರೂ ಕೇಳಬೇಕಾಗಿತ್ತು?'

'ನಾವಿರಾರು ಜನರನ್ನು ವಿಚಾರಿಸಿದೆನು. ಒಬ್ಬರಾದರೂ ಅವನ್ನರಿತಂತಿಲ್ಲ ಎಲ್ಲರೂ ತಮಗೆ ತಿಳಿಯದೆಂದೇ ಉತ್ತರವಿತ್ತರು.'

'ಹಾಗಾದರೆ . . '

'ಸಖೀ, ನಿರಾಶೆಗೊಳ್ಳಬೇಡ. ನಾಸೀಗಲೆ ಹೋಗಿ ನಾಲ್ಕು ದಿನ ಹಿಡಿದರೂ ಚಿಂತೆಯಿಲ್ಲ; ಸಂಗತಿಯೆಲ್ಲವನ್ನರಿತೇ ಮರಳುತ್ತೇನೆ.'

'ಎಲ್ಲಿಗೆಂದು ಹೋಗುವೆ?'

'ಎಲ್ಲಗಾದರೂ ಹೋಗುವೆ; ಉಪಾಯವೇ ಇಲ್ಲ.'

'ಮತ್ತೆ ಶಶಿಲೇಖೆ, ಬರಿಯ ನನ್ನ ನಲುವಾಗಿಯೇ ಹೋಗುವೆಯೊ?'

'ಅಂದರೇನು ಸಖಿ?'

'ಅಂದರೆ, ಜಗನ್ನಾಥನ ಅರ್ಚನೆಯ ಸಮಯಕ್ಕೆ ನಿನ್ನ ಮೊಗವೇಕೆ ಕೆಂಪಾಗಿದ್ದಿತು?' 'ನನ್ನ ಮೊಗವೆ?'

'ಅಹುದು; ನಿನ್ನ ಮೊಗವೆ. ನೀನಾರನ್ನು ನೋಡಿದೆ...........?'

'ಸಖಿ, ಗಾಬರಿಯಾಗಬೇಡ. ನಾನೇನು ನಿನ್ನ ಮನೋವಲ್ಲಭನನ್ನು ಅಪಹರಿಸುವುದಿಲ್ಲ ನಿನ್ನಾ ಹೃದಯ ಚೋರನ ಬಳಿಯಲ್ಲಿಯೇ ಇನ್ನೋರ್ವ ಸುಂದರನಿದ್ದುದನ್ನು ನೀನು ನೋಡಿದೆಯೇನು?'

'ಆಂ, ಅಲ್ಲಿ ಗರ್ಭಗುಡಿಯಲ್ಲಿಯೆ?'

'ಅಹುದು. ಅಲ್ಲಿಯೇ, ಆದರೆ ನಿನಗೆ ಅತ್ತಿತ್ತ ನೋಡಲವಕಾಶ ದೊರೆತಿದ್ದರಲ್ಲವೆ? ನಿನ್ನಾ ಹೃದಯ ವಲ್ಲಭನ ಕಮಲ ಸದೃಶವಾದ ಕಮನೀಯ ಮೊಗವನೀಕ್ಷಿಸುವುದರಲ್ಲಿಯೇ ಮಗ್ನಳಾಗಿದ್ದೆಯಲ್ಲವೆ?'

'ನನ್ನದೇನೋ ಸರಿಯಾಯಿತು; ಆದರೆ ಲೇಖೆ, ಮತ್ತೆ ನೀನೋ, ನೀನೆಲ್ಲಿ ನೋಡುತ್ತಿದ್ದೆ?' 'ಯಥಾ ರಾಜಾ ತಥಾ ಪ್ರಜಾ'

'ಭಾಪು! ಲೇಖೆ, ಭಾಪು! ಇರಲಿ. ಲೇಖೆ, ಈಗ ನಾನೇನು ಮಾಡಬೇಕು? ಇಬ್ಬರ ಹೃದಯ ರತ್ನಗಳೂ ಈ ಜನಸಾಗರದಲ್ಲಿ ಒಂದೇ ಎಡೆಯಲ್ಲಿಯೇ ಇವೆ. ಅವುಗಳನ್ನು ಈ ಸಾಗರದಲ್ಲಿ ಧುಮುಕಿ ಶೋಧಿಸುವ ಬಗೆಯೇನು? ಮತ್ತು ಅವು ನನ್ನ ನಿನ್ನಗಳಿಗೆ ಯೋಗ್ಯವಾದ ಮೇಲ್ತರಗತಿಯ ರತುನಗಳೇ ಇವೆಯೆಂದು ಕಾಣುವುದೆಂತು? ನಿಜವಾಗಿ ಲೇಖೆ, ಇಂದು ನನ್ನ ಸ್ಥಿತಿ ಬಹಳ ವಿಚಿತ್ರವಾಗಿದೆ. ಮನಸ್ಸು ತೀರ ಅಪರಿಚಿತವಾದ ಒಂದೆಡೆಯಲ್ಲಿ

ಅಕಸ್ಮಾತ್ತಾಗಿ ಸೇರಿಹೋಯಿತು. ನಾನಾದರೋ ಆ ಸುಂದರನ ವಿಷಯಕ್ಕೂ ಏನನ್ನೂ ಅರಿತವಳಲ್ಲ, ಮತ್ತು ಸುದ್ದಿಯನ್ನು ಬೇರೆ ಹೊರಗೆ ಹಾಕುವಂತಿಲ್ಲ.'

'ಛೆ! ಸಖಿ, ಸುದ್ದಿಯನ್ನು ಹೊರಗೆ ಹಾಕಿದುದುಂಟೆ?'

'ಗುಪ್ತವಾಗಿಯೇ ಇಟ್ಟರೆ ಮುಂದೆ..... .... '

'ಮುಂದೇನು?' 'ಮೋಕ್ಷ ಪ್ರಾಪ್ತಿಯಾಗುವುದೆಂತು?'

'ನಾನಿಲ್ಲವೆ? ನಾನು ಅದೆಷ್ಟೇ ತೊಂದರೆಗಳು ಬಂದೊದಗಿದರೂ ಎದೆಗೆಡದೇ ಕಾರ್ಯಸಾಧನೆ ಮಾಡಿಯೇ ಮರಳುವೆನು.'

'ಎಷ್ಟು ದೂರ ಹೋಗಬೇಕಾಗುವುದೋ? ಅದೆಷ್ಟು ತೊಂದರೆಗಳುಂಟಾಗುವುವೋ? . '

'ಕಲ್ಪನಾಮಯ ಕಂಟಕಗಳ ಬಗ್ಗೆ ಕೈ-ಕಾಲುಗೆಟ್ಟರೆ ಕಾರ್ಯವೆಂತು ಕೈಗೂಡಬೇಕು?' 'ಹಾಗಾದರೆ .. ... '

'ನಿನ್ನ ಆ ಶಂಕೆ-ಕುಶಂಕೆಗಳನ್ನು ಮರೆತು ಬಿಡು.'

'ನೋಡು. ಲೇಖೆ, ನನ್ನ ಸಲುವಾಗಿ ನಿನಗೆ ಬಹಳ ತೊಂದರೆಯುಂಟಾಗುವುದು.' 'ಇದರಲ್ಲಿ ನನ್ನ ಕಾರ್ಯವೂ ಇದೆಯಲ್ಲ!'

'ಹಾಗಾದರೆ ನೀನು ಹೊರಡುವುದು ಯಾವಾಗ?'

'ಸದ್ಯ ಅವರು ಬಿಡಾರು ಬಿಟ್ಟುದನ್ನು ನಾನರಿತಿರುವೆನು. ಈಗಲೇ ನನ್ನ ಊಟ-ಉಡಿಗೆಗಳನ್ನು ತೀರಿಸಿ ಹೊರಡುವೆನು.'

'ನೋಡು ಒಳ್ಳೆಯ ವಾರ್ತೆ ತಂದುದಾದರೆ ಎಲ್ಲವೂ ಒಳಿತೆ .... .'

'ಇಲ್ಲವಾದರೆ, ಆ ಜನ್ಮ ಅವಿವಾಹಿತರಾಗಿಯೇ ಉಳಿಯತಕ್ಕುದು.'

'ಶುಭ ಸಂಗತಿ ತಿಳಿಯಬಹುದೆ?'

'ಸೂಜಿಯನ್ನು ಲೋಹ ಚುಂಬಕವಲ್ಲದೇ ಇನ್ನೇನೂ ಆಕರ್ಷಿಸಲಾರದು; ಮತ್ತು ಈ ಶುಭಯೋಗ ಶ್ರೀ ಜಗನ್ನಾಥನ ಸನ್ನಿಧಾನದಲ್ಲಿ ಸಂಭವಿಸಿತೆಂಬದೂ ನಮ್ಮ ಒಳಿತನ್ನೇ ಸೂಚಿಸುತ್ತದೆ.'

ಹೀಗೆ ಶಶಿಲೇಖೆ ನರಪತಿಯನ್ನು ಹಿಂಬಾಲಿಸಿ ಹೊರಟು ಅವನ ನಿಜ ಸಂಗತಿಯನ್ನು ದೊರಕಿಸಿಯೇ ಮರಳ ತಕ್ಕುದೆಂದು ನಿರ್ಧರವಾಯಿತು. ಯಾರೊಬ್ಬ ಚತುರ ಸೇವಕ-ಸೇವಕಿಯರನ್ನು ಕಳುಹಿದ್ದರೆ ಸಹಜವಾಗಿ ಸಾಧಿಸುತ್ತಲಿದ್ದಿತು; ಆದರೆ ಹೃದಯದ ಗೌಪ್ಯವು ಬಯಲಿಗೆ ಬೀಳುವುದೆಂಬ ಭಯ. ಅದಕ್ಕಾದರೂ ಎದೆಗೊಡಬಹುದಿತ್ತು; ಆದರೆ ಮುಂದೆ ತಮ್ಮನ್ನಾಕರ್ಷಿಸಿದವರು ತಮಗೆ ತಕ್ಕವರಾಗಿಲ್ಲವಾದರೆ? ಆಗ್ಗೆ ಜನತೆಯ ಉಪಹಾಸಕ್ಕೆ ಗುರಿಯಾಗಬೇಕಾಗುತ್ತಿದ್ದಿತಲ್ಲವೆ? ಆದುದರಿಂದಲೆ ಆ ಎಲ್ಲ ಸಂಗತಿಯನ್ನು

ಗುಪ್ತವಾಗಿಟ್ಟೇ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುದೆವೆಂದು ನಿರ್ಧರಿಸಿದರು.

ಶಶಿಲೇಖೆ ತನ್ನ ಊಟ-ಉಡಿಗೆ ಪೂರಯಿಸಿ ತಕ್ಕ ಸಿದ್ಧತೆಯೊಡನೆ ಹೊರಡಲನುವಾದಳು. ಜಗನ್ಮೋಹಿನಿ ಆಕೆಗೆ ಅದೆಷ್ಟೋ ಸಲಹೆಗಳನ್ನು ಕೊಟ್ಟಳು. ಸಾಧ್ಯವಾದರೆ ಸಂಜೆಗೆ ಮೊದಲು ಇನ್ನೊಂದು ಸಲ ಬಂದು ಹೋಗುವಂತೆ ಬಿನ್ನವಿಸಿದಳು. ಶಶಿಲೇಖೆ ಸಮಯೋಚಿತವಾಗಿ ತನ್ನ ವರ್ತನೆಯಿಡುವ ಬಗ್ಗೆ ಆಶ್ವಾಸನೆ ಕೊಟ್ಟು ಹೊರಟುಹೋದಳು.

ಶಶಿಲೇಖೆ ಹೋಗುತ್ತಲೆ ಬಿಡಾರದಲ್ಲಿ ಜಗನ್ಮೋಹಿನಿ ಒಬ್ಬಳೇ ಆದಳು. ಆಕೆಗೆ ಅನ್ಯ ವಿಚಾರಗಳೇನೂ ಸೂಚಿಸದಾದವು. ತನ್ನ ಮನೋರಮಣನ ಧ್ಯಾನದಲ್ಲಿ ಮಗ್ನಳಾದಳು 'ತನಗೆ ಆತನ ನಿಧಿಧ್ಯಾಸ ಹತ್ತಿರಬಹುದೆ? ತನ್ನ ಮನಸ್ಸು ಆತನಲ್ಲಿ ನೆಟ್ಟಹಾಗೆ, ಆತನ ಮನವೂ ತನ್ನಲ್ಲನುರಕ್ತವಾಗಿರಬಹುದೆ? ಆತನನ್ನು ಕೂಡುವದಕ್ಕಾಗಿ, ಆತನ ಪ್ರೇಮಸಂಪಾದನೆಗಾಗಿ, ಆತನೊಡನೆ ತನ್ನ ಜೀವನ ನೌಕೆ ಮುಂದೂಡುವದಕ್ಕಾಗಿ ತಾನು ಹಾತೊರೆಯುತ್ತಲಿದ್ದಂತೆ, ತಾನು ಯತ್ನಿಸುತ್ತಲಿದ್ದಂತೆ, ಪರಿತಪಿಸುತ್ತಲಿದ್ದಂತೆ, ಆತನೂ ಹಾತೊರೆಯುತ್ತಲಿರಬಹುದೆ? ಆತನೂ ಯೋಚಿಸುತ್ತಲಿರಬಹುದೆ?' ಎಂಬ ಯೋಚನೆಗಳಲ್ಲಿ ತೀರಾ ಮುಳುಗಿ ಹೋದಳು ತನ್ನಾ ಹೃದಯಾಭಿರಾಮನಾದ ಶ್ರೀಕೃಷ್ಣದೇವರಾಯನ ಧ್ಯಾನದಲ್ಲಿಯೇ ಮಗ್ನಳಾಗಿ ಹೋಗಿದ್ದಳು. ಶ್ರೀಕೃಷ್ಣದೇವರಾಯನಾರೆಂಬದೂ ಆತನ ಅವಸ್ಥೆ ಹೇಗಾಗಿದ್ದಿತೆಂಬದೂ ತಿಳದಿದ್ದರೆ, ಜಗನ್ಮೋಹಿನಿಗೆ ಅದೆಷ್ಟೋ ಆನಂದವಾಗಬಹುದಿತ್ತು.

ರಾಯನು ಜಗನ್ನಾಥ ಮಂದಿರದಿಂದ ಹೊರಬಿದ್ದನು ಒಡನೆಯೆ ಆತನ ನೆರಳಾಗಿದ್ದ ರಾಮಲಿಂಗನೂ ಬೆನ್ನುಹತ್ತಿದನು. ಇಬ್ಬರಿಗೂ ತಮ್ಮ ತಮ್ಮ ಯೋಚನೆಯೇ ನಾಕಷ್ಟಕ್ಕಿಂತ ಮಿಕ್ಕಿ ಹೋದುದರಿಂದ ಮೂಕರಂತೆ ಮುಂದೊರೆದಿದ್ದರು. ಮಾರ್ಗದಲ್ಲಿನ ಅನೇಕ ಜನರೂ ಅವರ ಭಿನ್ನ ಭಿನ್ನ ಉದ್ಯೋಗಗಳೂ ಅವರ ಚಿತ್ತವನ್ನು ತಮ್ಮತ್ತ ಸೆಳೆಯಲು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾಯಿತು. ಅವರು ಅಮಲೇರಿದವರಂತೆ ಕೆಲಬಲಗಳನ್ನೀಕ್ಷಿಸದೆ, ಯಾಂತ್ರಿಕ ಮಾನವರಂತೆ ಮುಂದೆ ಸಾಗಿದ್ದರು ಅಲ್ಪಾವಕಾಶದಲ್ಲಿಯೆ ತಾವು ತಂಗಿದ್ದ ಸ್ಥಳಕ್ಕೆ ತಲುಪಿದರು ಇಬ್ಬರೂ ಅನ್ಯಮನಸ್ಕರಾಗಿ ತಮ್ಮ ಉಡುಪುಗಳನ್ನು ಕಳಚಿಟ್ಟರು ಇಬ್ಬರೂ ತಮ್ಮ ತಮ್ಮ ಮನವನ್ನಪಹರಿಸಿದ ಆ ಸುರಸುಂದರಿಯರ ವಿಷಯಕವಾಗಿ ವಿಚಾರಿಸುತ್ತಲಿದ್ದರು. ರಾಯನೇ ಮೌನವನ್ನು ಮುರಿದು ಮಾತಿಗೆ ಮೊದಲು ಮಾಡಿದನು.

'ರಾಮಲಿಂಗ, ಇಂದಿನ ವಿಚಿತ್ರ ಯೋಗವನ್ನು ನೋಡಿದೆಯಾ?'

'ಅಹುದು. ದೊರೆಗಳೇ, ಅಖಿಲ ಭಾರತವರ್ಷವನ್ನೇ ತಿರುಗಾಡಿದ ನಮಗೆ ಒಂದು ಸಲವೂ ಇಂತಹ ಚಮತ್ಕಾರಿಕ ಯೋಗ ಸಂಭವಿಸಿರಲಿಲ್ಲ. ಇದುವರೆಗೆ ಸಾವಿರಾರು ಸುಂದರಿಯರ ಮುಖಕಮಲವನ್ನು ನೋಡಿರಬಹುದು. ಅದರಲ್ಲಿಯೂ ಕನ್ನಡ ಸಾಮ್ರಾಜ್ಯಾಧೀಶ್ವರರಿಂದ ತಮ್ಮನ್ನು ಸೇವಿಸಲು, ತಮ್ಮ ದಾಸಿಯರಾಗಿ ಜನ್ಮಸಾರ್ಥಕ ಮಾಡಿಕೊಳ್ಳಲು ಬಹಳವಾಗಿ ಬಯಸಿದವರು ಲಕ್ಷಾವಧಿ ತರುಣಿಯರಿರಬಹುದು, ಆದರೆ ಇಂದು ಪ್ರಭುಗಳ ಚಿತ್ತವನ್ನು ಇಷ್ಟು ಸೆಳೆದುಬಿಟ್ಟ ಆ ಕಲಿಂಗಪುತ್ರಿಯೇ ಧನ್ಯಳು.'

'ರಾಮಲಿಂಗ, ನಿಜವಾಗಿಯೂ ಆ ಮೋಹಿನಿಯ ರೂಪು ಅವರ್ಣನೀಯವಾದುದು. ಪುಣ್ಯಕ್ಕೆ ಅಚಾನಕವಾಗಿ ಆಕೆ ಯಾರೆಂಬದು ತಿಳಿಯಿತು. ಇಲ್ಲವಾದರೆ ಬಹಳ ತೊಂದರೆಗೆ ಗುರಿಯಾಗಬೇಕಿದ್ದಿತು. ರಾಮಲಿಂಗ ನೀನಾ ಸ್ವರ್ಗೀಯ ಅಪ್ಸರೆಯ ಮೊಗವನ್ನೀಕ್ಷಿಸಲಿಲ್ಲ.'

'ದೊರೆಗಳು ನೋಡಿದರಲ್ಲವೆ? ಅಷ್ಟೇ ಸಾಕು'

'ಇದೆಲ್ಲವೂ ದಾಕ್ಷಿಣ್ಯದ ಮಾತು. ಆ ಸಮಯಕ್ಕೆ ನಿನ್ನ ಕಣ್ಣುಗಳಿಗೆ ಬಿಡುವಿದ್ದರಲ್ಲವೆ ನೀನು ನೋಡುವುದು? ನಿನ್ನ ನೋಟವನ್ನಾಕರ್ಷಿಸಿದ ಆ ಇಂದುವದನೆಯ ಸುಂದರ ಮೊಗದಲ್ಲಿಯೇ ನೀನು ಲೀನನಾಗಿದ್ದೆಯಲ್ಲವೆ?'

'ತಂದೆಯಂತೆ ಮಗ.'

'ಭಾಪು! ಭಾಪು! ನಿನ್ನಂತಹ ಚತುರನನ್ನು ಕೇಳುವುದೇನು?'

'ಈಗೇನು ಮಾಡತಕ್ಕದು?'

'ಕಂಡ ರತ್ನಗಳೇನೋ ಬೆಲೆಯುಳ್ಳವಿವೆ; ಮತ್ತು ಸುಲಭಸಾಧ್ಯವಿವೆ; ಆದರೆ ಒಮ್ಮೆಲೆ ಮುಂದೊರೆಯುವುದು ಮೂರ್ಖತನವಾಗುವುದಿಲ್ಲವೆ?'

'ದೊರೆಗಳೇ, ನಾನಾ ವಿಷಯವನ್ನು ವಿಚಾರಿಸಲಿಲ್ಲ. ಆ ಬಗ್ಗೆ ಯೋಚಿಸಲು ಸಾಕಷ್ಟು ಅವಧಿಯಿದೆ. ಈಗಲೇ ದುಡುಕಲು ಕಾರಣವೂ ಇಲ್ಲ. ಇದಲ್ಲದೆ, ಆ ರತ್ನಗಳಾದರೂ ಸದ್ಯ ಅನ್ಯರ ಕೈಗೆ ಬೀಳಬೇಕಾಗಿಲ್ಲ. 'ಈಗ ನಾವೇನು ಮಾಡತಕ್ಕದು?' ಎಂಬದೇ ನನ್ನ ಪ್ರಶ್ನೆಯ ಉದ್ದೇಶವಾಗಿದ್ದಿತು.'

'ಜಗನ್ನಾಥನ ದರುಶನವಾಯಿತು. ಇಲ್ಲಿಯೆ ಇರಬಹುದಾದ ಬೇರೆ ಪ್ರದೇಶಗಳನ್ನು ನೋಡಿ ಬರುವಾ. ರಥೋತ್ಸವದ ಸಮಯಕ್ಕೆ ಮರಳುವಾ. ಏಕೆ ನಿನ್ನ ವಿಚಾರವೇನು?' 'ಅನ್ಯಥಾ ಏನೂ ಇಲ್ಲ.'

'ಹಾಗಾದರೆ ಏಳು.' 'ನಡೆಯಿರಿ.'

ಇಬ್ಬರೂ ಅಲ್ಲಲ್ಲಿನ ಸೃಷ್ಟಿಸೌಂದರ್ಯವನ್ನೀಕ್ಷಿಸುವುದರಲ್ಲಿಯೇ ಮಗ್ನರಾಗಿ ಹೊರಟರು. ಅವರು ಅಲ್ಲಿಂದ ಹೊರಟ ಅಲ್ಪಾವಕಾಶದಲ್ಲಿಯೇ ಶಶಿ

ಲೇಖೆ ಅವರ ಬೀಡಾರಕ್ಕೆ ಬಂದಳು. ಅಲ್ಲಿ ಇಬ್ಬರೂ ಇಲ್ಲದ್ದನ್ನು ನೋಡಿ ಗಾಬರಿಯಾದಳು. ಅವರನ್ನು ಗುಪ್ತವಾಗನುಸರಿಸಿ, ಅವರಾರು? ಎಂಬ ಬಗ್ಗೆ ಸಂಪೂರ್ಣ ಸಂಗತಿಯನ್ನು ಪಡೆಯುವ ಹಾರೈಕೆಯಿಂದ ಬಂದಿದ್ದಳು. ಅಂದಿನ ತನ್ನ ಯತ್ನದ ಮೇಲೆಯೇ ಜಗನ್ಮೋಹಿನಿಯ ಮತ್ತು ತನ್ನ ಭವಿಷ್ಯ ಅವಲಂಬಿಸಿದ್ದಿತೆಂದು ಶಶಿಲೇಖೆ ಮರೆತಿರಲಿಲ್ಲ. ಅಂತೆಯೇ ಆಕೆ ಲಗುಬಗೆಯಿಂದ ಮರಳಿ ಬಂದಳು. ರಥೋತ್ಸವವಾಗುವವರೆಗೆ ತಮ್ಮ ಬೀಡಾರದಿಂದ ಕದಲಲಿಕ್ಕಿಲ್ಲವೆಂದು ಆಕೆ ತಿಳಿದಿದ್ದಳು. ಅಂತೆಯೇ ರಾಜಪುತ್ರಿಗೆ ಸಂಗತಿಯನ್ನರುಹಿ ಬರಲು ಹೋಗಿದ್ದಳು; ಆದರೆ ಮರಳಿ ಬರುವಲ್ಲಿ ಅಲ್ಲೇನಿದೆ? ಅವರೀರ್ವರು ಮಲಗಿದ ಒಂದು ಪ್ರಾಕಾರವಿದೆ. ಅಲ್ಲಿ ಹೊಸಬರಾರೋ ಬಂದು ಬೀಡು ಬಿಟ್ಟಿದ್ದರು ಅವರನ್ನು ವಿಚಾರಿಸಿದಳು. ಅದರಿಂದ ಲಾಭವೇನೂ ಆಗಲಿಲ್ಲ. ಮುಂಗಾಣದಾಗಿ ಶಶಿಲೇಖೆ ಜನಸಂದಣಿಯಲ್ಲಿ ಅತ್ತಿತ್ತ ತಿರುಗಲಾರಂಭಿಸಿದಳು ಹತ್ತೆಂಟು ಜನ ನೆರೆದಲ್ಲಿ ಹೋಗಿ ನೋಡಹತ್ತಿದಳು; ಆದರೆ ಮಹಾನಾಗರದಂತೆ ಕಲೆತಿದ್ದ ಆಲ್ಲಿ ಅವರೀರ್ವರನ್ನು ಹೇಗೆ ಕಾಣುವಳು? ನಿರಾಶಳಾದಳು. ಆಕೆಯ ಶಕ್ತಿಯೆಲ್ಲವೂ ನಷ್ಟವಾಗಿ ಹೋಯಿತು. ದಾರಿಯ ದಣುವೂ ಮನಸ್ಸಿನ ಅಸ್ವಸ್ಥತೆಯೂ ಆಕೆಯನ್ನು ಬಹಳ ಕಳವಳಕ್ಕೆ ಗುರಿಮಾಡಿದವು.

ಸಂಜೆಯ ಮೂರನೆಯ ಪ್ರಹರದ ವರೆಗೆ ಶಶಿಲೇಖೆ ಒಂದೇಸವನೆ ತಿರುಗಾಡಿದಳು; ಎಲ್ಲೆಡೆಯಲ್ಲೂ ಅರಸಿದಳು. ಎಲ್ಲವೂ ನಿರರ್ಥಕವಾಯಿತು. ಕೊನೆಗೆ ಉಪಾಯಗಾಣದೆ ಮೋಹಿನಿಯ ಬಳಿಗೆ ಬಂದಳು.

ಜಗನ್ಮೋಹಿನಿಯು ಊರಿಗೆ ಮರಳುವ ಯೋಚನೆಯಲ್ಲಿದ್ದಳು. ಮ್ಲಾನವದನಳಾಗಿ ಮರಳಿ ಬಂದ ಶಶಿಲೇಖೆಯನ್ನು ನೋಡುತ್ತಲೆ ಆಕೆ ಗಾಬರಿಯಾದಳು. ಆತುರತೆಯಿಂದ: 'ಏಕೆ ಲೇಖೆ, ಮುಖ ಬತ್ತಿದೆ?' ಎನ್ನಲು,

ಶಶಿಲೇಖೆ ನಿಟ್ಟುಸಿರು ಬಿಡುತ್ತ ಬಹಳ ದುಃಖದಿಂದ:—'ರಾಜಪುತ್ರೀ, ಕೊನೆಗೆ ಕೈಮೀರಿ ಹೋಯಿತು.' ಎಂದು ಮೆಲ್ಲನೆ ನುಡಿದಳು.

'ಅಂದರೆ?' ಜಗನ್ಮೋಹಿನಿ ಬಹಳ ದುಃಖದಿಂದ ಕೇಳಿದಳು: 'ಕೈಮೀರಿ ಹೋಯಿತೆಂದರೆ, ಆದುದಾದರೂ ಏನು?'

'ನಿನಗೆ ಆಶ್ವಾಸನೆ ಕೊಟ್ಟು ಹೋದ ನಾನು' ಶಶಿಲೇಖೆ ಹೇಳಲಾರಂಭಿಸಿದಳು. 'ನಿನ್ನ ಯಾವ ಕೆಲಸವನ್ನೂ ಕೈಗೂಡಿಸದೆ ಮರಳಿದೆನು.'

'ಅದೇಕೆ?' ಜಗನ್ಮೋಹಿನಿ ಆತುರತೆಯಿಂದ ಪ್ರಶ್ನೆ ಮಾಡಿದಳು. 'ಪೂರ್ಣವಾಗಿ ವಿವರಿಸು ನೋಡುವಾ.'

'ವಿವರಿಸಲು ಏನಾದರೂ ಇದ್ದರಲ್ಲವೆ?' ಶಶಿಲೇಖೆ ಹತಾಶದಿಂದಂದಳು.

'ಆದುದಾದರೂ ಏನು?' ಜಗನ್ಮೋಹಿನಿ ಸಂತೈಸುವ ಸ್ವರದಲ್ಲಿ ಕೇಳಿದಳು: 'ನಾನು ಎಂತಹ ಭೀಕರ ವಾರ್ತೆಯನ್ನಾದರೂ ಕೇಳಲು ಸಿದ್ಧಳಿರುವೆನು; ಆದುದರಿಂದ ಏನಿದ್ದುದನ್ನು ಹೇಳು.'

'ನಾನೇನು ಹೇಳಲಿ?' ಶಶಿಲೇಖೆ ನಿರಾಶಾ ಸೂಚಕ ಸ್ವರದಲ್ಲಿ ಕೇಳಿದಳು.

'ನೀನು ಹೋಗಿ ಅವರನ್ನು ಕಂಡೆಯಷ್ಟೆ?' ಜಗನ್ಮೋಹಿನಿ ಒಂದೊಂದೇ ಸಂಗತಿಯನ್ನರಿಯುವ ಇಚ್ಛೆಯಿಂದ ಕೇಳಿದಳು.

'ಅಷ್ಟಾಗಿದ್ದರೆ ನಾನು ಕೈಮುಚ್ಚಿಕೊಂಡು ಮರಳುತ್ತಲಿದ್ದೆನೆ?' ಶಶಿಲೇಖೆ ಮರಳಿ ಪ್ರಶ್ನೆ ಮಾಡಿದಳು.

'ಅಂದರೆ?' ಜಗನ್ಮೋಹಿನಿ ಆಶ್ಚರ್ಯದಿಂದ ಕೇಳಿದಳು.

'ನಾನು ಹೋಗುವ ಸಮಯಕ್ಕೆ ಅವರು ಹೊರಟು ಹೋಗಿದ್ದರು.' ಶಶಿಲೇಖೆ ದುಃಖದಿಂದ ಹೇಳಲಾರಂಭಿಸಿದಳು· 'ಇಲ್ಲಿಂದ ನಾನು ಲಗುಬಗೆಯಿಂದ ಹೋಗಿ ನೋಡಿದರೆ, ಅಲ್ಲಿ ಅವರೀರ್ವರೂ ಕಾಣಲಿಲ್ಲ ನನ್ನ ಕಲ್ಪನೆಯೇ ತಪ್ಪಿತೆಂದು ಮತ್ತೊಂವೆಡೆ ಹೋದೆನು ಅಲ್ಲಿಯೂ ಕಾಣಲಿಲ್ಲ ಗಾಬರಿಯಾಗಿ ಅತ್ತಿತ್ತ ಅದೆಷ್ಟು ಶೋಧಿಸಿದರೂ ಅವರ ಸುಳುವೇ ತಿಳಿಯಲಿಲ್ಲ'

'ಅವರೆಲ್ಲಿ ಹೋಗಿದ್ದರು?' ಜಗನ್ಮೋಹಿನಿ ಕೇಳಿದಳು

'ಅದೇ ತಿಳಿಯಲಿಲ್ಲ. ನಾನು ಅನೇಕರನ್ನು ಕೇಳಿದೆನು, ಅನೇಕ ವಿಧವಾಗಿ ಯತ್ನಿಸಿದೆನು, ಅನೇಕ ಸ್ಥಳಗಳಲ್ಲಿ ಶೋಧಿಸಿದೆನು. ಅನೇಕ ಬಗೆಯಾಗಿ ಯೋಚಿಸಿದೆನು. ಸಂಪೂರ್ಣ ನಿಷ್ಫಲವಾಯಿತು' ಶಶಿಲೇಖೆ ಪೂರ್ಣವಾಗಿ ವಿವರಿಸಹತ್ತಿದಳು

"ಲೇಖೆ, ಇಂದಿನ ವಿಚಿತ್ರ ಯೋಗಕ್ಕೆ ಏನೆನ್ನಬೇಕು? ಯಾವ ಯೋಚನೆಯೂ ಇಲ್ಲದೆ ಸ್ವಸ್ಥಚಿತ್ತದಿಂದ ಜಗನ್ನಾಥನ ದರುಶನಕ್ಕೆ ಬಂದಿರಲು, ಅಕಸ್ಮಾತ್ ಅಪರಿಚಿತರನ್ನು ಕಂಡು, ಅವರಲ್ಲಿ ಮನಸ್ಸು ಪೂರ್ಣ ತೊಡಗಿ ಹೋಯಿತು. 'ಯಾರು?' 'ಏನು?' ಎಂಬ ಯಾವ ಸಂಗತಿಯೂ ತಿಳಿಯದೆ ಯೋಚನೆಗೊಳಗಾಗಿ ಹೇಗಾದರೂ ಅದನ್ನರಿಯಬೇಕೆಂದು ಯತ್ನಿಸಲು, ಏನೂ ತಿಳಿಯದಾಯಿತು." ಜಗನ್ಮೋಹಿನಿ ದುಃಖಮಿಶ್ರಿತ ಸ್ವರದಲ್ಲಿ ನುಡಿದಳು.

'ರಾಜಪುತ್ರೀ, ನಿಜವಾಗಿಯೂ ನಾನು ಮೂಢಳಾಗಿರುವೆನು. ಇಷ್ಟು ಬೇಗ ಅವರು ಅದೃಶ್ಯರಾಗುವರೆಂದು ನಾನೆಂದೂ ಊಹಿಸಿರಲಿಲ್ಲ. ರಥೋತ್ಸವದ ಸಮಯದವರೆಗೆ ಬಹುಶಃ ಅಲ್ಲಾಡಲಿಕ್ಕಿಲ್ಲವೆಂದೇ ನನ್ನ ತರ್ಕವಿದ್ದಿತು; ಆದರೂ ನಾನು ಗಡಿಬಿಡಿಯಿಂದಲೇ ಹೋದೆನು. ಉಪಯೋಗ

ವಾಗಲಿಲ್ಲ. ಇನ್ನು ಮುಂದೆ ಗತಿಯೇನು? ನಾವವರನ್ನು ಶೋಧಿಸುವದೆಂತು? ಅವರನ್ನು ನಾವು ಕಾಣುವುವೆಂತು? ಅವರಿಲ್ಲದೆ ನಮ್ಮಜೀವನಗಳು ಸುಖಿಸುವುದೆಂತು? ಎಲ್ಲವೂ ಅಸಾಧ್ಯವಾಗಿಯೇ ತೋರುತ್ತದೆ' ಶಶಿಲೇಖೆ ನಿರಾಶೆಯಿಂದ ಮಾತನಾಡಿದಳು.

'ಲೇಖೆ, ಎಲ್ಲವೂ ಜಗನ್ನಾಥನಾಧೀನವಾದುದಲ್ಲವೆ? ಇಂದು ನಮ್ಮನ್ನೆಳೆದು ತಂದವನೂ ಆತನೆ, ಈ ವಿಚಿತ್ರಯೋಗ ಕೂಡಿಸಿದವನೂ ಆತನೆ, ಮುಂದಾದರೂ ಎಲ್ಲವನ್ನೂ ಕೂಡಿಸುವವನೂ ಆತನೇ ಎಂದು ನಂಬೋಣ. ನಿಜವಾಗಿಯೂ ಒಳಿತು ಸಂಭವಿಸುತ್ತಲಿದೆಯೆಂದು ನನ್ನ ಮನಸ್ಸು ಹೇಳುತ್ತಲಿದೆ. ಆಗಲಿ. ಸುಮ್ಮನೆ ಕುದಿಯುತ್ತ ಕೂರುವುದಕ್ಕಿಂತಲೂ ಎಲ್ಲವನ್ನೂ ಜಗನ್ನಾಥನಿಗೊಪ್ಪಿಸಿ ಬಿಡೋಣ. ಆತನೇ ಏನು ಮಾಡಿಸುವನೋ ಮಾಡಿಸಲಿ. ಅಕೊ, ಜಗನ್ನಾಥನ ರಥೋತ್ಸವ ಪ್ರಾರಂಭವಾಯಿತು ರಥ ಮುಂದೆ ಸಾಗುತ್ತಲಿ ಮರಳುವಾ' ಜಗನ್ಮೋಹಿನಿ ಶಶಿಲೇಖೆಯನ್ನು ಸಂತೈಸುತ್ತ ನುಡಿದಳು.

ಜಗನ್ನಾಥನ ರಥೋತ್ಸವ ಪ್ರಾರಂಭವಾಯಿತು. ಅತ್ಯಂತ ವೈಭವಪೂರ್ಣವಾದ ಆ ಉತ್ಸವವನ್ನು ನೋಡುವುಸರಲ್ಲಿ ಜನರ ಕಣ್ಣು ಕುಕ್ಕಿಹೋದುವು. ಎಲ್ಲರೂ ಹೃಷ್ಟಮನಸ್ಕರಾಗಿ ಜಗನ್ನಾಥನ ವೈಭವವನ್ನು ಕಣ್ಣುಗಳಿಂದೀಕ್ಷಿಸಿದರು

ಜಗನ್ಮೋಹಿನಿ-ಶಶಿಲೇಖೆಯರೂ ರಥೋತ್ಸವವನ್ನೀಕ್ಷಿಸಿದರು, ಜಗನ್ನಾಥನನ್ನು ಬಹಳವಾಗಿ ಸ್ತುತಿಸಿದರು, ತಮ್ಮ ತಮ್ಮ ಮನೋಬಯಕೆಗಳನ್ನೀಡೇರಿಸಿಕೊಡಬೇಕೆಂದು ಬೇಡಿಕೊಂಡರು.

ತೇರು ಮುಂದೆ ಸಾಗುತ್ತಲೆ ಇಬ್ಬರೂ ತಮ್ಮ ಸೇವಕರನ್ನೊಡಗೊಂಡು ಹೊರಟು ಮನೆಗೆ ತಲುಪಿದರು ಜಗನ್ಮೋಹಿನಿಗೆ ಎಲ್ಲಿ ಹೋದರೂ ಸೊಗಸೆನಿಸಲಿಲ್ಲ. ಏನನ್ನೋ ಕಳೆದುಕೊಂಡಂತಾಗಿದ್ದಿತು. ಎಲ್ಲ ಕೆಲಸಗಳಲ್ಲಿಯೂ ನಿತ್ಯದಂತೆ ಭಾಗ ವಹಿಸುತ್ತಿದ್ದಳು; ಆದರೆ ಅದರಲ್ಲೇನೂ ತಿರುಳಿಲ್ಲದಂತಾಗಿದ್ದಿತು ಮನೆಮಂದಿಯೆಲ್ಲವೂ ಸಾರಹೀನವಾದಂತಾಗಿದ್ದಿತು ಅಲ್ಪವಾದರೂ ಅವಕಾಶ ದೊರತರಾಯಿತು, ಕಣ್ಣುಮುಚ್ಚಿಕೊಂಡು ಹೃದಯಸಿಂಹಾಸನವನ್ನೇರಿ ಕುಳಿತ ಮನೋವಲ್ಲಭನವಲೋಕನೆಯಲ್ಲಿ ಕುಳಿತುಬಿಡುತ್ತಿದ್ದಳು ಹೀಗೆ ಕನ್ನಡಿಗರೊಡೆಯ-ಶ್ರೀಕೃಷ್ಣದೇವರಾಯ ಕಲಿಂಗ ಪ್ರಜೆಗಳ ಹೃದಯವನ್ನಾಕ್ರಮಿಸಿದ್ದಂತೆ ಕಲಿಂಗರಾಜಪುತ್ರಿಯ ಹೃದಯದಲ್ಲಿಯೂ ಪ್ರವೇಶ ಮಾಡಿದನು. ಅದರಲ್ಲಿನ ವಿಶೇಷವೆಂದರೆ, ತನ್ನ ಹೃದಯವನ್ನು ಆಕೆಗೆ ಬದಲು ಅರ್ಪಣೆ ಮಾಡಿಬಿಟ್ಟದ್ದನು!

## ೫ ಕನ್ನಡಿಗರ ಶಿಬಿರ

ಬೇಸಿಗೆಯ ಮುಚ್ಚಂಜೆಯ ಸಮಯ. ಚಂಡಭಾಸ್ಕರನ ಪ್ರಚಂಡವಾದ ಬಿಸಿಲಿಗೆ ಬೆಂದು, ಬಾಯಾರಿ, ಬೇಗುದಿಗೊಂಡ ಸಕಲಪ್ರಾಣಿವರ್ಗವೂ ಬಿಡುಗಡೆಯ ಆನಂದವನ್ನು ಸಂದರ್ಶಿಸುವಂತೆ ಮಂದವಾಯುವನ್ನು ಸ್ವಾಗತಿಸುತ್ತಲಿದ್ದಿತು. ವಾಯುವಾದರೂ ಸಹಸ್ರ ಕಿರಣನ ಆಳಿಕೆಗೆ ಭಯಪಟ್ಟು ಅಡಗಿಕುಳಿತವನು, ಆ ಬೆಂಗದಿರ ಮರೆಯಾದನೋ ಹೇಗೆ ಎಂಬದನ್ನಿಣುಕುವವನಂತೆ ಬಹು ಮೆಲ್ಲನೆ ಮುಂಬರುತ್ತಲಿದ್ದನು. ಕಗ್ಗತ್ತಲೆಯಲ್ಲಿ ಅಲ್ಪವಾದರೂ ಬೆಳಕು ತೋರಿದರೆ, ಅಷ್ಟೇ ಬಹಳವೆಂದು ಭಾವಿಸುವಂತೆ, ಚಂಡಾತಪದ ಹಿಂದೆ ಬಂದ ಆ ಮಂದವಾಯುವಿಗೇನೇ ಭೂದೇವಿ ಅದೆಷ್ಟೋ ಆನಂದಿತಳಾಗಿರುವಂತೆ ತೋರಿತು. ತಾವು ಪ್ರೇರಿಸಿ ಅಟ್ಟಿದ ಚಂಡಭಾನುವಿನ ಆಳಿಕೆಯಲ್ಲಿ ಮರ್ತ್ಯರು ಹೇಗಿರುವರೆಂಬದನ್ನವಲೋಕಿಸಲು ಒಬ್ಬೊಬ್ಬರೇ ದೇವತೆಗಳು ಇಣುಕುವಂತೆ, ತಾರಕಾಗಣವು ಒಂದೊಂದೇ ಕಂಗೊಳಿಸಹತ್ತಿದ್ದಿತು. ದಿನಮಣಿಯಡಗಿ ಕತ್ತಲೆಯನ್ನು ಪಸರಿಸುತ್ತಲಿದ್ದ ಸಂಗತಿ ತಿಳಿಯಲು, ತಮ್ಮ ನಸುತೇಜದಿಂದ ಭೂಮಿಯ ಜನತೆಯನ್ನು ಕಾಪಾಡಬೇಕೆಂಬ ಸದ್ಬುದ್ಧಿಯಿಂದ ನಕ್ಷತ್ರಗಡಣವು ಲಗುಬಗೆಯಿಂದ ಗಗನತಲದಲ್ಲಿ ಸ್ಥಾನಾಪನ್ನವಾಗಹತ್ತಿದವು.

'ನಿಶೆಯು ರಕ್ಕಸಿಯೋಪಾದಿಯಲ್ಲಿ ಭೂದೇವಿಯನ್ನು ಪೀಡಿಸುವಳು' ಎಂದು ಅನೇಕ ಕವಿಗಳನ್ನುವದುಂಟು; ಆದರೆ ನಿಜವಾಗಿಯೂ ವಿಚಾರಿಸಿದಲ್ಲಿ ನಿಶಾದೇವಿ ಅದೆಷ್ಟು ಕರುಣಾಮಯಿಯಿರುತ್ತಾಳೆಂಬದು ತಿಳಿಯದಿರದು. ವಿವಿಧೋದ್ಯೋಗಗಳಲ್ಲಿ ಅನೇಕ ವ್ಯವಹಾರ-ವ್ಯಾಪಾರಗಳಲ್ಲಿ, ಭಿನ್ನ ಭಿನ್ನ ಶಾರೀರಿಕ-ಮಾನಸಿಕ ಕಾರ್ಯಮಂದಿರಗಳಲ್ಲಿ ಕೆಲಸಮಾಡಿ ದುಡಿದು, ದಣಿದ ಮಾನವನಿಗೆ ವಿಶ್ರಾಂತಿಯ ಸಮಯವೆಂದರೆ, ಕತ್ತಲೆಯು. ಸಕಲ ವಿಶ್ವವನ್ನೂ ತನ್ನ ಮೃದುವಾದ ಮಡಲಲ್ಲಿಟ್ಟು ಮಮತೆಯಿಂದ ಸಂತೈಸಿ ನಿದ್ರಿಸುವಂತೆ ಜೋಗುಳ ಪಾಡುವವಳು ಕತ್ತಲೆಯಮ್ಮನು. ದಿವಸದ ಕಾರ್ಯಭಾರದಿಂದ ಸಂತ್ರಸ್ತಳಾದ ಭೂಮಾತೆಯನ್ನು ಕರುಣೆಯಿಂದ ಕಾಪಾಡುವವಳು ನಿಶಾದೇವಿಯು. ದುಡಿಮೆಯಿಂದ ದಣಿದ ಪ್ರಾಣಿವರ್ಗಕ್ಕೆ ನಿದ್ರಾಮೃತವನ್ನು ನೀಡಿ, ಹೊಸಹುರುಪಿನಿಂದೇಳುವಂತೆ ಮಾಡುವ ಪ್ರಭಾವಶಾಲಿನಿಯು ಇರುಳಮ್ಮನು. ಹೀಗೆ ನಮಗೆ ಕತ್ತಲೆಯು ಅಷ್ಟು ಉಪಕಾರಿಯಾಗಿರಲು, ಆಕೆಯ ನಿಂದೆಯನ್ನೇ ಮಾಡುತ್ತಲಿರುವುದನ್ನು ನೋಡಿದರೆ, 'ಪಯಃಪಾನಂ ಭುಜಗಾನಾಂ ಕೇವಲಂ ವಿಷವರ್ಧನಂ' ಎಂಬ ಕವಿಯ ಉಕ್ತಿ ಸ್ಮರಣೆಗೆ ಬಾರದಿರುವುದಿಲ್ಲ. ಇರಲಿ.

ಇಂತಹ ಸಮಯದಲ್ಲಿ ಸಿಂಹಾಚಲದಲ್ಲಿ ತಮ್ಮ ವಾಸಕ್ಕೆಂದು ಸಿದ್ಧಪಡಿಸಿದ ಶಿಬಿರದಲ್ಲಿ ಕನ್ನಡ ದೊರೆ ಆಲೋಚನಾಪರನಾಗಿ ಕುಳಿತಿದ್ದನು. ೪-೬ ಮೇಣಬತ್ತಿಗಳಿಂದ ಹರಡಿದ ಅಂಥ ಪ್ರಕಾಶವು ನರಪತಿ ಕುಳಿತ ಸ್ಥಳವನ್ನು ತೋರುತ್ತಲಿದ್ದಿತು. ನರಪತಿಯ ತಲೆಯಲ್ಲಿ ಅನೇಕ ವಿಚಾರಗಳು ಮನೆ ಮಾಡಿದ್ದುವು. ಮೊದಲನೆಯದು ಮತ್ತು ಮುಖ್ಯವಾದುದೆಂದರೆ, ಜಗನ್ಮೋಹಿನಿಯ ವಿಷಯ. ರಥೋತ್ಸವದ ದಿನದಿಂದ ಎರಡು ಮೂರು ವಾರಗಳು ಗತಿಸಿದ್ದುವು. ಅಷ್ಟು ಅವಧಿಯಲ್ಲಿ ಅವನು ಜಗನ್ಮೋಹಿನಿಯನ್ನು ಒಂದು ಸಲವಾದರೂ ದೃಷ್ಟಿಸಿರಲಿಲ್ಲ. ಆದರೇನು? ಅಂದಿನ ಆ ದಿವ್ಯಸ್ಮರಣೆ ಅಚ್ಚಳಿಯದೆ ಸ್ಪಚ್ಛವಾಗಿದ್ದಿತು. ಜಗನ್ಮೋಹಿನಿಯ ಆ ಮನಮೋಹಕ ಸುಮಧುರ ರೂಪವೂ, ಮೊಗದಲ್ಲಿನ ಅದ್ವಿತೀಯ ಚಿತ್ತಾಕರ್ಷಕ ತೇಜವೂ, ಸಾತ್ವಿಕ ಪ್ರಭೆಯಿಂದ ಪ್ರಕಾಶಿಸುವಂತಿದ್ದ ಸುಂದರ ಕಣ್ಗಳೂ ಆತನ ಚಿತ್ತಭಿತ್ತಿಯಲ್ಲಿ ಆಳವಾಗಿ ನೆಟ್ಟು ಹೋಗಿದ್ದುವು. ಜಗನ್ಮೋಹಿನಿಯು ತನಗೆ ತೀರಾ ತಕ್ಕವಳಾದ ಮನದಿಸಿಯಳೂ, ವಿಜಯನಗರ ಸಾಮ್ರಾಜ್ಯಕ್ಕೆ ವಿಶೇಷವಾಗಿ ರೋಭಿಸುವಂತಹ ಮಹಾರಾಣಿಯೂ, ಕನ್ನಡಿಗರನ್ನು ಮಮತೆಯಿಂದ ಮನ್ನಿಸಿ ಕಾಯುವ ಮಾತೆಯೂ ಆಗಲು ಯೋಗ್ಯಳಿರುವಳೆಂದು ಅವನಿಗೆ ನಂಬುಗೆಯಾಯಿತು. ಜಗನ್ಮೋಹಿನಿಯನ್ನು ಹೊಂದುವುದೇನೂ ಅಸಾಧ್ಯವಾಗಿರಲಿಲ್ಲ; ಆದರೆ ಅದರಲ್ಲಿ ವಿಜಯನಗರದ ಸಿಂಹಾಸನಕ್ಕೆ ಕೊರತೆಬಾರದಂತಾಚರಿಸಬೇಕಾಗಿದ್ದಿತು. ಮನೆಯಿಂದ ನಾಲ್ಕೈದು ನೂರು ಮೈಲುಗಳಷ್ಟು ಕ್ರಮಿಸಿ, ಎಲ್ಲೆಡೆಯಲ್ಲೂ ವಿಜಯಧ್ವಜವನ್ನು ಮೆರೆಯಿಸುತ್ತ ಬಂದು ಸಿಂಹಾಚಲವನ್ನು ಗೆದ್ದು, ಅಲ್ಲಿಂದ ಗಜಪತಿಯನ್ನೋಡಿಸಿದ್ದನು; ಆದರೆ ಅಷ್ಟರಿಂದ ಗಜಪತಿಯು ಬಲಹೀನನಾಗಿರುವನೆಂದು ಅವನೆಣಿಸಿರಲಿಲ್ಲ. ಇನ್ನೂ ಗಜಪತಿಯ ಬಲವು ಬಹಳವಾಗಿರಬಹುದೆಂಬ ವಾರ್ತೆ ಆತನಿಗೆ ಆಗಾಗ್ಗೆ ತಲುಪುತ್ತಲಿದ್ದಿತು. ಅವನ ಬಲವು ಯಾವ ಪ್ರಕಾರದ್ದಿತ್ತೆಂದು ಅವನಿನ್ನೂ ತಿಳಿದಿರಲಿಲ್ಲ. ಗಜಪತಿಯ ಸನ್ನಾಹ ತೀರಾ ಗುಪ್ತವಾಗಿ ನಡೆದ ಮೂಲಕ ಆತನಿಗೆ ಯಾವ ಸಂಗತಿಯೂ ತಿಳಿದಿರಲಿಲ್ಲ ಅದನ್ನರಿಯುವುದು ಮುಖ್ಯ ಕರ್ತವ್ಯವಾಗಿದ್ದಿತು. ಪ್ರಾಣಿವಧೆಗೆ ನರಪತಿ ಅಳುಕುತ್ತಲಿದ್ದನು. ಯಾವ ಕಾರ್ಯ ಕೈಗೂಡಿಸಬೇಕಾದರೂ ಅದನ್ನು ಆದಷ್ಟು ಪ್ರಾಣಹಾನಿಯಿಲ್ಲದೆ ಸಾಧಿಸಲೆತ್ನಿಸುತ್ತಲಿದ್ದನು. ಯುದ್ಧದ ಹೊರತು ಗತ್ಯಂತರವೇ ಇಲ್ಲವೆಂದು ತಿಳಿದರೆ ಎಂದೂ ಹಿಂದೆ ಸರಿಯುತ್ತಲಿರಲಿಲ್ಲ; ಮತ್ತು ಒಮ್ಮೆ ಯುದ್ಧದಲ್ಲಿ ಧುಮುಕಿದರೆ ಗಜರಾಜ ಕಾಸಾರಪ್ರವೇಶ ಮಾಡಿದಂತಾಗುತ್ತಲಿದ್ದಿತು. ಈ

ಸಮಯದಲ್ಲಿ ಓರಿಸದರಸಿನ ಬಗ್ಗೆ ಒಂದು ಆತ್ಮೀಯ ಭಾವವು ಜನಿಸಿದ್ದಿತು. ಜಗನ್ಮೋಹಿನಿ ಅವನ ಮನ ಸೆಳೆದುದರಿಂದ ಆಕೆಯನ್ನೇ ತನ್ನ ಭಾವೀ ಪತ್ನಿಯಾಗಿ ಸ್ವೀಕರಿಸಬೇಕೆಂದು ಬಗೆದಿದ್ದನು. ಕಾರ್ಯವೇನೋ ಸುಲಭ ಸಾಧ್ಯವಿದ್ದಿತು; ಆದರೆ ಅದರಿಂದ ವಿಜಯನಗರದ ವಿಮಲಕೀರ್ತಿಗೆ ಕುಂದುಬಾರದಂತಿರಬೇಕಿದ್ದಿತು. ಗಜಪತಿಗಿಂತ ನರಪತಿಯು ಶ್ರೇಷ್ಠನಿರುವನೆಂದು ತೋರಿಸಿಕೊಡಬೇಕಾಗಿದ್ದಿತು. ಆದುದರಿಂದಲೇ ಅವನು ಅಷ್ಟುಯೋಚನೆಗೊಳಗಾಗಿದ್ದನು ತನ್ನ ದ್ವಿತೀಯ ಪ್ರಾಣದಂತಿದ್ದ ರಾಮಲಿಂಗನುತ್ತು ಗುರುವಿನಂತಿದ್ದ ಅಪ್ಪಾಜಿ ಇವರ ಸಂಗಡ ಸಂಪೂರ್ಣವಾಗಿ ಸಮಾಲೋಚಿಸಿ ಕಾರ್ಯಕೈಕೊಳ್ಳಬೇಕಾಗಿದ್ದಿತು. ಸಂಧ್ಯಾಕಾಲದ ನಿತ್ಯನಿಯಮಗಳನ್ನು ಪೂರಯಿಸಿ ಅದೇ ಒಂದು ಕುಳಿತು, ಮಂತ್ರಿ-ಸೇನಾಪತಿಗಳ ಬರವನ್ನೇ ಕಾಯುತ್ತಲಿದ್ದನು

ಅಲ್ಪಾವಕಾಶದಲ್ಲಿಯೇ ಅಪ್ಪಾಜಿ-ರಾಮಲಿಂಗರು ಪ್ರವೇಶಿಸಿದರು. ಕೂಡಲೆ ಮುಂದಿನ ಕಾರ್ಯಕ್ರಮದ ಚರ್ಚೆಗಾರಂಭವಾಯಿತು.

ನರಪತಿ:—ಅಪ್ಪಾಜಿಯವರೇ, ನನ್ನ ಸೂಚನೆಗಳ ಬಗ್ಗೆ ನೀವು ವಿಚಾರ ಮಾಡಿದಿರಾ?

ಅಪ್ಪಾಜಿ:—ಅಹುದು ಮಹಾಪ್ರಭು. ದಿವಸವೆಲ್ಲ ನಾನು ಯೋಚಿಸಿದುದಲ್ಲದೆ ಸೇನಾಪತಿಗಳ ಸಂಗಡಲೂ ಚರ್ಚೆ ಮಾಡಿರುತ್ತೇನೆ.

ರಾಮಲಿಂಗ:—ದೊರೆಗಳೇ, ಮಂತ್ರಿಗಳೂ ನಾನೂ ಬಹಳವಾಗಿ ಚರ್ಚಿಸಿದೆವು.

ನರಪತಿ.—ಹಾಗಾದರೆ ಯಾವ ನಿರ್ಧರಕ್ಕೆ ತಲುಪಿರುವಿರಿ?

ಅ.—ಗಜಪತಿಯು ನಿಶ್ಚಿತ ಕಾರ್ಯಕ್ರಮವನ್ನರಿಯದೆ ನಮಗೆ ಯಾವ ವಿಧವಾಗಿಯೂ ಮುಂದೊರೆಯಲು ಮಾರ್ಗವಿಲ್ಲಲ್ಲವೇ ಸೇನಾಪತಿಗಳೆ?

ರಾಮಲಿಂಗ.—ಅಹುದು. ದೊರೆಗಳೇ, ನಮ್ಮ ಯಾವ ವಿಚಾರವೂ ಸದ್ಯಕ್ಕೆ ನಾಟುವಂತಿಲ್ಲ. ನಾವೇನೋ ಹಲವು ವಿಧವಾಗಿ ಹೊಳವು ಹಾಕಿದೆವು; ಆದರೆ ಅದಕ್ಕೆ ವಿಘ್ನಗಳೂ ಬಹಳವಾಗಿ ತೋರಿದುವು. ಯಾವದೊಂದು ರೀತಿಯಿಂದ ಗಜಪತಿಯು ಕಾರ್ಯಕ್ರಮವನ್ನರಿಯುವುದೇ ನಮ್ಮ ಮುಖ್ಯ ಉದ್ಯೋಗವೆಂದು ನಾವು ನಿರ್ಧರಿಸಿ ಬಿಟ್ಟಿರುವೆವು. ದೊರೆಗಳಗೆ ಹೇಗೆ ತೋರುತ್ತದೊ?

ನರಪತಿ:—ಸೇನಾಪತಿಗಳೇ, ನಿಮ್ಮ ಸಲಹೆ ಯೋಗ್ಯವಾದುದೇನೋ ಸರಿಯೆ; ಆದರೆ ಅದರಲ್ಲಿ ತೊಂದರೆಗಳೂ ಅನೇಕವಾಗಿವೆಯೆಂಬದನ್ನು ಮರೆಯುವಂತಿಲ್ಲ. ಏಕೆ ಅಪ್ಪಾಜಿಯವರೆ?

ಅಪ್ಪಾಜಿ -ಅಹುದು. ತೊಂದರೆಗಳೆಂದರೇನು? ತೊಂದರೆಯೇ ಅದಾಗಿದೆ.

ನರಪತಿ·—ಗಜಪತಿಯ ಬಲವೆಷ್ಟೆಂಬ ಬಗ್ಗೆ ಏನಾದರೂ ತಿಳಿದಿದೆಯೆ?

ಅಪ್ಪಾಜಿ —ಅದನ್ನರಿಯುವದು ನಮಗೆ ಅಸಾಧ್ಯವೇ ಆಗಿದೆ; ಆದರೂ ಪ್ರಬಲವಾದ ಆದಾವುದೋ ಒಂದು ಸಹಾಯ ಅವನಿಗಿರುವಂತೆ ತೋರುತ್ತವೆ. ಇಲ್ಲವಾದರೆ ಈ ವೊದಲೇ ಅವನು ಸಂಧಿಗೆ ಬರಲೇ ಬೇಕಾಗಿದ್ದಿತು.

ರಾ ಇನ್ನಾರಾದರೂ ಮಹಮ್ಮದೀಯರ ಸಹಾಯ ಸಿಕ್ಕುತ್ತಿರಬಹುದೆ?

ಅಪ್ಪಾಜಿ -- ಸೇನಾಪತಿಗಳೇ, ಈಗ ಮುಹಮ್ಮದೀಯ ಸುಲ್ತಾನರಾರೂ ನಮ್ಮ ಕೂಡ ಯುದ್ಧಕ್ಕೆ ಪ್ರವೃತ್ತರಾಗಲಾರರು

ರಾಮಲಿಂಗ. —ಅದೇಕೆ?

ಅಪ್ಪಾಜಿ. - ಬೀದರ, ಗೋವಳಕೊಂಡ ಮುಂತಾದವರೆಲ್ಲರೂ ನಮ್ಮ ಕೈನೋಡಿಯೇ ಇರುತ್ತಾರೆ. ಇನ್ನುಳಿದ ಒಬ್ಬಿಬ್ಬರಾದರೂ ಈಗ ಕನ್ನಡಿಗರ ಎದುರು ಕತ್ತಿಯೆತ್ತಲಾರರು.

ನರಪತಿ. —ಮಂತ್ರಿಗಳೇ, ನೀವು ಹೇಳುವ ವಿಚಾರ ದಿಟವಾದುದಿದೆ; ಹಾಗಿದ್ದರೆ ಗಜಪತಿಯ ಬಲವು ಇನ್ನೂ ಏತರಲ್ಲಿರಬಹುದು?

ಅಪ್ಪಾಜಿ:—ಅದನ್ನರಿಯುವುದೇ ನಮ್ಮ ಮುಖ್ಯ ಕರ್ತವ್ಯವಾಗಿದೆ.

ನರಪತಿ:--ಯಾವದೊಂದು ಉಪಾಯದಿಂದ ಯುದ್ಧವು ಸಂಭವಿಸದಂತೆ ನೋಡಿಕೊಳ್ಳುವುದು ಒಳಿತಲ್ಲವೇ ಸೇನಾಪತಿಗಳೇ?

ರಾಮಲಿಂಗ:—ಚತುರೋಪಾಯಗಳಲ್ಲಿ ಮುನ್ನಿನ ಮೂರು ವೊದಲು ಯೋಚಿಸತಕ್ಕುದು. ಅವು ನಾಟದಾದರೆ ಮಾತ್ರ ನಾಲ್ಕನೆಯದಾದ ದಂಡಕ್ಕೆ ಕೈಹಾಕಬೇಕಲ್ಲವೆ?

ಅಪ್ಪಾಜಿ —ಸಖ್ಯವನ್ನಾದರೂ ಬೆಳೆಯಿಸುವುದು ಯೋಗ್ಯವೆಂದೇ ನನ್ನ ವಿಚಾರವಿದೆ.

ನರಪತಿ:—ಸಖ್ಯಕ್ಕಾರು ಬೇಡೆವೆನ್ನುವರು? ಆದರೆ ಗಜಪತಿ ತಾನೇ ತನ್ನ ಮೂರ್ಖತನದಿಂದ ಯುದ್ಧದ ಪ್ರಸಂಗವನ್ನು ತಂದೊಡ್ಡಿದನು.

ಅಪ್ಪಾಜಿ·—ಜಗನ್ಮೋಹಿನೀದೇವಿಯವರ ವಿಷಯಕ್ಕೆ ದೊರೆಗಳ ಅಭಿಪ್ರಾಯವೇನು?

ನರಪತಿ: — ಮಂತ್ರಿಗಳೇ, ರಾಜಕೀಯ ವಿಷಯ ವೊದಲು ಯಾವದೊಂದರ ಇತ್ಯರ್ಥವಾದ ನಂತರವೇ ನಾವೀ ವಿಷಯವನ್ನು ಯೋಚಿಸುವದು.

ಅಪ್ಪಾಜಿ -ಆವುದೊಂದು ವಿಷಯದ ಯೋಜನೆ ಮಾಡುವಾಗ್ಗೆ ನಾವು ಸಾಧಕ ಬಾಧಕ ಪ್ರಮಾಣಗಳಿಂದ ಯೋಚಿಸಬೇಕಾಗುವುದು; ಆದುದರಿಂದ

ಆ ಬಗ್ಗೆ ದೊರೆಗಳ ವಿಚಾರ ತಿಳಿದರೆ, ನಮ್ಮ ಉಪಾಯಗಳಲ್ಲಿ ಮಾರ್ಪಾಟು ಮಾಡಬಹುದು.

ನರಪತಿ:—ಛೆ! ಆ ಬಗ್ಗೆ ನಾನೀಗ ಏನೂ ಹೇಳಲಾರೆನು ವಿಜಯ ನಗರದ ಘನತೆಗೆ ಕಿಂಚಿತ್ತಾದರೂ ಕುಂದು ಬಾರದಂತಹ ಸಂಧಿ-ಯುದ್ಧ ಗಳೇನು ಆಗುವವಿವೆಯೋ ಆಗಲಿ ಯುದ್ಧ ಮಾಡುವ ಸಮಯ ಬಂದರೆ ವಿಜಯನಗರದ ವೀರ ಕನ್ನಡಿಗರು ಸಿದ್ಧರೇ ಇರುವರು. ಏಕೆ ಸೇನಾಪತಿಗಳೇ?

ರಾಮಲಿಂಗ:—ಅದಕ್ಕೇನು ದೊರೆಗಳೇ? ಯುದ್ಧವೇ ತಮ್ಮ ಧರ್ಮ ವಾಗುಳ್ಳ ವೀರವರರು ಯುದ್ಧಕ್ಕೆಂದರೆ ಉತ್ಸಾಹಭರಿತರಾಗಿ ಎದ್ದು ನಿಲ್ಲು ತ್ತಾರೆ. ಅಂತಹ ವೀರವರರು ನಮ್ಮ ಸೈನ್ಯದಲ್ಲಿ ತುಂಬಾ ಇರುವರು ಆ ಬಗ್ಗೆ ಅನ್ಯಥಾ ಆಲೋಚನೆಗೆ ಅವಕಾಶವು ಅಲ್ಪವೂ ಇಲ್ಲ.

ನರಪತಿ:—ಸಂಧಿಯಾಗಬೇಕಾದರೂ ಕನ್ನಡಿಗರ ಶುಭ್ರವಾದ ಕೀರ್ತಿ ಗೆ ಕಿಂಚಿತ್ತಾದರೂ ಕಲಂಕ ತಗಲಕೂಡದು. ವಿಜಯನಗರದ ಘನತೆಗೆ ಸಹಾಯವಾಗುವಂತಹ ಯಾವದೊಂದರ ಇತ್ಯರ್ಥವಾದ ಮೇಲೆಯೇ ಉಳಿದ ಸಂಗತಿಗಳ ವಿಚಾರವು.

ರಾಯನ ಮಾತು ಕೇಳಿ ಅಪ್ಪಾಜಿಗೆ ಅತ್ಯಂತ ಆನಂದವಾಯಿತು. ನಿಜ ವಾಗಿಯೂ ರಾಯನ ಮನದಲ್ಲಿ ಜಗನ್ಮೋಹಿನಿಯ ಸೌಂದರ್ಯ ಆಳವಾಗಿ ನೆಟ್ಟಿದ್ದಿತು. ಆಕೆಯನ್ನು ಹೊಂದಬೇಕೆಂಬ ಪ್ರಬಲವಾದ ಇಚ್ಛೆ ಈತನಲ್ಲುಂ ಟಾಗಿದ್ದಿತು. ರಾಯನ ಸ್ಥಳದಲ್ಲಿ ಇನ್ನಾರಾದರೂ ಇದ್ದುದಾಗಿದ್ದರೆ 'ಏನಕೇನ ಪ್ರಕಾರೇಣ' ಎಂದು ಮಾನ-ಮನ್ನಣೆಗಳನ್ನೆಲ್ಲ ನೋಡದೆ ನಿಲ್ಲುತ್ತಲಿದ್ದರು, ಆದರೆ ರಾಯನ ವಿಷಯ ಹಾಗಿರಲಿಲ್ಲ, ಆತನ ಮನಸ್ಸು ಪ್ರಬಲವಾದುದು, ವಿಚಾರಶಕ್ತಿ ಮೇಲ್ತರಗತಿಯದು, ಕರ್ತವ್ಯದಕ್ಷತೆ ಅಪಾರವಾದುದು, ಧರ್ಮ ದೃಷ್ಟಿ ಉನ್ಮುಖವಾದುದು. ಅಂತೆಯೇ ಕಾಮರಾಯನು ಎಷ್ಟೇ ಯತ್ನಿಸಿದರೂ ಆತನನ್ನು ಕರ್ತವ್ಯಪರಾಙ್ಮುಖನನ್ನಾಗಿ ಮಾಡಲು ಸಮರ್ಥನಾಗಲಿಲ್ಲ ರಾಯನನ್ನು ಉಚ್ಚಕಾರ್ಯಕ್ಷೇತ್ರದಿಂದಿಳಿಸಿ ವಿಜಯನಗರದ ಕೀರ್ತಿಧ್ವಜಕ್ಕೆ ಕಲಂಕ ತರುವ ಮನ್ಮಥನ ಪ್ರಯತ್ನವು ಅಲ್ಪವಾದರೂ ಫಲಕಾರಿಯಾಗಲಿಲ್ಲ. ರಾಯನ ಈ ಸ್ವಾರ್ಥತ್ಯಾಗದ ಸ್ವಭಾವವನ್ನು ಅಪ್ಪಾಜಿ ಅನೇಕ ಸಲ ಅರಿತಿ ದ್ದನು. ಆದರೂ ಒಂದು ಸಲ ಬೇಕೆಂದೇ ಕೇಳಿದನು ಅಲ್ಲಿಯೂ ರಾಯನ ಮೇಲ್ತರಗತಿಯ ವಿಜಯನಗರದ ಹಿತಚಿಂತನೆಯೇ ಹೊರಬೀಳಲು, ಅದರಿಂದ ಆತನಿಗೆ ಅತ್ಯಾನಂದವಾಯಿತು. ಹಾಗೆಯೇ ರಾಯನ ಅಭೇದ್ಯ ಚಿತ್ತವೃತ್ತಿ ಯನ್ನು ಭೇದಿಸಿದ ಆ ಜಗನ್ಮೋಹಿನಿಯ ದಿವ್ಯ ಸೌಂದರ್ಯಕ್ಕೆ ಕೌತುಕ

ಪಟ್ಟನು. ಕಲಿಂಗ-ಕರ್ನಾಟಕಗಳ ನಡುವೆ ಪ್ರೇಮಬಿತ್ತುವ ಸಾಧನವನ್ನೇ ಆಕೆಯನ್ನಾಗಿ ಮಾಡಿಕೊಂಡು, ಅದರಿಂದ ಎರಡೂ ರಾಷ್ಟ್ರಗಳನ್ನು ಸಖ್ಯರಜ್ಜುವಿನಿಂದ ಬಂಧಿಸಬೇಕೆಂದು ಯೋಚಿಸಿದನು. ಬಹಳ ದಿನಗಳಿಂದ ಬಂದ ವೈರ ಭಾವವನ್ನು ಸಮೂಲವಾಗಿ ನಸಿಸಿ, ನರಪತಿ-ಗಜಪತಿಗಳ ನಡುವೆ ಮೈತ್ರಿ ಬಳೆಯಿಸಲು ಉತ್ಕೃಷ್ಟ ಉಪಾಯ ದೊರೆತಿತೆಂದು ಅವನಿಗೆ ಆನಂದವಾಯಿತು.

ರಾಯನು ಜಗನ್ಮೋಹಿನಿಯ ಮನಮೋಹಕ ರೂಪು ತನ್ನ ಒಳಗಣ್ಣಿಂದ ನೋಡುತ್ತಲಿದ್ದನು ಜಗನ್ಮೋಹಿನಿ ಭರದಿಂದ ಆತನ ಹೃದಯರಂಗದಲ್ಲಿ ಕಾಲಿಕ್ಕುತ್ತಲಿದ್ದಳು. ರಾಯನು ಎಷ್ಟೇ ಆಕರ್ಷಿತನಾದರೂ ಮನವನ್ನೆಲ್ಲ ಆಕ್ರಮಿಸುತ್ತಲಿದ್ದ ಆಕೆಯನ್ನು ಅಲ್ಲಿಯೇ ತಡೆಹಿಡಿದು, ತನ್ನ ಕರ್ತವ್ಯಪ್ರೇರಣೆಯಿಂದ ಮನವನ್ನೆಚ್ಚರಿಸಿ ಕರ್ನಾಟಕ ಸಾಮ್ರಾಜ್ಯದ ಶುಭ್ರ ಕೀರ್ತಿಧ್ವಜವನ್ನು ಕಲಂಕಿತವಾಗದಂತೆ ಕಾಯ್ದುಕೊಳ್ಳುವಂತೆ ಆಜ್ಞಾಪಿಸುತ್ತಲಿದ್ದನು. 'ಮೋಹಿನಿ, ನಿನ್ನಾ ಮೋಹಕ ರೂಪಿನಿಂದ ನಾನು ತೀರಾ ಮೋಹಿತನಾಗಿರುವೆನು. ನಿನ್ನನ್ನು ಹೊಂದಬೇಕೆಂಬ ಆಕಾಂಕ್ಷೆ ಅತಿಯಾಗಿದೆ; ಆದರೆ ಅದಕ್ಕಿಂತಲೂ ಶ್ರೇಷ್ಠವಾದ ಕರ್ತವ್ಯವೊಂದು ಬೇರೆಯಿದೆ. ನಾನು ಒಬ್ಬ ಸರ್ವಸಾಮಾನ್ಯ ಮನುಷ್ಯನಂತೆ ಮನಬಂದಂತೆ ಆಚರಿಸಲು ಬರುವಂತಿಲ್ಲ. ವಿಜಯನಗರದ ನಿಷ್ಕಲಂಕ ಕೀರ್ತಿಸುಂದರಿ ನನ್ನ ರಕ್ಷಣೆಯಲ್ಲಿರುತ್ತಾಳೆ. ಕರ್ನಾಟಕ ಸಾಮ್ರಾಜ್ಯದ ಶುಭ್ರಕೀರ್ತಿಧ್ವಜ ನನ್ನ ಕರದಲ್ಲಿದೆ ಕನ್ನಡಿಗರ ಉನ್ನತ ಮನ್ನಣೆಯ ಹೊಣೆ ನನ್ನ ತಲೆಯಲ್ಲಿದೆ ವೀರ ಯತಿ ವಿದ್ಯಾರಣ್ಯರು ತಮ್ಮ ಅಪಾರ ತಪವನ್ನೆರದು ಕಟ್ಟಿದ ಈ ಕನ್ನಡ ಸಾಮ್ರಾಜ್ಯರಕ್ಷಣೆಯ ಭಾರವನ್ನು ನಾನು ಹೊತ್ತಿರುವೆನು ಆದುದರಿಂದ ನನ್ನನ್ನು ಕ್ಷಮಿಸು. ನನ್ನ ಕರ್ತವ್ಯಸಾಧನೆಗೆ ನನ್ನನ್ನು ಮೊದಲು ಬಿಡು. ಕರ್ತವ್ಯಪಾಲನೆ ಯೋಗ್ಯವಾಗಿ ಸಾಧಿಸಿದರೆ ಆ ಮೇಲೆ ಉಳಿದುದನ್ನು ನೋಡುವೆನು.' ಎಂದು ಒಂದೇಸವನೆ ಕೊರಗುತ್ತಲಿದ್ದನು.

ಹೀಗೆ ಅವರೆಲ್ಲರೂ ತಮ್ಮ ತಮ್ಮ ವಿಚಾರದಲ್ಲಿಯೇ ಕೆಲವೇಳೆ ಕುಳಿತುಕೊಂಡು ಬಿಟ್ಟರು. ಕೊಂಚ ವೇಳೆಯ ನಂತರ ಅಪ್ಪಾಜಿಯೇ ಮೌನವನ್ನು ಮುರಿದು ಮಾತಿಗೆ ಮೊದಲು ಮಾಡಿದನು:

ಅಪ್ಪಾಜಿ.—ಸೇನಾಪತಿಗಳೇ, ನಾವು ಯಾವ ವಿಧವಾಗಿ ಯತ್ನಿಸಬೇಕೆಂದು ನಿಮ್ಮ ವಿಚಾರವಿದೆ?

ರಾಮಲಿಂಗ.—ಅಪ್ಪಾಜಿಯವರೇ ನಾನೇನೋ ಸಖ್ಯವೇ ಒಳಿತೆನ್ನುವ ವಿಚಾರದವನಿರುತ್ತೇನೆ.

ನರಪತಿ:—ಸೇನಾಧೀಶರೇ, ನನಗಾದರೂ ಯುದ್ಧವೆಲ್ಲಿ ಬೇಕಿದೆ? ಆದರೆ ವಿಜಯನಗರದ ನಿರ್ಮಲ ಕೀರ್ತಿಮಂದಿರಕ್ಕೆ ಅಲ್ಪವಾದರೂ ಧಕ್ಕೆ ತಗಲುವುದು ನನಗೆಂದೂ ಸಹನವಾಗಲಿಕ್ಕಿಲ್ಲ.

ಅಪ್ಪಾಜಿ:-ಛೆ! ಮಹಾಪ್ರಭುಗಳು ಅಂತಹ ಯೋಚನೆಯನ್ನೇ ಮನಸ್ಸಿನಲ್ಲಿ ತರಕೂಡದು. ಕನ್ನಡ ಸಾಮ್ರಾಜ್ಯದ ಯಾವ ಏಕನಿಷ್ಠ ಭಕ್ತನಿಗೂ ಇಂತಹ ಕಲ್ಪನೆ ಸಹನವಾಗಲು ಶಕ್ಯವಿಲ್ಲ. ವಿಜಯನಗರದ ಗೌರವಕ್ಕೆಕುಂದು ತರುವಂತಹ ಯಾವ ಕೆಲಸಕ್ಕೂ ಕೈಹಾಕಲು ಶಕ್ಯವಿಲ್ಲ. ಏಕೆ ಸೇನಾಪತಿಗಳೇ?

ರಾಮಲಿಂಗ:—ಆ ವಿಷಯವಾಗಿ ದೊರೆಗಳು ನಿಶ್ಚಿಂತರಾಗಿರುತಕ್ಕುದು. ಭೂಮಾತೆಯನ್ನುದ್ಧರಿಸಿದ ಆದಿವರಾಹನ ಪುಣ್ಯಸ್ಮರಣೆ ತಂದೀಯುವ ವರಾಹಲಾಂಛನದಿಂದೊಪ್ಪುವ ವಿಜಯನಗರದ ವೀರ ಪತಾಕೆಯಡಿಯಲ್ಲಿ ಲಕ್ಷಾವಧಿ ವೀರವರರು ತಮ್ಮ ರುಂಡಗಳನ್ನು ಚಂಡಾಡುವ ಗಂಡುಗಲಿಗಳು, ಪ್ರಾಣವನ್ನು ತೃಣೀಕರಿಸಿ ಪೂರ್ಣ ತುಣೀರಗಳಿಂದ ರಣಭೂಮಿಯಲ್ಲಿ ರಣದೇವತೆಗೆ ಪ್ರಾಣಸಂತರ್ಪಣೆ ಮಾಡಿಸುವ ವೀರ ಮಣಿಗಳು, ನಿಪುಣರಾದ ಬಿಲ್ಲಾಳುಗಳು, ಬಲಯುತರಾದ ಖಡ್ಗಪಾಣಿಗಳು ಎಲ್ಲರೂ ಕಲೆತು, ಕನ್ನಡ ಸಾಮ್ರಾಜ್ಯದ ಮನ್ನಣೆ ಕಾಯ್ದು, ತಮ್ಮ ಹೆಸರು ಅಜರಾಮರವಾಗುವಂತೆ ಮಾಡಲು ಸಿದ್ಧರಾಗಿ ನಿಂತಿರುವರು. ಎಂತಹ ಬಲಿಷ್ಠ ವೀರಸೇನೆಯನ್ನಾದರೂ ಅಲ್ಪಾವಕಾಶದಲ್ಲಿ ಮಣಿಸಲು ಆತುರತೆಯಿಂದ ಅಪ್ಪಣೆಯ ನಿರೀಕ್ಷಣೆ ಮಾಡುತ್ತಲಿರುವರು. ಇಂತಹ ಶೂರ ಸೈನಿಕರಲ್ಲಿ ಒಬ್ಬನಾದರೂ ವಿಜಯನಗರದ ವಿಜಯದುಂದುಭಿ ಆಚಂದ್ರಾರ್ಕವಾಗಿ ಮೊಳಗುವಂತೆ ಮಾಡಲು ಹಿಂದೆ ಮುಂದೆ ನೋಡನೆಂಬದನ್ನು ನಾನು ಚನ್ನಾಗಿ ಬಲ್ಲೆ.

ನರಪತಿ—ಭಾಪು! ಭಾಪು! ವಿಜಯನಗರದ ವೀರಸೇನಾಪತಿಗಳೇ, ನಿಮ್ಮೀ ವೀರವಾಣಿಯಿಂದಲೇ ಅರಿಯ ಮರ್ಮಭೇದವಾಗುವಂತಿರಲು, ಶೂರತನದ ಕಾದಾಟಕ್ಕೆ ನಿಂತಾಗಲಂತೂ ವೈರಿಕಟಕವು ನಿರ್ನಾಮವಾಗುವಂತೆ ಮಾಡುವುದರಲ್ಲಿ ಸಂದೇಹವಿಲ್ಲ. ಇರಲಿ. ಅಪ್ಪಾಜಿಯವರೇ, ಈಗ ನೀವು ಯಾವ ದಿಶೆಯಿಂದ ಮುಂದೊರೆಯಬೇಕೆನ್ನುವಿರಿ?

ಅಪ್ಪಾಜಿ:—ಈಗಲೆ ಯಾವ ನಿರ್ಣಯವನ್ನೂ ಮಾಡಲು ಬರುವಂತಿಲ್ಲ. ನಾವು ಗಜಪತಿಯ ಸಿದ್ಧತೆಯನ್ನರಿಯುವದು ಮುಖ್ಯ ಕಾರ್ಯವಿದೆ. ಅದನ್ನು ಹೇಗಾದರೂ ತಿಳಿಯಬಹುದು; ಆದರೆ.. .... .

ನರಪತಿ:—ಆದರೆ ಏನು?

ಅಪ್ಪಾಜಿ:—ನಾವು ಯಾವ ಉದ್ದೇಶದಿಂದ ಮುಂದೊರೆಯತಕ್ಕದು?

ನರಪತಿ:—ಅಂದರೆ?

ಅಪ್ಪಾಜಿ:—ಸಖ್ಯ ಬೆಳೆಯಿಸುವ ಉದ್ದೇಶದಿಂದ ಮುಂದೆ ಸಾಗುವಂತಿದ್ದರೆ, ಯುಕ್ತಿ-ಪ್ರಯುಕ್ತಿಗಳನ್ನು ಯೋಚಿಸಿ ಅದರಿಂದ ಅವರು ಕೈಕೊಳ್ಳತಕ್ಕ ಹಂಚಿಕೆಗಳನ್ನೆಲ್ಲ ಉಪಾಯದಿಂದ ಉಪಯೋಗವಿಲ್ಲದಂತೆ ಮಾಡಿ ಸಂಧಿ ಸಾಧಿಸಬಹುದು; ಇಲ್ಲವೆ ಯುದ್ಧ ಮಾಡುವುದೇ ಆದರೆ, ಅವರ ಬಲವೆಷ್ಟು? ಅವರ ಸಹಾಯವೆಷ್ಟು? ಎಂಬ ಸಂಗತಿಗಳನ್ನರಿತು, ಅವರ ಬಲಕ್ಕೆ ತಕ್ಕಂತೆ ನಮ್ಮ ಬಲವನ್ನು ಸಿದ್ಧಗೊಳಿಸಬೇಕಾಗುತ್ತದೆ.

ನರಪತಿ:—ಅಪ್ಪಾಜಿ, ಉಚಿತರೀತಿಯಲ್ಲಿ ಸಖ್ಯ ಬೆಳೆಯುವಂತಾದರೆ ಯಾರು ಬೇಡವೆನ್ನಬಹುದು? ವಿಜಯನಗರ ಸಾಮ್ರಾಜ್ಯಕ್ಕೆ ಕಲಿಂಗರಾಜ್ಯವು ಮಾರಕವಾಗದೆ ಪೂರಕವಾಗವುದಾದರೆ, ನಾನು ಸಂಧಿಗೆ ಒಂಟೆಗಾಲಿನ ಮೇಲೆ ಸಿದ್ಧನಿರುವೆನು ನಮಗೇನು ಕಲಿಂಗರಾಜ್ಯವನ್ನು ನಮ್ಮ ಸಾಮ್ರಾಜ್ಯಕ್ಕೆ ಜೋಡಿಸಬೇಕಾಗಿಲ್ಲ. ಇಲ್ಲಿಯ ಸಿರಿ-ಸಂಪತ್ತು ಸುಲಿದೊಯ್ಯಬೇಕಿಲ್ಲ. ಇಲ್ಲಿಯ ಜನತೆಯನ್ನು ಪೀಡಿಸಬೇಕಿಲ್ಲ. ಕಲಿಂಗರೂ ಕನ್ನಡಿಗರೂ ಒಬ್ಬ ಭಾರತಮಾತೆಯ ಪುತ್ರರು ಒಂದೇ ಹಿಂದೂಧರ್ಮಛತ್ರದಲ್ಲಿ ಬೆಳೆಯುವವರು ಧರ್ಮ ಬಂಧುಗಳು. ದೇಶ ಬಂಧುಗಳು ಇಂತಹರು ತಮ್ಮ ತಮ್ಮೊಳಗೆ ಬಡಿದಾಡುವುದು ಯೋಗ್ಯವೆಂದರೆ ಯಾರು ಸಮ್ಮತಿಸುವರು? ನಮ್ಮ ನಮ್ಮೊಳಗಿನ ಈ ಕಲಹದ ಮೂಲಕವೇ ಭಾರತದೇಶವು ಪರಕೀಯರ ವಶವಾಗುತ್ತಲಿದೆ ಪರಕೀಯರ ದಾಳಿಗೆ ಆಶ್ರಯಸ್ಥಾನವಾಗಿದೆ. ಇಂತಹದರಲ್ಲಿ ನಮ್ಮ ನಮ್ಮೊಳಗೆ ಬಡಿದಾಡಿ ಒಬ್ಬರೊಬ್ಬರ ಪ್ರಾಣಹರಣಕ್ಕೆ ಯತ್ನಿಸುವುದು ನಮ್ಮ ದೇಶದ ಸ್ಥಿತಿಗತಿಗಳಿಗೆ ತೀರ ಅನರ್ಥಕರವೆಂಬ ಸಂಗತಿಯನ್ನು ನಾವು ಮರೆತಿಲ್ಲ ಆದುದರಿಂದ ಒಂದಿಲ್ಲೊಂದು ಉಪಾಯದಿಂದ ಸಂಧಿ ಸಾಧಿಸುವುದಿದ್ದರೆ, ಕಲಿಂಗ-ಕನ್ನಡರಾಜ್ಯಗಳಲ್ಲಿ ಸಖ್ಯ ಬೆಳೆಯಿಸುವಂತಿದ್ದರೆ ಅದಕ್ಕೆ ನನ್ನ ಆಕ್ಷೇಪಣೆಯೇನೂ ಇಲ್ಲ.

ಹೀಗೆ ಚರ್ಚೆ ಕೊನೆಗಾಣುವ ಸಮಯಕ್ಕೆ ಒಂದೂವರೆ ಪ್ರಹರ ರಾತ್ರಿಯಾಯಿತು. ಮೂವರೂ ಮಲಗಲೆದ್ದರು. ಮೂವರ ಮನದಲ್ಲಿಯೂ ಬೇರೆ ಬೇರೆ ಯೋಚನೆಗಳು ಮನೆಮಾಡಿದ್ದುವು. ನವತರುಣರಾದ ಅರಸು-ಸೇನಾನಿಗಳ ಮನಗಳನ್ನು ಸುಂದರಿಯರೀರ್ವರೂ ಸಂಪೂರ್ಣವಾಗಿ ಸೆಳೆದಿದ್ದರು. ಜಗನ್ಮೋಹಿನಿಯ ವಿಷಯವಾಗಿ ಅರಸು ಯೋಚನೆಗೊಳಗಾಗಿದ್ದರೆ, ಶಶಿಲೇಖೆ ರಾಮಲಿಂಗನನ್ನು ಬಹಳ ವಿಚಾರಕ್ಕೀಡುಮಾಡಿದ್ದಳು. ಕಾರ್ಯ

ವಶನಾಗಿರುವಾಗ್ಗೆ ಆತನಿಗೆ ಅಷ್ಟು ತೊಂದರೆಯಾಗುತ್ತಿರಲಿಲ್ಲ; ಆದರೆ ಒಬ್ಬನೇ ಹಾಸಿನ ಮೇಲೆ ಮಲಗುತ್ತಲೆ ನಗುಮುಖದಿಂದೊಪ್ಪುವ ಆ ದಿವ್ಯ ಸುಂದರಿಯ ಧ್ಯಾನದಿಂದ ಆತನಿಗೆ ನಿದ್ರೆಯೇ ಬರುತ್ತಿರಲಿಲ್ಲ. ಹಾಸಿನಲ್ಲಿ ಹೊರಳುತ್ತಲೆ ಇರುಳು ಕಳೆಯುವ ಸಮಯವೂ ಅವನಿಗೆ ಅನೇಕ ಸಲ ಬರುತ್ತಲಿದ್ದಿತು. ಅಂದು ಅವನು ತನ್ನ ಹಾಸು ಸ್ವೀಕರಿಸುತ್ತಲೆ ಯೋಚನೆಗಾರಂಭವಾಯಿತು. ಅನೇಕ ವಿಷಯಗಳ ವಿಷಯಕವಾದ ಭಿನ್ನ ಭಿನ್ನ ವಿಚಾರಗಳು ಅವನ ಮನದಲ್ಲುದಿಸಿದುವು ಆದರಲ್ಲಿಯೂ ಅಂದು ಭಾರತೀಯರು ತಮ್ಮ ತಮ್ಮೊಳಗೆ ಬಡಿದಾಡಿ, ಭಾರತಾಂಬೆಯನ್ನು ದುರ್ದೆಸೆಗೀಡುಮಾಡುತ್ತಲಿದ್ದ ಬಗ್ಗೆ ರಾಜನು ವಿವರಿಸಿದ ಚಿತ್ರವನ್ನು ನೋಡಿ ಅವನಿಗೆ ಅತೀವ ದುಃಖವಾಯಿತು ಕಲಿಂಗ ಬಂಧುಗಳ ಮೇಲೆ ಹೇಗೆ ಕೈಯೆತ್ತುವುದು? ಅವರ ಪ್ರಾಣಘಾತಕ್ಕೆ ಹೇಗೆ ಉದ್ಯುಕ್ತನಾಗಬೇಕೆಂಬ ವಿಷಾದವು ಅವನ ಮನದಲ್ಲಾವರಿಸಿಕೊಂಡಿತು. ಅದು ವರೆಗೆ ಅವನು ರಾಜಕೀಯ ಪ್ರಶ್ನೆಯ ವಿಷಯವಾಗಿ ಆಳವಾಗಿ ಎಂದೂ ವಿಚಾರಿಸಿರಲಿಲ್ಲ. ತನ್ನ ಕಾರ್ಯವೆಂದರೆ, ಯುಕ್ತಿ-ಪ್ರಯುಕ್ತಿಗಳಿಂದ ವೈರಿಸೇನೆಯನ್ನು ನಶಮಾಡಿ ತಮ್ಮ ವಿಜಯ ಸಂಪಾದಿಸುವುದು ತರುಣನೇ ಆದರೂ ಅಷ್ಟು ಅವಧಿಯಲ್ಲಿ ಅವನು ಬಹಳ ಚಾತುರ್ಯ ತೋರಿಸಿದ್ದನು. ತನ್ನ ಅಸದಳ ಭುಜಬಲವನ್ನೂ, ಯುದ್ಧ ಕೌಶಲ್ಯವನ್ನೂ ಪ್ರದರ್ಶಿಸಿದ್ದನು ಅಂತೆಯೇ ಅಪ್ಪಾಜಿಯಂತಹ 'ಸಾಮ್ರಾಜ್ಯ ದುರಂಧರ' ಮಂತ್ರಿ ಕೂಡ ಸಕಲ ಕನ್ನಡ ಸಾಮ್ರಾಜ್ಯಕ್ಕೇ ಅವನನ್ನು ಸೇನಾಧೀಶನಾಗಿ ನಿಯಮಿಸಿದ್ದನು. ಸಾಮ್ರಾಜ್ಯದ ಅತ್ಯಂತ ಹೊಣೆಗಾರಿಕೆಯನ್ನವನಿಗ ಒಪ್ಪಿಸಿದ್ದನು. ರಾಮಲಿಂಗನಾದರೂ ತನ್ನ ಹೊಣೆಗಾರಿಕೆಯನ್ನು ಅತ್ಯಂತ ಯಶಸ್ವಿಯಾಗಿ ಪಾರುಗಾಣಿಸುತ್ತಲಿದ್ದನು. ದಿನೆ ದಿನೆ ವಿಜಯನಗರಸಾಮ್ರಾಜ್ಯದ ಕೀರ್ತಿ ದಿಗಂತರಗಳಿಗೆ ಹರಡುವಂತೆ ಮಾಡುತ್ತಲಿದ್ದನು, ಆದರ ಅಂದು ಅವನ ಮನದಲ್ಲಿ ವಿಷಾದ ಮನೆಮಾಡಿತು. ಒಂದೇ ದೇಶದಲ್ಲಿ ಜನಿಸಿ, ಓರ್ವಳೇ ಜನನಿಯಿಂದ ಪಾಲನೆ-ಪೋಷಣೆ ಹೊಂದಿದ ಬಂಧುಗಳೀರ್ವರೂ ತಮ್ಮ ಬಾಂಧವ್ಯ, ಪ್ರೇಮಗಳನ್ನೆಲ್ಲ ತೊರೆದು, ವೈರಭಾವ ತಳೆದು ಕಾಳಗಕ್ಕೇಕೆ ಉದ್ಯುಕ್ತರಾಗಬೇಕೆಂಬದೇ ಅವನಿಗೆ ತಿಳಿಯದಾಯಿತು. ಬಹಳ ವೇಳೆ ವಿಚಾರಿಸಿದನು. ಅತ್ತಿತ್ತ ಉರುಳಾಡಿದನು. ಏನಾದರೂ ಮನಸ್ಸು ಶಾಂತವಾಗಲಿಲ್ಲ. ಆಗಲೇ ಎರಡೂವರೆ ಪ್ರಹರ ರಾತ್ರಿ ಕಳೆದು ಹೋಗಿದ್ದಿತು. ಹಾಸಿನಲ್ಲಿ ಹೊರಳಿ ಬೇಸತ್ತು ಕೊಂಚ ಬಯಲಿಗೆ ಬರಬೇಕೆಂದು ಹೊರಬಿದ್ದನು. ಕೃಷ್ಣಪಕ್ಷದ ಕಾಲವಾದುದರಿಂದ ಎಲ್ಲೆಡೆಯಲ್ಲೂ ಕತ್ತಲೆಯಾವರಿಸಿಕೊಂಡಿದ್ದಿತು. ಹೊರಗಿನ

ತಂಪು ಹವೆಯಲ್ಲಿ ಪ್ರವೇಶಮಾಡುತ್ತಲೆ ಅವನಿಗೆ ಬಹುಮಟ್ಟಿಗೆ ಉತ್ಸಾಹ ವೆನಿಸಿತು ಅವನು ಅಲ್ಲಿಯೇ ಇದ್ದ ಒಂದು ಬಂಡೆಗಲ್ಲಿನ ಮೇಲೆ ಕುಳಿತು ಕೊಂಡನು ಭಾರತದ ದುರ್ದೆಶೆಯೇ ಅವನ ಮನದ ಖಿನ್ನತೆಗೆ ಮುಖ್ಯ ಕಾರಣವಾಗಿದ್ದಿತು ಭಾರತದ ಈ ಕೀಳ್ದೆಶೆ ಎಂದು ನಿವಾರಿಸಲ್ಪಡುವುದು? ಅಂತಹ ಮಹಾತ್ಮನಾರು? ಎಂಬ ವಿಚಾರ ಅವನ ತಲೆಯಲ್ಲಿ ತಿರುಗಹತ್ತಿತು. 'ವಿಜಯನಗರ ಸ್ಥಾಪಕರಾದ ವೀರಯತಿ ವಿದ್ಯಾರಣ್ಯರಿಗೆ ಆ ಕಾರ್ಯ ಅಶಕ್ಯ ವಾಗಿದ್ದಿತೆ? ಹೊನ್ನಿನ ಮಳೆ ಸುರಿಸಿದ ಅವರಿಗೆ ಭಾರತೀಯರಲ್ಲಿ ಒಕ್ಕಟ್ಟು ಬೆಳೆಯಿಸುವುದು ಸಾಧ್ಯವಾಗಲಿಲ್ಲವೆ? ಪರಮಾತ್ಮನ ಸ್ವರೂಪರಾದ ಅವರು ಸರ್ವಶಕ್ತರಿದ್ದು, ಈ ಕಾರ್ಯವನ್ನೇಕೆ ಕೈಗೂಡಿಸಲಿಲ್ಲ?'' ಮುಂತಾಗಿ ಪ್ರಶ್ನೆ ಮಾಲಿಕೆಯಲ್ಲಿ ಮುಳುಗಿರುವಾಗಲೇ ಅಂತಹ ಕಗ್ಗತ್ತಲೆಯಲ್ಲಿಯೂ ದಿವ್ಯ ಜ್ಯೋತಿಯೊಂದು ಹೊಳೆದಂತಾಯಿತು ಅವನು ಕಣ್ತೆರೆದು ನೋಡುತ್ತಾನೆ, ಎದುರಿನಲ್ಲ ಪೂಜ್ಯ ಗುರುಗಳಾದ ವಿದ್ಯಾರಣ್ಯ ಯತಿಗಳು ತಮ್ಮ ದೈವೀ ತೇಜಸ್ಸಿನಿಂದ ಪ್ರಕಾಶಿಸುತ್ತ ನಿಂತಿದ್ದರು ರಾಮಲಿಂಗನಿಗೆ ತಾನಿದ್ದ ಸ್ಥಳ-ಕಾಲಗಳ ಸ್ಮರಣೆಯೇ ಉಳಿಯಲಿಲ್ಲ ಗುರುಗಳಿಗೆ ವಂದಿಸಬೇಕೆನ್ನುವ ಎಚ್ಚರ ಕೂಡ ಆತನಿಗುಳಿಯಲಿಲ್ಲ ಅವನು ನೆಟ್ಟ ನೋಟದಿಂದ ಆ ಮಹಾ ಮೂರ್ತಿಯನ್ನವಲೋಕಿಸುತ್ತಲ ಕುಳಿತನು 'ರಾಮಲಿಂಗ, ಅಲ್ಲದ-ಸಲ್ಲದ ಯೋಚನೆಗಳ ಬಗ್ಗೆ ವಿಚಾರಿಸುವುದು ನಿನ್ನ ಕೆಲಸವೂ ಅಲ್ಲ; ನನ್ನ ಕೆಲ ಸವೂ ಅಲ್ಲ ಕಾಲಚಕ್ರ ಉರುಳಿದಂತೆ ಪರಿವರ್ತನೆಗಳಾಗಲೇಬೇಕು. ಅನೇ ಕರು ಅನೇಕ ಮಹಾಕಾರ್ಯಗಳನ್ನು ತಮ್ಮ ಕರ್ತೃತ್ವ ಶಕ್ತಿಯಿಂದಲೇ ಮಾಡಿದರೆಂಬದು ಮೂರ್ಖತನವು ಕಾಲಕ್ಕನುಸಾರವಾಗಿ ಆ ಆ ಕಾರ್ಯಗಳು ಸಂಭವಿಸುವ ಸಮಯ ಪ್ರಾಪ್ತವಾಗಿದ್ದಿತು ತದನುಸಾರವಾಗಿ ಅವುಗಳ ಸಾಧನರೂಪಿಯಾಗಲೂ ಆ ಆ ಜನರ ಜನ್ಮವೂ ಆಗಿದ್ದಿತು, ಹಾಗು ಆ ಕಾರ್ಯ ಗಳು ಸಂಭವಿಸಿಯೂ ಹೋದುವು. ಕಾಲಚಕ್ರವಾವಾಗಲೂ ಉರುಳುತ್ತಲೇ ಇರುತ್ತದೆ. ಇಂದು ಐಕ್ಯವಿಲ್ಲದೆ ಹಾಳಾಗುತ್ತಲಿದ್ದ ಭಾರತವು ಮುಂದೆ ಐಕ್ಯದ ಮಾದರಿಯಾಗಿ ಪರಿಣಮಿಸುವುದು. ನೀನಾದರೂ ನಿನ್ನ ಕರ್ತವ್ಯ ಕೈ-ಕೊಂಡು ಮುಂದೊರೆಯಲು ಏಳು' ಎಂದು ಹೇಳಿ ಮರೆಯಾದರು.

ರಾಮಲಿಂಗ ಗಡಬಡಿಸಿಕೊಂಡೆದ್ದನು. ಕೋಲ್ಮಿಂಚು ಹೊಳೆದು ಮರೆ ಯಾದಂತಾಯಿತು. ಗುರುಗಳ ವಚನಗಳು ಗಂಟೆಯ ನಾದದಂತೆ ಅವನ ಕಿವಿಯಲ್ಲಿ ತುಂಬಿದ್ದುವು ಅವರಾ ದಿವ್ಯರೂಪು ಹೃದಯದಲ್ಲಿ ಕೊರೆದು ಹೋಗಿ ದ್ದಿತು. ಆದರೂ ಹೊರಗೆ ಕಣ್ಣಿಗೆ ಕಾಣುತ್ತಲಿದ್ದ ಗುರುಗಳು ಮರೆಯಾ

ಗಲು, ಅವಸರದಿಂದೆದ್ದು ಅತ್ತಿತ್ತ ಶೋಧಿಸತೊಡಗಿದನು ಕತ್ತಲೆಯಲ್ಲಿ ಭೂತ ಗಳೋಪಾದಿಯಲ್ಲಿ ನಿಂತ ಗಿಡಗಂಟೆಗಳ ಹೊರತು ಇನ್ನೇನೂ ಕಾಣಲಿಲ್ಲ. ಅವನು ನಿರಾಶನಾಗಿ ತನ್ನ ಶಿಬಿರಕ್ಕೆ ಮರಳಬೇಕೆನ್ನುವಷ್ಟರಲ್ಲಿ ಏನೋ ಸಪ್ಪಳ ಕೇಳಬಂದಿತು. ಒಡನೆಯೇ ರಾಮಲಿಂಗನು ಅಲ್ಲಿಯೇ ನಿಂತು ಶೋಧಕ ದೃಷ್ಟಿಯಿಂದ ಸುತ್ತಲೂ ನೋಡತೊಡಗಿದನು ಒಂದೆಡೆ ಕೃಷ್ಣ ವರ್ಣದ ಆಕೃತಿಯೊಂದು ಬಹು ಮೆಲ್ಲನೆ ಚಲಿಸುತ್ತಿದ್ದಂತೆ ಭಾಸವಾಯಿತು. ಅವನು ಹೆಚ್ಚು ಸೂಕ್ಷ್ಮವಾಗಿ ನಿರೀಕ್ಷಿಸಲು, ಅವನಿಗೆ ಭಾಸವಾದಂತೆ ಕಂಡು ಬಂದುದು ಸತ್ಯ ವಸ್ತುವೇ ಇರಬೇಕೆಂದು ಮನವರಿಕೆಯಾಯಿತು ಕನ್ನಡದರ ಸಿನ ವಾಸಸ್ಥಳದಲ್ಲಿ ಹಾಗೆ ಗುಪ್ತವಾಗಿ ತಿರುಗುವವರಾರಿರಬೇಕೆಂದು ಕೊಂಚ ಯೋಚನೆಗೊಳಗಾದನು. ಏನಾದರೂ ಘಾತುಕ ಪ್ರಸಂಗವಿದ್ದರೂ ಇರಬಹು ದೆಂದು ಬಗೆದು, ಆ ವ್ಯಕ್ತಿ ಮುಂದೆ ಸಾಗಿದಂತೆ ಮೆಲ್ಲಗೆ ಹಿಂಬಾಲಿಸಿದನು.

ಆ ಕೃಷ್ಣವಸ್ತ್ರಾಚ್ಛಾದಿತ ವ್ಯಕ್ತಿ ಬಹು ಮೆಲ್ಲನೆ ಶ್ರೀಕೃಷ್ಣದೇವರಾಯನ ಶಿಬಿರದತ್ತವೇ ಹೊರಟಿದ್ದಿತು. ಅದನ್ನು ನೋಡಿಯಂತೂ ರಾಮಲಿಂಗನ ಸಂದೇಹ ದೃಢವಾಯಿತು ಅಂತಹ ಸಮಯಕ್ಕೆ ತಾನು ಹೊರಬಂದುದಕ್ಕಾಗಿ ತನ್ನನ್ನು ತಾನೇ ಹೊಗಳಿಕೊಂಡನು ಗುರುಗಳು 'ಕರ್ತವ್ಯ ಕೈಕೊಳ್ಳಲು ಮುಂದಾಗು' ಎಂದು ಎಚ್ಚರಿಸಿದ ಕರ್ತವ್ಯವು ಇದೇ ಇರಬೇಕೆಂದು ಅವನು ಮನದಂದು, ವಿಜಯನಗರ ಸಾಮ್ರಾಜ್ಯದ ಸಲುವಾಗಿ, ಕನ್ನಡದರಸಿನ ಸಲು ವಾಗಿ, ಕರ್ನಾಟಕದ ಮೇಲ್ಮೆಗಾಗಿ ಗುರುಗಳು ಸರ್ವಕಾಲದಲ್ಲಿ ದಕ್ಷರಾಗಿದ್ದು ದನ್ನು ನೋಡಿ ಅವನಿಗೆ ರೋಮಾಂಚವುದಿಸಿತು. ತನ್ನನ್ನು ಹಾಗೆ ಎಚ್ಚರಿ ಸಿದುದಕ್ಕೆಂದು ಅವನು ಬಹಳ ಆನಂದ ಹೊಂದಿದನು. ನರಪತಿಯ ಪ್ರಾಣಾಪ ಹರಣದ ವ್ಯೂಹವೇ ಆದಾಗಿದ್ದಿತೆಂದು ಅವನು ದೃಢವಾಗಿ ನಂಬಿದನು, ಮತ್ತು ನರಪತಿಯ ಪ್ರಾಣ ಉಳಿಸುವ ಉಚ್ಚತಮ ಕರ್ತವ್ಯ ಸಾಧನೆ ತನ್ನ ಕೈಯಿಂ ದಾಗುವುದಿದ್ದ ಬಗ್ಗೆ ತನ್ನದೃಷ್ಟಕ್ಕೆ ತಾನೇ ಧನ್ಯನೆಂದುಕೊಂಡನು. ನರಪತಿಯ ಜೀವವುಳಿಸುವ ಬಗ್ಗೆ ಅತ್ಯಲ್ಪವಾದರೂ ಸಂದೇಹ ಅವನಲ್ಲಿರಲಿಲ್ಲ. ಅದರ ಮೂಲಕ ತನ್ನ ಜನ್ಮ ಸಾಫಲ್ಯವೇ ಆಗುವುದೆಂದು ಪೂರ್ಣ ನಂಬಿದನು. ತಾನು ಹಿಂದೆ ಮಾಡಿದ ಅನೇಕ ಮಹತ್ತರ ಕಾರ್ಯಗಳೆಲ್ಲಕ್ಕಿಂತಲೂ ಆ ಒಂದು ಕಾರ್ಯ ಅತ್ಯಂತ ಮಹತ್ವವಾದದ್ದೆಂದು ಭಾವಿಸಿ, ಅವನು ನರಪತಿಯ ಪ್ರಾಣಾಪಾಯ ತಪ್ಪಿಸಲು ಯುಕ್ತಿಗಳನ್ನು ಯೋಚಿಸಹತ್ತಿದನು

ಹೀಗೆ ಯೋಚನಾಪರನಾಗಿ ಮೆಲ್ಲನೆ ಕೃಷ್ಣವಸ್ತ್ರಾಚ್ಛಾದಿತ ವ್ಯಕ್ತಿ ಯನ್ನೇ ಅನುಸರಿಸಿ ಹೊರಟನು. ರಾಮಲಿಂಗನ ಊಹೆಯಂತೆ ಆ ವ್ಯಕ್ತಿ

ನರಪತಿ ಮಲಗಿದ್ದ ಶಿಬಿರದತ್ತವೇ ಹೊರಟಿತು. ರಾಮಲಿಂಗನೂ ಹಿಂಬಾಲಿಸಿದನು ಆ ವ್ಯಕ್ತಿ ಒಂದು ಗುಪ್ತಮಾರ್ಗ ತೆರೆಯಿತು. ಅದನ್ನು ನೋಡಿ ರಾಮಲಿಂಗನಿಗೆ ಅಚ್ಚರಿಯೆನಿಸಿತು ಅಲ್ಲಿ ಗುಪ್ತದ್ವಾರವಿರಬಹುದೆಂಬ ಶಂಕೆಯೂ ಅವನಿಗೆ ಬಂದಿರಲಿಲ್ಲ. ಅಂತಹದರಲ್ಲಿ ಹಾಗೆ ಗುಪ್ತದ್ವಾರ ಕಾಣಲು ಅವನಿಗೆ ಆಶ್ಚರ್ಯವಾಯಿತು. ಅಲ್ಲಿ ಚೆನ್ನಾಗಿ ಅರಿತ ವ್ಯಕ್ತಿಯೇ ಅದಿರಬೇಕೆಂದು ಅವನು ಊಹಿಸಿದನು ಬಗುಬಗೆಯಿಂದ ರಾಮಲಿಂಗನೂ ಗುಪ್ತದ್ವಾರದಿಂದ ಒಳಕ್ಕೆ ಪ್ರವೇಶಿಸಿದನು ಆ ಅಪರಿಚಿತ ವ್ಯಕ್ತಿ ಅತ್ತಿತ್ತ ನೋಡಿ ಬಹು ಮೆಲ್ಲನೆ ಅಡಿಯಿಡುತ್ತ ನರಪತಿ ಮಲಗಿದ್ದಲ್ಲಿಗೆ ಹೋಯಿತು ಪ್ರಾಣಹರಣವಾಗದೆ ನರಪತಿಯನ್ನುಳಿಸುವ ಹಂಚಿಕೆಯಲ್ಲಿ ರಾಮಲಿಂಗನು ಅವಿತು ನಿಂತನು ಅವಶ್ಯವೆನಿಸಿದಲ್ಲಿ ಒಗೆಯಲು ಕಿರುಗತ್ತಿ ಸಿದ್ಧಮಾಡಿಕೊಂಡಿದ್ದನು.

ಆ ಅಪರಿಚಿತ ವ್ಯಕ್ತಿ ನರಪತಿಯ ಹಾಸಿನ ಹತ್ತಿರ ನಿಂತು ತನ್ನ ಒಳ ಅಂಗಿಯಲ್ಲಿ ಅವಿತಿದ್ದ ಕಿರುಗತ್ತಿಯನ್ನು ಹೊರಕ್ಕೆ ತೆಗೆದು ಕೈ ಮೇಲಕ್ಕೆತ್ತಿತು. ರಾಮಲಿಂಗನು ಜಿಂಕೆಯ ಮರಿಯಂತೆ 'ಚಂಗನೆ' ಜಿಗಿದು ಬಂದವನೇ ಕಿರುಗತ್ತಿಯೆತ್ತಿದ ಕರವನ್ನೇ ಗಟ್ಟಿಯಾಗಿ ಹಿಡಿದನು. ಆಕಸ್ಮಿಕ ವಿಘ್ನವೊದಗಲು, ಆ ವ್ಯಕ್ತಿ ಗಾಬರಿಯಾಗಿ ಚಿಟ್ಟನೆ ಚೀರಿತು!

ಗಾಢನಿದ್ರೆಯಲ್ಲಿದ್ದ ನರಪತಿ ಎಚ್ಚತ್ತನು. ಎದುರಿನಲ್ಲಿ ಕರೀ ಅರಿವೆಯಲ್ಲಿದ್ದ ಒಂದು ವ್ಯಕ್ತಿ. ಕೈಯಲ್ಲಿ ಕಿರುಗತ್ತಿ. ಆ ಕೈಯನ್ನೇ ತನ್ನ ದ್ವಿತೀಯ ಪ್ರಾಣನೇ ಆಗಿದ್ದ ರಾಮಲಿಂಗನು ಗಟ್ಟಿಯಾಗಿ ಹಿಡಿದಿದ್ದಾನೆ. ಆ ವ್ಯಕ್ತಿ ಮುಂಗಾಣದೆ ಮೂಢನಂತೆ ಕೆಳಮೊಗವಾಗಿ ನಿಂತಿದ್ದನು.

ನರಪತಿ ಎದ್ದು, ಯಾರು? ರಾಮಲಿಂಗ, ಇದೇನು ಈ ಅಪರಾತ್ರಿಯಲ್ಲಿ ಕಿರುಗತ್ತಿಯನ್ನೆತ್ತಿದ ಇವರಾರು? ನೀನು ಇಲ್ಲಿಗೆ ಹೇಗೆ ಬಂದೆ?' ಎಂದನು.

ಆ ಸಮಯಕ್ಕೆ ಆ ಅಪರಿಚಿತ ವ್ಯಕ್ತಿಗೆ ಎಚ್ಚರ ಬಂದಿತು. ಅವನು ಒಮ್ಮೆಲೆ ರಾಯನ ಕಾಲಿಗೆ ಬಿದ್ದು, 'ಮಹಾರಾಜ, ಕ್ಷಮಿಸಿರಿ' ಎಂದನು.

ಕೂಡಲೆ ರಾಯನು ಅವನನ್ನು ಹಿಡಿದೆತ್ತಿ, 'ಬಂಧು, ಇದೆಂತಹ ಹೀನ ಆಚರಣೆಗೆ ಕೈಹಾಕಿರುವೆ? ನನ್ನೊಬ್ಬನ ಮರಣದಿಂದ ಕನ್ನಡ ಸಾಮ್ರಾಜ್ಯವು ಬಲಹೀನವಾಗುತ್ತಲಿದ್ದಿತೆಂದು ನೀನು ಭಾವಿಸಿದ್ದರೆ ಸಂಪೂರ್ಣ ಸಟೆಯೆಂದು ತಿಳಿದುಕೊಳ್ಳು ನನ್ನಂತಹ ಕೋಟ್ಯವಧಿ ಜನರು ವಿಜಯನಗರದ ವಿಜಯ ಧ್ವಜಕ್ಕಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧರಿರುವರು. ಆದುದರಿಂದ ನಿನ್ನ ಈ ಪ್ರಯತ್ನವು ತೀರಾ ಉಪಯೋಗವಿಲ್ಲದ್ದಿದೆ' ಎಂದನು.

'ಮಹಾರಾಜ, ದುಷ್ಟರ ಮಾತಿನಂತೆ ಇಂತಹ ಅದ್ವಿತೀಯ ಮಹಾ

ಪುರುಷರ ಕೊಲೆಗೆ ಯತ್ನಿಸಿದೆನು. ಈ ದಾಸನನ್ನು ಕ್ಷಮಿಸಬೇಕು' ಎಂದು ದೀನ ಸ್ವರದಿಂದ ಬೇಡಿಕೊಂಡನು.

ರಾಮಲಿಂಗನು ಅವನಿಗೆ ಈ ಕೊಲೆಗೆ ಉದ್ಯುಕ್ತನಾದ ಕಾರಣವನ್ನು ಕೇಳಿದನು.

ಸಿಂಹಾದ್ರಿಯ ಹಲವು ದುಷ್ಕರ ಪ್ರೇರಣೆಯಿಂದ ಬಂದಿದ್ದನೆಂದು ತಿಳಿಯಿತು. ರಾಯನು ರಾಮಲಿಂಗನಿಗೆ ಆ ಸಂಗತಿ ತಿಳಿದ ವಿಷಯವನ್ನು ವಿಚಾರಿಸಿದನು. ರಾಮಲಿಂಗನು ಎಲ್ಲ ಸಂಗತಿಯನ್ನು ಸಾದ್ಯಂತ ವಿವರಿಸಿದನು ವಿದ್ಯಾರಣ್ಯಗುರುಗಳು ಅವನನ್ನು ಕರ್ತವ್ಯಕ್ಕೆಂದು ಎಚ್ಚರಿಸುವವರೆಗಿನ ಎಲ್ಲ ಸಂಗತಿ ಕೇಳುತ್ತಲೆ ರಾಯನಿಗೆ ಬಹಳ ಆನಂದವಾಯಿತು. ಆವನು ಗದ್ಗದ ಸ್ವರದಿಂದ ಮೊಗವೆತ್ತಿ —"ಗುರುದೇವ, ನೀವು ತಪೋಬಲವನ್ನೆರೆದು ಕಟ್ಟಿದ ಈ ಕನ್ನಡ ರಾಜ್ಯವನ್ನು ಕಾಯುವ ಭಾರ ನಿಮ್ಮ ಮೇಲೆಯೇ ಇದೆ ನಾನು ನಿಮ್ಮ ಚರಣ ಸೇವಕ ಮಾತ್ರ'' ಎಂದು ಕಣ್ಮುಚ್ಚಿ ಗುರುಧ್ಯಾನದಲ್ಲಿಯೇ ಮಗ್ನನಾಗಿ ಕೆಲಹೊತ್ತು ಕುಳಿತನು

ಕೊಂಚಸಮಯ ಕಳೆಯಲು ನರಪತಿಯೆಚ್ಚತ್ತು, 'ಸೇನಾಪತಿಗಳೇ, ಈತನಿಗೆ ಯಾವ ಶಿಕ್ಷೆ ವಿಧಿಸಬೇಕೆನ್ನುವಿರಿ'' ಎಂದು ಕೇಳಿದನು.

ರಾಯನ ಮುಖಮುದ್ರೆಯಿಂದ ಅವನ ಮನವರಿತು 'ಪ್ರಭುಗಳೇ, ನಾವೇನು ಶಿಕ್ಷೆ ವಿಧಿಸಿದರೂ ಅದು ಇವನ ಮಟ್ಟಿಗೇನೇ ಆಗುತ್ತದೆ. ಇವನನ್ನು ಇಂತಹ ಕಾರ್ಯಕ್ಕಟ್ಟಿದವರಿಗೇನು ಮಾಡಬೇಕು?'' ಎಂದು ಮರಳಿ ಪ್ರಶ್ನೆ ಮಾಡಿದನು.

'ಸೇನಾಪತಿಗಳೇ, ಅದೂ ನಿಜವಿದೆ ಹಾಗಾದರೆ ನೀವೇ ನಿಮಗೆ ಬೇಕಾದ ರೀತಿಯಲ್ಲಿ ಆಚರಿಸಬಹುದು' ಎಂದನು

ರಾಮಲಿಂಗನು ಬಂದ ವ್ಯಕ್ತಿಗೆ 'ಬಂಧು, ಹೋಗು; ಇಂದು ಕರ್ನಾಟಕ ಸಿಂಹಾಸನಾಧೀಶ್ವರರು ನಿನಗೆ ಸಂಪೂರ್ಣ ಕ್ಷಮೆ ಮಾಡಿರುತ್ತಾರೆ. ನೀನು ಮಾಡಲೆತ್ನಿಸಿದುದು ಘೋರ ಅಪರಾಧವಾಗಿದೆ. ಅದಕ್ಕೆ ತಕ್ಕ ಶಿಕ್ಷೆಯೆಂದರೆ, ಕ್ಷಮೆಯೇ ಎಂದು ನಮ್ಮ ಮನವರಿಕೆಯಿದೆ. ಇದರಿಂದ ನೀನು ಮತ್ತೊ ಇಂತಹ ಅಕೃತ್ಯಕ್ಕೆ ಯತ್ನಿಸಬಹುದು ಎಂದು ಶಂಕಿಸಲು ಅವಕಾಶವೇ ಇಲ್ಲ; ಏಕೆಂದರೆ, ನಿನ್ನಂತಹ ಸಾವಿರಾರು ಜನರು ಯತ್ನಿಸಿದರೂ ಕರ್ನಾಟಕ ಸಿಂಹಾಸನವು ಅಚಲವಾಗಿದೆ; ಏಕೆಂದರೆ ಅದು ಮಾನವೀ ಶಕ್ತಿಯಿಂದ ರಕ್ಷಿತವಾಗಿರದೆ, ದೈವೀ ತೇಜದ ನೆರಳಲ್ಲಿ ಬೆಳೆಯುತ್ತಲಿದೆ. ತಮ್ಮ ಅಸದಳ ತೇಜೋರಾಶಿ ಸುರಿದು ಕಟ್ಟಿದ ವಿದ್ಯಾರಣ್ಯಯತಿವರರು ತೇಜೋರೂಪರಾಗಿ

ಎಡಬಿಡದೆ ಕಾಯುತ್ತಲಿರುವರು; ಆದುದರಿಂದ ಹೋಗು; ಮತ್ತು ನಿನ್ನ ಸಂಗಡಿಗರಿಗೆ ಗುರುದೇವರ ಅಪಾರ ಮಹಿಮೆಯರುಹಿ ಇನ್ನೆಂದೂ ಇಂತಹ ಹೀನ ಕಾರ್ಯಕ್ಕೆ ಕೈಹಾಕಬೇಡಿರೆಂದು ಎಚ್ಚರಿಸು' ಎಂದು ಅನ್ನಲು, ಬಂದ ವ್ಯಕ್ತಿಯು ದೀನಸ್ವರದಿಂದ 'ಮಹಾರಾಜ, ನಿಜವಾಗಿಯೂ ಇಂದು ನಾನು ಪುನರ್ಜನ್ಮ ಪಡೆದೆನು' ಎಂದು ನುಡಿದು, ಹೊರಬಿದ್ದು ಹೊರಟು ಹೋದನು.

ಆ ವ್ಯಕ್ತಿಯು ಹೋಗುತ್ತಲೆ ರಾಯನು ರಾಮಲಿಂಗನನ್ನಪ್ಪಿ 'ಮಿತ್ರಾ, ಇಂದು ನಿನ್ನ ಅಸದೃಶ ಪ್ರೇಮವೇ ನನ್ನನ್ನುಳುಹಿತು' ಎಂದು ನುಡಿದನು.

ರಾಮಲಿಂಗನು ಭಕ್ತಿಯಿಂದ 'ಪ್ರಭುಗಳೇ, ಈ ಸೇವಕನಿಂದ ಈ ಪಾದ ಸೇವೆ ಹೀಗೆಯೇ ಸಂಭವಿಸಲಿ, ಎಂಬದೇ ನನ್ನ ಹಾರೈಕೆ' ಎಂದು ನುಡಿದನು.

ಈ ವಾರ್ತೆ ಆಗಲೇ ಅಪ್ಪಾಜಿಗೆ ತಿಳಿಯಲು, ಅವನು ಲಗುಬಗೆಯಿಂದ ಬಂದನು.

ಅಪ್ಪಾಜಿಯನ್ನು ಕಾಣುತ್ತಲೇ ನರಪತಿಯು 'ಮಹಾಮಂತ್ರಿಗಳೇ ಇಂದು ಸೇನಾಪತಿಗಳ ಸಾವಧಾನತೆಯ ಪರಿಣಾಮವಾಗಿ ಒಂದು ಮಹಾ ಅನರ್ಥವು ತಪ್ಪಿತು.' ಎಂದನು.

'ಪ್ರಭುಗಳೇ ನಿಜವಾಗಿಯೂ ಸೇನಾಪತಿಗಳು ಧನ್ಯರು. ಇಂದು ಅವರು ಕನ್ನಡ ಸಾಮ್ರಾಜ್ಯಕ್ಕೆಸಗಿದ ಸೇವೆ ಅಪಾರವಾದುದು. ಅವರ ಹೆಸರು ಆಚಂದ್ರಾರ್ಕವಾಗುಳಿಯುವದು' ಎಂದು ಆನಂದದಿಂದ ನುಡಿದನು.

ಮುಂದೆ ಕೊಂಚಸಮಯ ಮೂವರೂ ಕೂಡಿ ಆಲೋಚಿಸಿ, ತಮ್ಮ ಬೀಡನ್ನು ಬೇರೊಂದು ಭದ್ರವಾದ ಸ್ಥಳಕ್ಕೆ ಬದಲಿಸಬೇಕೆಂದು ನಿರ್ಧರಿಸಿದರು.

---

## ೬ ಶೋಧ

ಅಂದು ರಥೋತ್ಸವದಿಂದ ಮರಳಿ ಬಂದಾಗಿನಿಂದಲೂ ಜಗನ್ಮೋಹಿನಿಗೆ ಬಹಳ ವ್ಯಥೆಯಾಗುತ್ತಲಿದ್ದಿತು ಮೇಲೆ ಮೇಲೆ ಯಾವ ಚಿಂತೆಯೂ ಇಲ್ಲದವಳಂತೆ ವ್ಯವಹರಿಸುತ್ತಲಿದ್ದಳು. ನಗುತ್ತಲಿದ್ದಳು. ಕೆಲೆಯುತ್ತಲಿದ್ದಳು. ತಂದೆ-ತಾಯಿಗಳೊಡನೆ ಹರಟುತ್ತಲಿದ್ದಳು ಗೆಳತಿಯರೊಡನೆ ಆಡುತ್ತಲಿದ್ದಳು; ಆದರೆ ಮನದಲ್ಲಿ ಮಾತ್ರ ದಾರುಣವಾದ ಚಿಂತಾನಲ ಹೊತ್ತುತ್ತಲೇ ಇದ್ದಿತು. ತನ್ನಾ ಮನೋರಮಣನ ಕಮನೀಯ ಸುಮಧುರ ರೂಪು ಅದೆಷ್ಟೋ ವೇಳೆ ಧ್ಯಾನಿಸುತ್ತ ಕೂರುವಳು. ಹಗಲು ರಾತ್ರಿ ಅದೊಂದೇ ಆಕೆಯ ಉದ್ಯಮ

ವಾಗಿದ್ದಿತು ಕನಸು-ಮನಸಿನಲ್ಲಿ ಕೃಷ್ಣರಾಯನು ಆಕೆಗೆ ಕಿಂಚಿತ್ತಾದರೂ ತಿಳಿಯದಂತೆ ಪ್ರವೇಶಿಸಿದ್ದನು. ಆಕೆಯ ಹೃದಯಸಿಂಹಾಸನದಲ್ಲಿ ವಿರಾಜಿಸಿದ್ದನು. ಅನೇಕ ಸಲ ತನ್ನ ಮನೋರಮಣನೊಡನೆ ಸರಸಸಲ್ಲಾಪವಾಡುತ್ತಲಿದ್ದಂತೆ ಕನಸು ಕಾಣುವಳು. ಎಚ್ಚರಿದು ಕನಸೆಂದು ತಿಳಿಯುತ್ತಲೇ ಕಣ್ಣೀರು ಸುರಿಸುವಳು. ಆಕೆಯನ್ನು ಸಮಾಧಾನ ಪಡಿಸುವವಳೆಂದರೆ, ಶಶಿಲೇಖೆಯು. ಇಬ್ಬರೂ ಸಮದುಃಖಿಗಳು. ಒಬ್ಬರನ್ನೊಬ್ಬರು ಸಾಂತ್ವಯಿಸದಿದ್ದರೆ ಗತ್ಯಂತರವೇ ಇರಲಿಲ್ಲ ಅದರಲ್ಲಿ ಶಶಿಲೇಖೆ ಬಹಳ ಶಾಂತಸ್ವಭಾವದವಳು. ಚತುರೆಯು ಬಾಣಪುತ್ರಿ ಉಷೆಯಂತೆ ಜಗನ್ಮೋಹಿನಿಯ ಸ್ಥಿತಿಯಾಗಿದ್ದತೆಂದು ಹಾಸ್ಯ ಮಾಡುವಳು ಇಬ್ಬರೂ ನಗುವರು ಅನಿರುದ್ಧನನ್ನು ಶೋಧಿಸಿ ತರುವ ಕಾರ್ಯ ತನ್ನದೆಂದು ಒಪ್ಪಿದ್ದಳು ಅಷ್ಟು ವೇಳೆಗೆ ಆಕೆ ಅದೆಷ್ಟೋ ರಾಜಪುತ್ರರ ವಿಷಯಕವಾಗಿ ವಿಚಾರಿಸಿದ್ದಳು; ಆದರೆ ಅದುವರೆಗೆ ಒಬ್ಬರೂ ದೊರಕಿರಲಿಲ್ಲ

'ಲೇಖೆ, ಈ ದೈವಯೋಗಕ್ಕೆ ಏನೆನ್ನಬೇಕು? ಅಂದು ಅಕಸ್ಮಾತ್ತಾಗಿ ಕಾಣಬೇಕೆಲ್ಲಿ? ಮತ್ತು ನಮ್ಮ ಮನವನ್ನಪಹರಿಸಿಕೊಂಡೊಯ್ಯಬೇಕೇಕೆ? ಆದರೆ ಅಲ್ಪವಾದರೂ ಸುಳುವು ಹತ್ತದಂತಿರುವುದೇಕೆ?'

'ರಾಜಪುತ್ರಿ, ದೈವಯೋಗವನ್ನರಿತವರಾರು? ಆದರೂ ಶ್ರೀ ಜಗನ್ನಾಥನು ಕೊನೆಗೆ ಒಳಿತನ್ನೇ ಮಾಡುವುದರಲ್ಲಿ ಸಂದೇಹವಿಲ್ಲ'

'ಈಗ ನಾನೇನು ಮಾಡತಕ್ಕದು?'

'ಅದು ನಮಗೆ ತಿಳಿಯದಾಗಿದೆ; ಅಲ್ಪವಾದರೂ ಗೊತ್ತು ಹತ್ತದಾಗಿದೆ ನಾನು ಅದೆಷ್ಟೋ ಶೋಧಿಸಿದೆನು, ಅದೆಷ್ಟೋ ಜನರನ್ನು ವಿಚಾರಿಸಿದೆನು, ಅದೆಷ್ಟೋ ರಾಜಪುತ್ರರನ್ನವಲೋಕಿಸಿದೆನು ಏನು ಮಾಡಿದರೂ ಬಗೆಹರಿಯದಾಗಿದೆ' 'ಅವರಾರಿರಬೇಕು?'

'ಹೇಗೆ ತಿಳಿಯಬೇಕು?' 'ಅಂದು ನೀನು ಕೊಂಚ ತಪ್ಪಿದೆ'

'ಅಹುದು ಅದಕ್ಕೆ ನಾನು ಒಪ್ಪುತ್ತೇನೆ; ಆದರೆ ನಾನು ಬೇಕೆಂದೇ ಹಾಗೆ ಮಾಡಲಿಲ್ಲ ರಥೋತ್ಸವವಾಗುವವರೆಗೆ ಅವರು ಕದಲಲಿಕ್ಕಿಲ್ಲವೆಂದು ನನ್ನ ಊಹೆಯಿದ್ದಿತು. ಅಂತೆಯೇ ನಿನಗೆ ಕೊಂಚ ಸೂಚನೆಯಿತ್ತು ಮರಳಬೇಕೆಂದು ಯೋಚಿಸಿ, ಹಾಗೆ ಮಾಡಿದೆನು; ಆದರೆ ಎಲ್ಲವೂ ನನ್ನ ಊಹೆಗಿಂತ ವಿಪರೀತವಾಯಿತು'

'ಅಹುದು ಲೇಖೆ, ನಾನದನ್ನು ಬಲ್ಲೆ; ಆದರೆ ಈ ಸಂಕಟದಿಂದ ಪಾರುಗಾಣುವುದೆಂತು? ನನಗಂತು ಹಗಲೂ ಇರುಳೂ ಅದೊಂದೇ ಧ್ಯಾನ

ವಾಗಿದೆ. ಊಟ-ನಿದ್ರೆಗಳು ಕೂಡ ಸುಖವಾಗಿಲ್ಲ. ತಂದೆಯವರು ತಮ್ಮ ರಾಜಕಾರಣದಲ್ಲಿರುವ ಮೂಲಕ ಅವರಿಗೆ ನನ್ನ ಸ್ಥಿತಿ ಚೆನ್ನಾಗಿ ತಿಳಿಯದು; ಆದರೆ ಅವ್ವನು ಮಾತ್ರ ನನ್ನ ಮನೋಸ್ಥಿತಿಯನ್ನರಿತಿರುವಳು. ಇದು ವರೆಗೆ ಹತ್ತಿಪ್ಪತ್ತುಸಲವಾದರೂ ಕೇಳಿರಬಹುದು; ಆದರೆ ನಾನು ಏನೆಂದು ಉತ್ತರಕೊಡಲಿ? ಹೆಸರು ಕೂಡ ತಿಳಿಯದ ಓರ್ವ ಪುರುಷನಲ್ಲಿ ನನ್ನ ಮನಸ್ಸು ಕುಳಿತಿದೆಯೆಂದರೆ, ಕೇಳಿದವರು ನಗಲಿಕ್ಕಿಲ್ಲವೆ? ಆ ಪುರುಷನು ದೇಶೀಯನೋ-ವಿದೇಶೀಯನೋ? ಸ್ವಧರ್ಮಿಯೋ-ಪರಧರ್ಮಿಯೋ? ಬ್ರಾಹ್ಮಣನೋ-ಕ್ಷತ್ರಿಯನೋ? ಏನೂ ತಿಳಿಯದೆ ಅನುರಕ್ತಳಾಗುವುದೆಂದರೆ, ಇದಕ್ಕಿಂತಲೂ ಹೆಚ್ಚಿನ ಮೂರ್ಖತನವಿನ್ನೊಂದಿರಬಹುದೆ?'

'ರಾಜಪುತ್ರೀ, ನಿನ್ನ ವಿಚಾರ ನಿಜವೇನೋ ಇದೆ, ಆದರೆ ........ ...'

'ಆದರೆ ಏನು?'

'ಆ ಸುಂದರನು ಯಾವನೋ ಒಬ್ಬ ಉಚ್ಚಕುಲದವನಿರಲೇಬೇಕೆಂಬದು ಸ್ಪಷ್ಟವೇ ಆಗಿದೆಯಲ್ಲವೆ?'

'ಹಾಗೇನೋ ನನ್ನ ಮನಸ್ಸು ಹೇಳುತ್ತಲಿದೆ; ನಿಶ್ಚಿತ ವಾರ್ತೆ ತಿಳಿಯುವ ವರೆಗೆ ಹೀಗೆಯೇ ಎಂದು ನಿರ್ಧರಿಸುವದು ಶಕ್ಯವಿಲ್ಲ.'

'ಏಕೆ ಶಕ್ಯವಿಲ್ಲ?' 'ಅಂದರೆ?'

'ಅವರು ನಿಶ್ಚಯವಾಗಿಯೂ ಕ್ಷತ್ರಿಯಕುಲೋತ್ಪನ್ನರಿರಬೇಕಲ್ಲದೆ, ಅವರು ಅದಾವುದೋ ಒಂದು ರಾಜ್ಯಪಾಲಕರೇ ಇರಬೇಕು.'

'ನೀನು ಇಷ್ಟು ನಿರ್ಧಾರಪೂರ್ವಕ ಹೇಗೆ ಹೇಳಬಲ್ಲೆ?'

'ಪ್ರಮಾಣಮಂತಃಕರಣಪ್ರವೃತ್ತಯಃ'

'ಕಾಲಿದಾಸನ ಜನ್ಮ ಸಫಲವಾದಂತಾಯಿತು!'

'ರಾಜಪುತ್ರಿ, ನಿನಗೇನೋ ಉಪಹಾಸವೆನಿಸಬಹುದು; ಆದರೆ ನನಗದರಲ್ಲಿ ಪೂರ್ಣ ನಂಬುಗೆಯುಂಟು; ಇದಲ್ಲದೆ ರಾಜಪುತ್ರಿ, ಕವಿಗಳಾದರೂ ಸರ್ವಸಾಮಾನ್ಯವಾಗಿ ಸತ್ಯವಾದುದನ್ನೇ ಬರೆಯುತ್ತಾರಲ್ಲದೆ, ಸುಮ್ಮನೆ ಕಲ್ಪನಾಮಯ ಕತೆಗಳನ್ನು ಕಟ್ಟುವುದಿಲ್ಲ.'

'ಕಲ್ಪನೆಯ ಕತೆಗಳನ್ನು ಹೆಣೆಯುವುದು ಕವಿಗಳ ಮುಖ್ಯಕಾರ್ಯವೇ ಅಲ್ಲವೆ?'

'ಕತೆಗಳೇನೋ ಕಲ್ಪನೆಯವಿರಬಹುದು; ಆದರೆ ಅವು ಸತ್ಯಸೃಷ್ಟಿಯೊಳಗಿನವೇ ಎಂಬ ಬಗ್ಗೆ ಸಂದೇಹವೇನೂ ಇಲ್ಲ. ದುಷ್ಯಂತ-ಶಕುಂತಲೆಯರು ಒಬ್ಬರೊಬ್ಬರಲ್ಲಿ ಅನುರಕ್ತರಾದುದನ್ನು ನಾವೀಗ ಸ್ವತಃ ಅನುಭವಿಸು

ತ್ತಿರುವುದಿಲ್ಲವೆ? ಹಾಗೆಯೇ ಇನ್ನೂ ಅನೇಕ ಸಂಗತಿಗಳನ್ನು ನಾವು ನಿತ್ಯವೂ ಅನುಭವಿಸಬಹುದಾದ ವಿಷಯಗಳನ್ನು ಬಹಳ ಸ್ವಾರಸ್ಯವಾಗಿ ವರ್ಣಿಸಿರುತ್ತಾನೆ. ಅಂತೆಯೇ ಕಾಲಿದಾಸನೆಂದರೆ, ಕವಿಕುಲಕ್ಕೆ ಗುರುವಾಗಿರುತ್ತಾನೆ.'

'ಆಗಲಿ ಬಿಡು. ಈಗ ನಮಗೆ ಆ ಕಾಲಿದಾಸನಿಂದ ಪ್ರಯೋಜನವೇನೂ ಇಲ್ಲ ನಮಗೆ ಬೇಕಾದ ಸಂಗತಿಯೇ ಬೇರೆಯಾಗಿದೆ.'

'ಅಹುದು; ಆದರೆ ಅದಕ್ಕೆ ನಾವು ತೀರ ಅಸಮರ್ಥರಾಗಿರುತ್ತೇವೆ. ಇಲ್ಲವಾಗಿದ್ದರೆ, ಇಷ್ಟು ಸಮಯ ತೊಂದರೆಗೊಳಗಾಗಿ ಕೈಮುಚ್ಚಿಕೊಂಡು ಕುಳಿತಿರಲು ಕಾರಣವೇ ಇರಲಿಲ್ಲ'

'ಅದಿರಲಿ. ಸಖಿ, ನನಗೊಂದು ಯೋಚನೆ ಬಂದಿದೆ'

'ಅದೇನು?' 'ಹೇಳಿದರ ನೀನು ಹಾಸ್ಯಮಾಡಬಹುದು'

'ನಾನು ಹಾಸ್ಯಮಾಡುವಂತಹ ವಿಷಯವೇನು?'

'ಛೆ! ನೀನು ನಂಬಲಿಕ್ಕಿಲ್ಲ'

'ಹೇಳಿಯಾದರೂ ಹೇಳು ನೋಡುವಾ' 'ಹೇಳಲಾ?'

'ಹೇಳು, ಅವಶ್ಯವಾಗಿ ಹೇಳು. ನಿನ್ನಾ ವಿಚಿತ್ರವಾದ ವಿಚಾರವನ್ನು ಕೇಳಲು ನಾನು ಸಿದ್ಧಳಿರುವೆನು.' 'ನೀನು ನಗುವುದಿಲ್ಲವೆ?'

'ನೀನು ಹೇಳದ ಹೊರತು ನಾನೇನು ಹೇಳಲಿ?'

'ಛೆ! ನೀನು ಉಪಹಾಸ ಮಾಡಬಹುದು.'

'ಅದೇನೇ ಇರಲಿ. ಹೇಳು ನಾನೇನು ನಿನಗೆ ಪರಕೀಯಳೆ?'

'ಹಾಂ, ಗೆಳೆತನದ ವಿಷಯಕವಾದ ಭಾಷಣಕ್ಕೆ ಪ್ರಾರಂಭಿಸುವೆಯೇನು?'

'ನೀನು ಒಳ್ಳೆಯ ಮಾತಿನಿಂದ ಹೇಳದಿದ್ದರ ಒಂದು ಚಂಚಿಕೆ ಬೇಡವೆ?'

'ಹೀಗಾದರೆ ಹೇಳುವೆನೆಂಬದು ಹೇಗೆ?'

'ಭಾಷಣದ ಮಹತ್ವ ನೀನರಿಯೆ. ಮಾತುಗಳಿಂದ ಮೂಡಣ ಸೂರ್ಯನನ್ನು ಪಡವಣಕ್ಕೆ ತರಬಹುದು ಮತ್ತೆ '

'ಈ ಸಲ ಭಾಷಣಕಲೆಯ ಬಗ್ಗೆ ಉಪನ್ಯಾಸ ಆರಂಭವಾಯಿತೇನು?' ಹಾಗಾದರೆ ನಿನ್ನಾ ವಿಚಾರವನ್ನು ಹೇಳು ನೋಡೋಣ.'

'ನೀನು ಚೇಷ್ಟೆ ಮಾಡುವುದಿಲ್ಲವೆ?'

'ಛೆ, ನಿನ್ನ ಬಿಂಕ ಬಹಳವಾಯಿತು. ಚೇಷ್ಟೆಯೆಂದರೇನು? ಅದಕ್ಕೆ ಕಾಲಮಾನಗಳಿಲ್ಲವೆ? ಇದಲ್ಲದೆ. ' 'ಇಲ್ಲ ಇಲ್ಲ ಹೇಳುತ್ತೇನೆ'

'ಹಾಗಾದರೆ ಹೇಳು ನೋಡುವಾ'

'ನೀನು ಸಿಂಹಾಚಲಕ್ಕೆ ಹೋಗಿದ್ದೆಯಾ?'

'ಇದೆಂತಹ ವಿಚಿತ್ರ ಪ್ರಶ್ನೆ ರಾಜಪುತ್ರಿ? ಹುಟ್ಟಿ ಬೆಳೆದುದು ಸಿಂಹಾಚಲದಲ್ಲಿ. ಆಡಿದುದೂ ನೋಡಿದುದೂ ಸಿಂಹಾಚಲದಲ್ಲಿ, ಶಿಕ್ಷಣ ಹೊಂದಿದುದು ಸಿಂಹಾಚಲದಲ್ಲಿ. ಹೀಗಿದ್ದರೂ ಸಿಂಹಾಚಲಕ್ಕೆ ಹೋಗಿದ್ದೆಯಾ ಎಂದರೆ, ನಿನಗೇನೆನ್ನಬೇಕು? ಉಪಹಾಸ ಮಾಡುವೆಯೆಂಬ ಆರೋಪ ಹೊರಿಸುವ ನೀನೇ ಉಪಹಾಸಕ್ಕೆ ಪ್ರಾರಂಭಿಸಿದೆಯಲ್ಲ'

'ಹಾಗಲ್ಲ ಲೇಖೆ, ನಾನು ಹೇಳಿದ ವಿಷಯ ಅದಲ್ಲ. ನಾವೀರ್ವರೂ ಕೂಡಿಯೇ ಬೆಳೆದಿದ್ದು, ನೀನು ಸಿಂಹಾಚಲಕ್ಕೆ ಎಂದಾದರೂ ಹೋಗಿದ್ದೆಯಾ? ಎಂದು ನಾನು ಎಂದಾದರೂ ಕೇಳಬಹುದೆ?' 'ಹಾಗಾದರೆ ಇನ್ನೇನು ಕೇಳಿದೆ?'

'ನಾವು ಸಿಂಹಾಚಲದಿಂದ ಇಲ್ಲಿಗೆ ಬಂದ ಮೇಲೆ ಪುನಃ ಹೋಗಿದ್ದೆಯಾ? ಎಂದು ಕೇಳಿದೆನು'

'ಅಲ್ಲಿ ನಮ್ಮ ರಾಜ್ಯವನ್ನು ಗೆದ್ದ ಕನ್ನಡ ಸಮ್ರಾಟನು ತನ್ನ ಬೀಡು ಬಿಟ್ಟಿರಲು, ನಾನು ಅಲ್ಲಿಗೇತಕ್ಕೆ ಹೋಗಬೇಕು? ಅಲ್ಲಿರುವ ಕಾರ್ಯವೇನು? ನೀನೇನರಿಯೆಯಾ, ನರಪತಿ ಅಲ್ಲಿ ವಸತಿ ಹಾಕಿದುದನ್ನು?'

'ಅಹುದು, ಬಲ್ಲೆನು; ಅಂತೆಯೇ ನಿನ್ನನ್ನು ಕೇಳಿದೆನು'

'ಆಂ ಹೀಗೋ? ಈಗ ತಿಳಿಯಿತು ಏಕೆ, ಬಾಯಿಯವರ ಚಿತ್ತದಲ್ಲಿ ಶ್ರೀಕೃಷ್ಣದೇವರಾಯನ ಸ್ಥಾಪನೆಯಾಗಿದೆಯೇನು?'

'ಛೆ! ನಾನಾತನನ್ನು ಒಂದು ಸಲವಾದರೂ ನೋಡಿಲ್ಲ. ಹೀಗಿದ್ದು, ಆತನು ನನ್ನ ಮನವನ್ನು ಹೇಗ ಅಪಹರಿಸುವನು?'

'ಕಿವಿಗಳಿಂದ ನೋಡಿರುವೆವಲ್ಲ?'

"ಭಾಪು! ಭಾವು! ಲೇಖೆ, ನೀನೋರ್ವ ನವೀನ ಸಂಶೋಧಕಳಾಗಿರುವೆ. ಇದುವರೆಗೆ ನೋಡುವ ಶಕ್ತಿ ಕಣ್ಣುಗಳಿಗೆ ಮಾತ್ರ ಎಂದು ಎಲ್ಲರ ಅನುಭವವಿದ್ದಿತು. ಇಂದು ಮಾತ್ರ ನೀನು ಜಗತ್ತಿಗೆ ಹೊಸ ಅನುಭವ ತಂದುಕೊಡಲಿರುವೆ." 'ಹೊಸದಲ್ಲ. ಇದ್ದುದನ್ನೇ ಇದ್ದಂತೆ ಹೇಳಿದೆನು.'

ಹೇಗೆ, ಹೇಗೆ, ಹೇಳು ನೋಡುವಾ? ನೀನು ಕಿವಿಯಿಂದ ಹೇಗೆ ನೋಡಬಲ್ಲೆ?' 'ನಾನೋರ್ವಳೇ ಏಕೆ, ನೀನೂ ನೋಡುತ್ತಲಿರುವೆ.'

'ಏನು-ಏನು ಹಾಗೆಂದರೆ? ಹುಚ್ಚು ಹಿಡಿದಿದೆಯೆ?'

'ಅಹುದು. ಪ್ರೇಮದ ಹುಚ್ಚು ಹಿಡಿದಿದೆ. ಇರಲಿ. ಸಖೀ, ನರಪತಿಯ ವಿಷಯಕವಾಗಿ ನೀನೇನು ಬಲ್ಲೆ?'

'ಆತನು ಸುಂದರನಿರುವನು, ತರುಣನಿರುವನು. ಆವಾಗಲೂ ನಗುಮುಖದವನು. ವಿದ್ವತ್ತೆಯ ತೇಜ ಆತನ ಮುಖದಲ್ಲಿ ಉಕ್ಕುತ್ತಲಿದೆ.

ಶೌರ್ಯಕ್ಕೆ ಆಶ್ರಯಸ್ಥಾನವೇ ಅವನಾಗಿರುವನು ಇನ್ನೇನು ಬೇಕು?'

'ಅಲ್ಲ ಸಖೀ, ಮತ್ತೆ ನೀನು ಆತನನ್ನೆಲ್ಲಿ ನೋಡಿದೆ?'

'ಯಾರು, ನಾನೆ?' 'ಅಹುದು; ನೀನೇ.'

'ನಾನು ಒಂದು ಸಲವಾದರೂ ನೋಡಿಲ್ಲವಲ್ಲ!'

'ನೋಡಿದ್ದಕ್ಕಿಂತಲೂ ಹೆಚ್ಚಾಗಿಯೇ ಹೇಳಬಿಟ್ಟೆಯಲ್ಲ ಮತ್ತೆ?'

'ಕಿವಿಗಳಿಲ್ಲವೆ?' 'ಕಿವಿಗಳಿಂದ ನೋಡಿದೆಯಾ?'

"ನೋಡದಿದ್ದರೂ ಕೇಳಿಲ್ಲವೆ?"

"ಅಗೋ, ನಾನಾದರೂ ಅದನ್ನೇ ಹೇಳಿದೆನು. ಆತನ ಯಶೋದುಂದುಭಿಯನ್ನೂ, ಗುಣಗಾನವನ್ನೂ, ರೂಪಕೀರ್ತಿಯನ್ನೂ ಕೇಳಿ, ಅದರಿಂದ ನೀನಾತನಲ್ಲಿ ಅನುರಕ್ತಳಾಗಿಲ್ಲವೆಂಬದು ಹೇಗೆ?"

'ಹಾಗೆ ನಾನು ಅನುರಕ್ತಳಾಗಬೇಕಿದ್ದರೆ ನೊನ್ನೆಯ ಸುಂದರನಿಗೇನು ಹೇಳಬೇಕು?'

'ಹಾಗಾದರೆ ಸಿಂಹಾಚಲಕ್ಕೆ ಹೋಗಿದ್ದೆಯೇನೆಂದು ಏಕೆ ಕೇಳಿದೆ?'

'ನನಗೊಂದು ಸಂದೇಹ ಬಂದಿದೆ.' 'ಏನೆಂದು?'

'ನಾನು ಕಿವಿಯಿಂದ ನೋಡಿದ ಯಶೋರೂಪವೂ ಕಣ್ಣಿನಿಂದ ನೋಡಿದ ಮಧುರಾಕಾರವೂ ಒಂದೇ ಇದ್ದರೂ ಇರಬಹುದು.' 'ಏತರ ಮೇಲಿಂದ?'

'ಕಾಲಿದಾಸನೇ ಆಧಾರ. ಏನೇ ಇದ್ದರೂ ಒಂದು ಸಲ ಪ್ರತ್ಯಕ್ಷ ನೋಡುವುದು ಒಳಿತಲ್ಲವೆ?' 'ಅಂ ಹೀಗಿರಬಹುದೆ?'

'ಏಕೆ ಹೇಗೆ ತೋರುತ್ತದೆ?' 'ಛೆ, ಇರಲಿಕ್ಕಿಲ್ಲ' 'ಹೇಗೆ ಹೇಳುವೆ?'

'ಕರ್ನಾಟಕ ಸಾಮ್ರಾಜ್ಯದೊಡೆಯ ಹಾಗೆ ಸಾಮಾನ್ಯ ಮನುಷ್ಯನಂತೆ ಬರುವುದು, ಅದೂ ವೈರಿ ರಾಜ್ಯದಲ್ಲಿ ರಕ್ಷಕರಿಲ್ಲವೇ ತಿರುಗುವುದು, ಸಾಧ್ಯವಿದೆಯೆ?' 'ಅದೇನೋ? ಹೋಗಿ ನೋಡಲು ಆತಂಕವೇನು?'

'ಆತಂತವೇನೂ ಇಲ್ಲ. ಆದರೆ... ಆದರೆ ..

ಏನೇ ಇರಲಿ. ಇಂದು ಪ್ರಮಾಣಿಸಿಯೇ ನೋಡುತ್ತೇನೆ'

'ಹಾಗಾದರೆ ಹೊರಡುವುದಾವಾಗ?' 'ಈಗಲೇ ಹೊರಡುವದು'

'ಇಷ್ಟೆಲ್ಲ ಕಷ್ಟ ನಷ್ಟಗಳಗೊಳಗಾದರೂ ನನಗೆ ಇದು ವರೆಗೂ ಈ ಯೋಚನೆಯೇ ಹೊಳೆಯಲಿಲ್ಲವಲ್ಲ?' 'ನನಗಾದರೂ ಎಲ್ಲಿತ್ತು?'

'ಇಂದೇ ನಿನಗೆ ಹೀಗೆ ಯೋಚನೆಯೇಕೆ ಬಂದಿತು?'

'ಇಂದು ಬೆಳಗಿನಲ್ಲಿ ಒಂದು ಸ್ವಪ್ನ ಬಿದ್ದಿತು.' 'ಏನೆಂದು?'

'ನಾನೊಂದು ರತ್ನಹಾರ ಕಳೆದುಕೊಂಡಿದ್ದೆನು. ಅದಕ್ಕಾಗಿ ನಾನೆಷ್ಟೋ

ಶೋಧಿಸಿದೆನು. ತಂದೆಯವರಿಗೆ ತಿಳುಹಿದರೆ ಕೋಪಿಸುವರೆಂದು ನನ್ನಷ್ಟಕ್ಕೆ ಶೋಧಿಸುತ್ತಲಿದ್ದೆನು; ಏನಾದರೂ ಸಿಕ್ಕಲಿಲ್ಲ. ನಾನು ಜಗನ್ನಾಥನಿಗೆ ಬಹಳ ವಾಗಿ ಮೊರೆಯಿಟ್ಟೆನು ಮುಂದೆ ಎಲ್ಲಿಂದಲೊ 'ರತ್ನಹಾರವು ಎಲ್ಲಿಯೂ ಹೋಗಿಲ್ಲ. ನಿನ್ನ ಬಳಿಯಲ್ಲಿಯೇ ಇದೆ. ಕೊಂಚ ಚನ್ನಾಗಿ ಶೋಧಿಸು, ಅಂದರೆ ತಪ್ಪದೆ ದೊರೆಯುತ್ತದೆ. ಜಾಗ್ರತೆಯಿಂದ ಶೋಧಿಸಿ, ಕಂಠಕ್ಕೆ ಕಟ್ಟಿಕೊಳ್ಳು' ಎಂದಂತಾಯಿತು. ಒಡನೆಯೇ ಎಚ್ಚರಾಯಿತು. 'ನಿನ್ನ ಬಳಿಯಲ್ಲಿಯೇ' ಅಂದರೇನೆಂದು ಬಹಳವಾಗಿ ಯೋಚಿಸಿದೆನು. ಕೊನೆಗೆ ಈ ಯೋಚನೆ ಹೊಳೆಯಿತು. ನಿನಗೆ ತಿಳಿಸಿದೆನು.'

'ಸಖಿ, ಜಗನ್ನಾಥನೇ ನಮ್ಮ ಸಂಕಟವನ್ನು ನೋಡಿ ಕನಿಕರಪಟ್ಟು ಹೀಗೆ ಹೇಳಿರಬೇಕು. ಆಗಲಿ. ಇಂದು ಹೋಗಿ ಪ್ರತ್ಯಕ್ಷ ಕಂಡೇ ಅರಿಯುತ್ತೇನೆ'

ಅದು ವರೆಗೆ ತನಗೆ ತೀರ ಸಮೀಪದಲ್ಲಿದ್ದ ಸಿಂಹಾದ್ರಿಗೆ ಹೋಗಿಬರುವಷ್ಟು, ಒಂದು ಸಲ ನರಪತಿಯನ್ನೀಕ್ಷಿಸಿ ಬರುವ ಯೋಚನೆಯೇ ಬಾರದಿದ್ದುದಕ್ಕೆ ಆಕೆಗೆ ಆಚ್ಚರಿಯೆನಿಸಿತು. ಅಂದಾದರೂ ಆ ವಿಷಯ ಹೊಳೆಯಿತೆಂದು ಆನಂದದಿಂದ ಎಡಬಲಗಳನ್ನು ನೋಡದೆ ಸಿಂಹಾದ್ರಿಗೆ ಬಂದು ತಲುಪಿದಳು. ಮುಂದಿನ ವಿಷಯವೇನೂ ಕಠಿಣವಾಗಿರಲಿಲ್ಲ. ನರಪತಿಯು ಸಿಂಹಾಚಲವಾಸಿಗಳಲ್ಲಿ ಅತೀವ ಆದರಕ್ಕೆ ಪಾತ್ರನಾಗಿದ್ದನು ಅವರು ಆಗಾಗ್ಗೆ ಆತನನ್ನು ಕಾಣುತ್ತಲಿದ್ದರು ಅಂತಹ ಹಲವರೊಡನೆ ಆತನ ಶಿಬಿರಕ್ಕೆ ಹೋಗಿ ಕಾಣದ ಹೊರತು ಗತ್ಯಂತರವೇ ಇರಲಿಲ್ಲ; ಆದರೆ ಅದರಲ್ಲಿಯೂ ಒಂದು ವೈಶಿಷ್ಟ್ಯವಿದ್ದಿತು, ಅಂದರೆ, ವೇಳೆ ಬಹುತರ ಪೂರ್ವದಲ್ಲಿಯೇ ನಿಶ್ಚಿತವಾಗುತ್ತಲಿದ್ದಿತು ಹೆಣ್ಣುಮಕ್ಕಳು ಬಹುಶಃ ಹೋಗುತ್ತಲೇ ಇರಲಿಲ್ಲ; ಆದುದರಿಂದ ತರುಣಿಳಾದ ತಾನು ಆತನ ಬಳಿಗೆ ಹೋಗುವುದೆಂತು? ಕೊಂಚ ಗೊಂದಲದಲ್ಲಿಯೇ ಬಿದ್ದಳು. ಅಕಸ್ಮಾತ್ತಾಗಿ ಆಕೆಗೆ ಒಂದು ಯೋಚನೆ ಹೊಳೆಯಿತು. ನಿತ್ಯವೂ ನರಪತಿಯು ನಸುಕಿನಲ್ಲಿ ಊರ ಹೊರಗೆ ತಿರುಗಾಡಲು ಹೋಗುವ ರೂಢಿಯಿಟ್ಟಿದ್ದನು. ಮುಂಜಾವಿನ ವರೆಗೆ ಅಲ್ಲಿಯೇ ಉಳಿದು, ಅವರನ್ನು ಎಲ್ಲಾದರೂ ಅಡಗಿ ನೋಡಬೇಕೆಂದು ಯೋಚಿಸಿದಳು. ಆಕೆಯ ಕಾರ್ಯವಾದರೂ ಅಷ್ಟೇ ಇದ್ದಿತು ಒಂದು ಸಲ ಅವನನ್ನು ನೋಡಿದರಾಯಿತು ಆಕೆಗೆ ಇನ್ನೇನೂ ಕೆಲಸವಿರಲಿಲ್ಲ; ಆದುದರಿಂದ ರಾತ್ರಿ ವಾಸಿಸಲು ತಕ್ಕ ಸ್ಥಳ ಶೋಧನೆಗೆ ತೊಡಗಿದಳು. ಅಲ್ಪಾವಕಾಶದಲ್ಲಿ ತಕ್ಕ ವ್ಯವಸ್ಥೆಯೂ ಆಯಿತು. ಮುಂದೆ ಆಕೆ ಅತ್ತಿತ್ತ ತಿರುಗಾಡುತ್ತಲಿರುವಾಗಲೆ ಪಟ್ಟಣದ ಬಹಿರ್ಭಾಗಕ್ಕೆ ತಲುಪಿದಳು. ಅಲ್ಲಿಯೇ ಇಷ್ಟ ಸುಂದರ ಉದ್ಯಾನ

ದಲ್ಲಿ ಪ್ರವೇಶಿಸಿ ಅಲ್ಲಿಯ ಪೂಗಿಡಗಳ ಶೋಭೆಯನ್ನವಲೋಕಿಸುತ್ತ ತಿರುಗಾಡಿದಳು. ಅದೇ ಉದ್ಯಾನವಲ್ಲಿ ಆಕೆ ಅನೇಕ ಸಲ ತಿರುಗಾಡಿದ್ದಳು, ವಿಹರಿಸಿದ್ದಳು; ಆದರೆ ಅಂದು ಆಕೆಗೆ ಅದು ಅತೀವ ರಮಣೀಯವಾಗಿ ತೋರಿತು. ನಾಲ್ಕಾರು ವಾರ ಅದನ್ನು ನೋಡಿರಲಿಲ್ಲವೆಂಬ ಕಾರಣದ ಮೂಲಕವಾಗಿಯೇ ಇದ್ದರೂ ಇರಬಹುದು. ರಮಣೀಯವಾದ ಉದ್ಯಾನದ ಶೋಭೆ ನೋಡುತ್ತ, ಪಟ್ಟಣವು ಪರಕೀಯರ ವಶವಾಗರೂ ಪೂರ್ವದಂತೆ ಅಂದವಾಗಿಯೇ ಇದ್ದ ಬಗ್ಗೆ ಆಕೆಗೆ ಕೌತುಕವೆನಿಸಿತು. ಪಟ್ಟಣವನ್ನು ಕಿಂಚಿತ್ತಾದರೂ ಅಂದಗೆಡದಂತೆ ಕಾದಿಟ್ಟುದಕ್ಕೆ ಕನ್ನಡ ದೊರೆಗೆ ಮನ್ನಣೆ ಸಲ್ಲಿಸಿದಳು ಹಾಗೆ ಪಟ್ಟಣವನ್ನೂ, ಪಟ್ಟಣಿಗರನ್ನೂ, ಪ್ರಜೆಗಳನ್ನೂ ಪೂರ್ಣ ಸೌಖ್ಯದಲ್ಲಿರಿಸಲು ತಮಗೆ ಯಾವ ರಾಜನಾದರೂ ಅಷ್ಟೇ ಎಂಬದೊಂದು ಭಾವನೆ ಮನದಲ್ಲುದಿಸಿತು; ಆದರೂ ಪಾರತಂತ್ರ್ಯ ವಿಚಾರವು ಆಕೆಗೆ ಸಹನವಾಗಲಿಲ್ಲ. ಗಜಪತಿಯು ಒಂದಿಲ್ಲೊಂದು ಹಂಚಿಕೆಯಿಂದ ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆದೇ ಪಡೆಯುವನೆಂದೆಣಿಸಿದಳು ಹೀಗೆ ಭಿನ್ನ ಭಿನ್ನ ವಿಚಾರಗಳಲ್ಲಿ ಮಗ್ನಳಾಗಿರುವಾಗಲೆ ಅಲ್ಲಿ ಹತ್ತೆಂಟು ಜನರು ಮೆಲ್ಲನೆ ಮಾತನಾಡುತ್ತಲಿದ್ದುದನ್ನು ಕೇಳಿದಳು.

'ಆತನೇ ನೋಡು ಕನ್ನಡಿಗರ ವೀರ ಸೇನಾಪತಿ'

'ಯಾರು? ಅಲ್ಲಿ ಕುಳಿತಿರುವ ಸುಂದರ ತರುಣನೇನು?'

'ಅಹುದು. ಆತನೇ ನೋಡು, ವೈರಿಗಳ ಪಟ್ಟಣದಲ್ಲಿ-ವೈರಿಗಳ ಮಧ್ಯದಲ್ಲಿ ಒಬ್ಬನೇ ನಿರ್ಭೀತನಾಗಿ ಹೇಗೆ ಕುಳಿತಿರುವನು?'

'ಅಸಹಾಯ ಶೂರನವನು. ಆತನಿಗೆಲ್ಲಿಯ ಭೀತಿಯು?'

ಶಶಿಲೇಖೆಗೆ ಈ ಮಾತುಗಳು ಕೇಳುತ್ತಲೆ ಕುತೂಹಲದಿಂದ ಆ ಜನರು ನಿರ್ದೇಶಿಸಿದ ದಿಶೆಯತ್ತ ಹೊರಳಿದಳು. ಒಡನೆಯೆ ಆಕೆಯ ಮುಖ ಕಮಲವು ಅರಳಿತು. ಲಜ್ಜಾವರಣದಿಂದ ಮುಖವು ಕೆಂಪಾಯಿತು ಮುಗುಳ್ನಗೆ ಮೊಗದಲ್ಲಿ ಮನೆಮಾದಿತು. ಆನಂದದಿಂದ ಶರೀರವೆಲ್ಲವೂ ತುಂಬಿತು. ರೋಮರೋಮಗಳಲ್ಲಿ ಮೆಲುನಗೆಯಾಡಹತ್ತಿತು. ಕಣ್ಣು ಎಷ್ಟು ನೋಡಿದರೂ ಮತ್ತೆ ಮತ್ತೆ ಅತ್ತವೇ ಹೊರಳಹತ್ತಿದುವು. ಆಕೆಗೆ ಅತ್ಯಂತ ಆನಂದವಾಯಿತು. ಬಹಳ ವೇಳೆ ಎವೆಯಿಕ್ಕದೆ ರಾಮಲಿಂಗನನ್ನು ನೋಡುತ್ತಲೇ ನಿಂತು ಬಿಟ್ಟಳು ಒಂದುಒಂದೂವರೆ ಗಳಿಗೆ ಕಳೆಯುವ ವೇಳೆಗೆ ಉದ್ಯಾನ ಶೋಭೆಯನ್ನು ನೋಡುವದರಲ್ಲಿ, ತನ್ನ ಏನೇನೋ ಹಂಚಿಕೆಗಳನ್ನು ಯೋಚಿಸುವದರಲ್ಲಿ ಮುಳುಗಿದ ರಾಮಲಿಂಗನು ಮನೆಗೆ ಹೋಗಲೆಂದು ಎದ್ದನು.

ಅವನ ಹಾದಿ ಶಶಿಲೇಖೆ ನಿಂತಲ್ಲಿಯೇ ಇದ್ದಿತು. ಮೊದಲು ಅದು ಶಶಿಲೇಖೆಗೆ ತಿಳಿಯಲಿಲ್ಲ; ಆದರೆ ಅವನು ಎದುರು ಬರುವಂತೆ ತೋರಲು ಅಲ್ಲಿಯೇ ಎಲ್ಲಾದರೂ ಅಡಗಬೇಕೆಂದು ನೋಡಿದಳು. ಎಲ್ಲಿಯೂ ಸ್ಥಳವೇ ದೊರೆಯದಾಯಿತು. ಶಶಿಲೇಖೆ ಭಯಚಕಿತ ಹರಿಣಿಯಂತಾದಳು; ಆದರೆ ಮಾಡುವುದೇನು? ರಾಮಲಿಂಗನು ಸಮೀಪಕ್ಕೆ ಬಂದೇಬಿಟ್ಟನು. ಶಶಿಲೇಖೆ ತನ್ನ ಅವಸ್ಥೆ ಮುಚ್ಚಿಟ್ಟು ರಾಮಲಿಂಗನನ್ನು ನೋಡದವಳಂತೆ ಬೇರೊಂದೆಡೆ ನೋಡುತ್ತ ನಿಂತಳು; ಆದರೆ ಕಣ್ಣು-ಮನಗಳೆಲ್ಲವೂ ರಾಮಲಿಂಗನು ಹೋಗುವ ಮಾರ್ಗದಲ್ಲಿಯೆ ಇದ್ದುವು. ಆತನೊಡನೆ ಮಾತನಾಡಬೇಕೆಂಬ ಪ್ರಬಲವಾದ ಆಶೆಯಿದ್ದಿತು; ಆದರೆ ಅದಾವುದೋ ಒಂದು ಭೀತಿ ಆಕೆಯನ್ನು ತಡೆಯುತ್ತಲಿದ್ದಿತು ರಾಮಲಿಂಗನು ಯಾವುದನ್ನೂ ನೋಡದೆ ಹೊರಟಿದ್ದನು. ಶಶಿಲೇಖೆಗೆ ರಾಮಲಿಂಗನು ತನ್ನತ್ತ ನೋಡಬೇಕೆಂಬ ಬಲವಾದ ಆಕಾಂಕ್ಷೆಯಿದ್ದಿತು. ಅವನು ನೋಡದೇ ಹೋಗಬಹುದೆಂದೆಣಿಸಿದಳು. ಒಂದು ಆಶೆ, ಇನ್ನೊಂದು ನಿರಾಶೆ. ಹೀಗೆ ಎರಡರ ಉರುಳಿನಲ್ಲಿ ಸಿಕ್ಕು ಗಾಸಿಯಾದಳು. ರಾಮಲಿಂಗನೋ ಅದಾವುದೋ ಒಂದು ವಿಚಾರದಲ್ಲಿ ಮುಳುಗಿ ಹೊರಟಿದ್ದನು. ಸಮೀಪಕ್ಕೆ ಬರುತ್ತಲೆ ಶಶಿಲೇಖೆಯ ಅವಸ್ಥೆ ವಿಚಿತ್ರವಾಯಿತು. ಬಹುತರ ರಾಮಲಿಂಗನು ಶಶಿಲೇಖೆಯನ್ನು ನೋಡದೆ ಹೋಗುವವನಿದ್ದನು; ಆದರೆ ಅವನು ಸಮೀಪಕ್ಕೆ ಬರುತ್ತಲೆ ಬೇಕೆಂದೋ ಇಲ್ಲವೆ ಅಕಸ್ಮಾತ್ತಾಗಿಯೋ ಏನೋ ಸಪ್ಪಳ ಮಾಡಿದಳು. ರಾಮಲಿಂಗನು ಸ್ವಾಭಾವಿಕವಾಗಿ ಅತ್ತ ಹೊರಳಿದನು. ಒಡನೆಯೇ ಅವನಿಗೆ ಆಶ್ಚರ್ಯವಾಯಿತು. ತಾನಾವಾಗಲೂ ಧ್ಯಾನಿಸುತ್ತಲಿದ್ದ ಸುಂದರಿ ಎದುರಿನಲ್ಲಿ ನಿಂತುದನ್ನು ನೋಡಿ, ಅವನಿಗೆ ಅತ್ಯಂತ ಹರ್ಷವಾಯಿತು ಕೊಂಚ ವೇಳೆ ಮಾತನಾಡಿಸಬೇಕೋ ಹೇಗೆ ಎಂದು ಶಶಿಲೇಖೆಯ ಶಶಿಮೊಗವನ್ನೇ ನೋಡುತ್ತ ನಿಂತನು. ಶಶಿಲೇಖೆಯ ಅವಸ್ಥೆಯಂತೂ ವರ್ಣಿಸಲು ಬಾರದಂತಾಗಿದ್ದಿತು. ಬೆವರಿನಿಂದ ಉಟ್ಟ ವಸನ ಒದ್ದೆಯಾಯಿತು. ಮುಖವು ಕೆಂಜಗದ ಗೂಡಿನಂತಾಗಿದ್ದಿತು. ಹೃದಯ ಬಡಿದುಕೊಳ್ಳುತ್ತಲಿದ್ದಳು. ಕಣ್ಣು ನೆಲವನ್ನೇ ದಿಟ್ಟಿಸುತ್ತಲಿದ್ದರೂ ಆಗಾಗ್ಗೆ ರಾಮಲಿಂಗನ ಮುಖದತ್ತ ಹೊರಳದಿರುತ್ತಿರಲಿಲ್ಲ. ಕಿವಿಗಳು ರಾಮಲಿಂಗನ ಮಾತುಗಳನ್ನು ಕೇಳಲು ಅತೀವ ಉತ್ಕಂಠಿತವಾಗಿದ್ದುವು. ಬಾಯಿ ಮಾತ್ರ ಹೊಲಿದಂತಾಗಿತ್ತು!

ಕೊನೆಗೆ ರಾಮಲಿಂಗನು, 'ಸುಂದರೀ, ನೀನು ಹುಟ್ಟಿನೂರು ಬಿಟ್ಟು ಇಂದೇ ಬಂದೆಯೇನು?' ಎಂದು ಕೇಳಿದನು.

ಶಶಿಲೇಖೆಗೆ ಅಚ್ಚರಿಯಾಯಿತು. ತನ್ನ ಹೆಸರನ್ನು ಹೇಗೆ ಅರಿತನೆಂಬುದೇ ಹೊಳೆಯದಾಯಿತು. ಅವನಾಗಿ ಮಾತನಾಡಿಸಿದ ಮೇಲೆ ಮಾತನಾಡಲೇ ಬೇಕಾಯಿತು. 'ಇಂದೇ ಬಂದೆನು.' ಎಂದು ಉತ್ತರವಿತ್ತಳು.

'ರಾಜಪುತ್ರಿ ಜಗನ್ಮೋಹಿನಿದೇವಿಯರು ಸುಖವಾಗಿರುವರಷ್ಟೆ?''

ಶಶಿಲೇಖೆಯ ಅಚ್ಚರಿಗೆ ಎಲ್ಲೆಯುಳಿಯಲಿಲ್ಲ. ಆಕೆ ಮೃದುಧ್ವನಿಯಲ್ಲಿ 'ಅಹುದು, ಸುಖವಾಗಿರುವರು' ಎಂದುತ್ತರವಿತ್ತಳು.

'ಪ್ರತಾಪರುದ್ರದೇವರೂ ಕ್ಷೇಮದಿಂದಿರುವರೆ?' ಎಂದು ಮತ್ತೆ ಕೇಳಿದ.

'ಅಹುದು. ಕ್ಷೇಮದಿಂದಿರುವರು.' ಶಶಿಲೇಖೆಗೆ ಅದೆಷ್ಟೋ ಮಟ್ಟಿಗೆ ಧೈರ್ಯ ಬಂದಿತು. ಆಕೆ ಎದೆಮಾಡಿ 'ನಾನೊಂದು ಮಾತು ಕೇಳಬಹುದೆ?'

'ಓಹೋ ಅವಶ್ಯವಾಗಿ ಕೇಳು.' ರಾಮಲಿಂಗನೆಂದನು.

'ನನ್ನ ಮತ್ತು ರಾಜಪುತ್ರಿಯ ಸಂಬಂಧ ತಮಗೆ ಹೇಗೆ ತಿಳಿಯಿತು?'

'ಓಹೋ? ಅಂದು ಜಗನ್ನಾಥನ ಸನ್ನಿಧಾನದಲ್ಲಿಯೇ ನಿಮ್ಮೀರ್ವರ ಹೆಸರು ನಮಗೆ ತಿಳಿದು ಹೋಯಿತು. ಆಕಸ್ಮಿಕವಾಗಿ ನಿಮ್ಮನ್ನು ಕಂಡೆವು. ಮತ್ತು ಅಷ್ಟೇ ಆಕಸ್ಮಾತ್ತಾಗಿ ನಿಮ್ಮ ಹೆಸರೂ ತಿಳಿಯಿತು ' ರಾಮಲಿಂಗನೆಂದ.

'ಆದರೆ ನಮಗೆ ಮಾತ್ರ ' ಶಶಿಲೇಖೆ ಅಷ್ಟಕ್ಕೇ ತಡೆದಳು.

'ನಿಮಗೇನು?'' ರಾಮಲಿಂಗನು ಆಶ್ಚರ್ಯದಿಂದ ಕೇಳಿದನು.

ರಾಮಲಿಂಗನ ಬಿಚ್ಚು ಸ್ವಭಾವದಿಂದ ಶಶಿಲೇಖೆಗೆ ಬಹಳ ಧೈರ್ಯ ಬಂದಿತು ಕೊಂಚ ಸಲುಗೆಯಿಂದ, 'ಕೊಂಚವಾದರೂ ಗುರುತು ಕೊಡದೆ ತೊಂದರೆಯಿತ್ತಿರಿ.' ಎಂದು ನುಡಿದಳು

'ಅದು ಹೇಗೆ?'' ರಾಮಲಿಂಗ ಗೊಂದಲದಲ್ಲಿ ಬಿದ್ದು ಕೇಳಿದನು.

'ಹೇಗೆಂದರೆ? ಇದು ವರೆಗೂ ಗೊತ್ತುಹಚ್ಚಲು ಬಹಳ ತೊಂದರೆ ಯಾಯಿತು ಅಂದು ತಮ್ಮ ಜೊತೆಯಲ್ಲಿದ್ದವರು ಕನ್ನಡ ದೊರೆಗಳೇನು?'

'ಅಹುದು. ಜಗನ್ನಾಥನ ಉತ್ಸವ ನೋಡಲು ನಾವೀರ್ವರೂ ಬಂದಿದ್ದೆವು. ರಕ್ಷಕರನ್ನಾಗಲಿ, ವಾಹನಗಳನ್ನಾಗಲಿ ಸಂಗಡ ಒಯ್ಯಲು ಸೂಚನೆಯಿತ್ತರು; ಆದರೆ ನಮಗದು ಒಪ್ಪಿತವಾಗಲಿಲ್ಲ. ಇಬ್ಬರೂ ಸಾಮಾನ್ಯ ವೇಷದಲ್ಲಿಯೇ ಬಂದಿದ್ದೆವು.' ರಾಮಲಿಂಗನು ಉತ್ತರವಿತ್ತನು.

'ನಿಜ-ನಿಜ ಅಂತೆಯೇ ನಮ್ಮ ರಾಜಪುತ್ರಿಯು ಮನವನ್ನಪಹರಿಸಿದರು; ಆದರೆ ಹಾಗೆ ಕಳವು ಮಾಡಿದ ಕಳ್ಳನ ಸುಳುವು ತಿಳಿಯದೆ ಬಹಳ ತೊಂದರೆಯಾಯಿತು.' ಶಶಿಲೇಖೆಯೆಂದಳು. 'ಅದೇಕೆ.?' ರಾಮಲಿಂಗ ಕೇಳಿದನು.

'ನೀವು ಅಲ್ಲಿಂದ ಮರಳುತ್ತಲೇ ನಾನು ನಿಮ್ಮ ಬೀಡಾರವನ್ನು ನೋಡಿ

ರಾಜಪುತ್ರಿಯ ಬಳಿಗೆ ಬಂದೆನು. ಅಲ್ಲಿಂದ ಮರಳುವಷ್ಟರಲ್ಲಿ ನೀವು ಅಲ್ಲಿರಲಿಲ್ಲ. ಎಷ್ಟು ಶೋಧಿಸಿದರೂ ಗೊತ್ತು ಹತ್ತಲಿಲ್ಲ. ಇದುವರೆಗೆ ಬಹಳ ತೊಂದರೆಯಾಯಿತು. ಆಕಸ್ಮಾತ್ತಾಗಿ ರಾಜಪುತ್ರಿಯು ನನಗೆ ಇಲ್ಲಿಯವರೆಗೆ ಬರಲು ಸೂಚಿಸಲು ಬಂದೆನು.' ಶಶಿಲೇಖೆ ವಿವರಿಸಿದಳು.

'ಮತ್ತೆ ನಮ್ಮ ಮಹಾರಾಜರ ಮನವನ್ನು ಸಂಪೂರ್ಣವಾಗಿ ಕದ್ದೊಯ್ದಿರುವರಲ್ಲ ನಿಮ್ಮ ರಾಜಪುತ್ರಿ?' ರಾಮಲಿಂಗ ಪ್ರಶ್ನೆ ಮಾಡಿದನು.

'ಆದರೆ ಕಳೆದುಕೊಂಡವರಿಗೆ ಆದರ ಯೋಚನೆ ಅಲ್ಪವಾದರೂ ಇರಬಾರದೆ?' ಶಶಿಲೇಖೆ ಮರಳಿ ಪ್ರಶ್ನೆ ಮಾಡಿದಳು.

'ಕದ್ದೊಯ್ದವರು ಅನ್ಯರಿರದೆ ಸಂಪೂರ್ಣ ಹಿತಚಿಂತಕರೇ ಇದ್ದಲ್ಲಿ ಆ ಬಗ್ಗೆ ಯೋಚನೆಯನ್ನೇಕೆ ಮಾಡಬೇಕು?' ರಾಮಲಿಂಗ ಮತ್ತೆ ಪ್ರಶ್ನೆ ಮಾಡಿದ.

'ಆದರೆ ಆ ಹಿತಚಿಂತಕರ ಯೋಜನೆಯಾದರೂ ಬೇಡವೆ?' ಶಶಿಲೇಖೆ ಕೇಳಿದಳು. 'ಅಂದರೆ?' ರಾಮಲಿಂಗ ಅಚ್ಚರಿಬಟ್ಟವನಂತೆ ಕೇಳಿದನು.

'ರಾಜಪುತ್ರಿಯ ಮನವನ್ನಪಹರಿಸಿದ ಮಹಾಪುರುಷನಾರೆಂಬದು ಆಕೆಗೆ ಅಲ್ಪವಾದರೂ ತಿಳಿಯಕೂಡದೆ? ಪಾಪ! ಗಾಢಕತ್ತಲೆಯಲ್ಲಿ ಕೈ ಬಿಟ್ಟಂತೆ ಆಕೆಯ ಸ್ಥಿತಿಯಾಗಿದೆ ನೀವಾದರೂ ಒಂದುಸಲ ಬರಬೇಕು. ಸಂಗತಿಯನ್ನಾದರೂ ತಿಳುಹಿಸಕೂಡದೆ?' ಶಶಿಲೇಖೆ ರಾಮಲಿಂಗನಿಗೆ ಪ್ರಶ್ನೆ ಮಾಡಿದಳು.

'ಅಹುದು; ಆದರೆ ಭವಿತವ್ಯತೆಯು ಅನಿಶ್ಚಿತವಿರಲು, ನಮಗೆ ಹೆಚ್ಚು ಮುಂದೊರೆಯುವುದು ಅನರ್ಥಕರವೆಂದು ತೋರಿದ್ದರಿಂದ ನಮ್ಮಿಂದೇನೂ ಮಾಡಲಾಗಲಿಲ್ಲ' ರಾಮಲಿಂಗ ಕೊಂಚ ದುಃಖಮಿಶ್ರಿತ ಸ್ವರದಲ್ಲಿ ನುಡಿದನು.

'ಅಂದರೆ, ನೀವನ್ನುವುದಾದರೂ ಏನು?' ಶಶಿಲೇಖೆ ಆಶ್ಚರ್ಯದಿಂದಂದಳು.

'ನಮ್ಮ ಕರ್ನಾಟಕದ ಘನತೆಯು, ವಿಜಯನಗರದ ವೈಶಿಷ್ಟ್ಯವು, ಕನ್ನಡಿಗರ ಮನ್ನಣೆಯು ಕೊಂಚವಾದರೂ ಕೊಂಕಾಗದಂತೆ-ಹೆಚ್ಚುತ್ತಲೇ ಹೋಗುವಂತೆ-ನೋಡಿಕೊಳ್ಳುವುದು ನಮ್ಮ ಆದ್ಯಕರ್ತವ್ಯವಲ್ಲವೆ?'

'ಇನ್ನೂ ಸ್ಪಷ್ಟವಾಗಿ ಹೇಳಬಹುದಲ್ಲ.' ಶಶಿಲೇಖೆ ಗಂಭೀರವಾಗಿ ಅಂದಳು.

'ಕರ್ನಾಟಕ-ಕಲಿಂಗ ರಾಜಮನೆತನಗಳಲ್ಲಿ ಶರೀರಸಂಬಂಧವಾಗಬೇಕಾದರೆ, ಕಲಿಂಗರಾಜನು ಕನ್ನಡದೊರೆಗಳ ಕೂಡ ಸಖ್ಯ ಬೆಳೆಯಿಸಲು ಮುಂದಾಗಬೇಕು' ರಾಮಲಿಂಗನು ಸ್ಪಷ್ಟೀಕರಿಸಿದನು.

'ಇಲ್ಲವಾದರೆ? . ...' ಶಶಿಲೇಖೆ ಭಯಸೂಚಕಸ್ವರದಲ್ಲಿ ಕೇಳಿದಳು.

'ಆ ಮೇಲಿನ ವಿಷಯ ಈಗ ಹೇಳುವುದು ಹೇಗೆ? ತಮ್ಮ ತಂದೆ-ತಾಯಿಗಳ ವಿರುದ್ಧವಾಗಿ ರಾಜಪುತ್ರಿಯವರೂ ವರ್ತಿಸಲಾರರು; ಮತ್ತು

ನಮ್ಮ ದೊರೆಗಳಾದರೂ ಕರ್ನಾಟಕ ಸಿಂಹಾಸನಕ್ಕೆ ಅಪಮಾನವಾಗುವಂತಹ ಯಾವ ಸಂಬಂಧಕ್ಕೂ ಸಮ್ಮತಿಸಲಾರರು' ರಾಮಲಿಂಗನಂದನು.

ಒಬ್ಬರೊಬ್ಬರೂ ತಮ್ಮ ಪ್ರೇಮ ವ್ಯಕ್ತಗೊಳಿಸಲು ಆತುರರಾಗಿದ್ದರು. ರಾಮಲಿಂಗನು ಧೀರನಾದ ಪುರುಷನಾದುದರಿಂದ ಅದಕ್ಕೆಡೆಗೊಡಲಿಲ್ಲ. ಶಶಿಲೇಖೆಯೇ ಕೇಳಬಹುದಿತ್ತು, ಆದರ ಭವಿತವ್ಯತೆಯ ಅನಿಶ್ಚಿತತೆಯರಿತು ತಡೆದಳು. ನಿಷ್ಕಲಂಕವಾದ ಪ್ರೇಮ ಕೂಡಿದ್ದರೂ ಅದಕ್ಕೆ ವಿಘ್ನಗಳು ಬಹಳವೆಂದರಿತು, ಆಕೆಯ ಮುಖವು ತೇಜೋಹೀನವಾಯಿತು. ಆಕೆ ಬಹಳ ವೇಳೆ ನಿಲ್ಲದೆ, ರಾಮಲಿಂಗನ ಅಪ್ಪಣೆ ತೆಗೆದುಕೊಂಡು ಹೊರಟಳು

ಶಶಿಲೇಖೆ ಲಗುಬಗೆಯಿಂದ ಹೊರಟು ಪೊಟ್ಟನೂರಿಗೆ ತಲುಪಿದಳು. ರಾಜಪುತ್ರಿಯನ್ನು ಕಂಡು ಸಕಲವೃತ್ತಾಂತವನ್ನರುಹಿದಳು.

'ಲೇಖೆ, ನಾನು ಹೇಳಿದಾಗ್ಗೆ ನನಗೇ ನಗೆಯಾಡಿದೆಯಲ್ಲವೆ?'

'ಜಗನ್ನಾಥನೇ, ಅರುಹಿದ ಮೇಲೆ ಸಟೆಯಾಗುವುದೆಂತು?'

'ಆದರೆ ಲೇಖೆ, ನೀನು ಮೊದಲು ಸಲವೇ ನಿನ್ನ ಮನದಿನಿಯನ ಕೂಡ ಇಷ್ಟು ಮಾತುಗಳಾಡಿದುದು ಹೇಗೆ?'

'ರಾಜಪುತ್ರಿ, ಅದು ಹೇಗೋ ನಾನರಿಯೆ; ಆದರೆ ಮಾತನಾಡಿದುದು ಮಾತ್ರ ನಿಜ. ಮೊದಲು ಆಕಸ್ಮಾತ್ತಾಗಿ ಅವರನ್ನು ಕಾಣುತ್ತಲೆ ಬಹಳ ವಾಗಿ ಭಯಪಟ್ಟೆನು. 'ಏನೆನ್ನುವರೋ?' ಎಂಬ ಭೀತಿಯಾವರಿಸಿಕೊಂಡಿತು. ಅಲ್ಪಾವಕಾಶದಲ್ಲಿ ಅವರ ಮಧುರಧ್ವನಿ ಕೇಳುತ್ತಲೇ ನನ್ನ ಭೀತಿ ಮಾಯವೇ ಆಯಿತು. ನಾನು ಉತ್ಸಾಹದಿಂದ ಮಾತನಾಡಹತ್ತಿದೆನು, ಇದಲ್ಲದೆ, ಕಾರ್ಯಭಾರವಾದರೂ ನನಗೆ ಉತ್ತೇಜನವಿತ್ತಿತು.'

'ಅಂತೂ ಒಳ್ಳೇ ಗಟ್ಟಿಗಳು, ಆದರೆ ಲೇಖೆ ನಿನ್ನ ಸ್ವಂತದ ವಿಷಯಕ ವಾಗಿ ಕಿಂಚಿತ್ತನ್ನಾದರೂ ಪ್ರಸ್ತಾಪಿಸಲಿಲ್ಲವಲ್ಲ!'

'ರಾಜಪುತ್ರಿ, ಒಂದರಲ್ಲಿ ಎರಡೂ ಅಡಕವಾಗಿಯೇ ಇರುತ್ತವೆ. ಅವರು ನಮ್ಮ ರಾಜಪುತ್ರಿಯ ಮನೋವಲ್ಲಭನ ಸೇನಾನಿ; ಮತ್ತು ನಾನೋ? ರಾಜ ಪುತ್ರಿಯ ಒಡನಾಡಿ. ಹೀಗೆ ಎರಡು ಬದಿಯಲ್ಲೂ ಒಂದಕ್ಕೊಂದು ಹೊಂದಿವೆ.'

ಒಂದು ಸಲ ನಿನ್ನ ಮನದಿನಿಯನನ್ನು ಕಣ್ತುಂಬ ನೋಡಿ ಮಾತನಾಡಿ ಬಂದಿರುವೆ. ನೀನೇ ಧನ್ಯಳು!' 'ಏಕೆ ನೀನಾದರೂ ಒಂದಸಲ ಕಾಣುವೆಯೇನು?'

'ಈಗ ಬೇಡ. ಭವಿತವ್ಯತೆ ನಿಶ್ಚಿತಸ್ವರೂಪವಿತ್ತಾಗ್ಗೆ—'

'ಅಹುದು ಸಖಿ, ಆ ವಿಷಯಕವಾಗಿ ಏನು ಮಾಡತಕ್ಕದು.'

'ನೋಡೋಣ, ಸಮಯ ಹೇಗೆ ಸಿಕ್ಕುತ್ತದೆಯೋ?'

## ೭ ಜ್ಯೋತಿಷ್ಕ.

ಲಗ್ನಕುಂಡಲಿಯನ್ನು ನೋಡಲು ಎಲ್ಲ ಗ್ರಹಗಳೂ ಅನುಕೂಲವೇ ಆಗಿರುವಂತೆ ಕಾಣುತ್ತವೆ ಲಾಭಸ್ಥಾನವಾದ ದಶಮದಲ್ಲಿ ಶುಕ್ರನಿರುವ ಮೂಲಕವೂ. ಆತನ ಮೇಲೆ ಗುರುವಿನ ಸಂಪೂರ್ಣದೃಷ್ಟಿಯಿರುವುದರಿಂದಲೂ. ಬುಧನು ಗುರು, ಶುಕ್ರ, ಚಂದ್ರರೊಡನೆ ತ್ರಿಕೋಣದಲ್ಲಿರುವ ಮೂಲಕವೂ, ರಾಶಿಸ್ವಾಮಿಯಾಗ ಶನಿಯು ನಿರ್ಬಲಸ್ಥಾನವನ್ನಾಶ್ರಯಿಸಿ, ರವಿಯೊಡನೆ ಕೂಡಿ ತೇಜೋಹೀನನಾಗಿರಲು .. ’

‘ಜ್ಯೋತಿಷಿಗಳೇ, ಹೆಣ್ಣುಮಕ್ಕಳಿಗೆ ಆ ಮಂಗಳ-ಬುಧರು ಎಲ್ಲಿದ್ದರೇನೆಂಬುದು ಹೇಗೆ ತಿಳಿಯಬೇಕು? ಆದ್ದರಿಂದ ನಮ್ಮ ಕಾರ್ಯ ಸುಲಭವಾಗಿ ಸಾಗುತ್ತದೆಯೋ ಹೇಗೆ? ಹೇಳಿಬಿಡಿರಿ’

‘ಶಶಿಲೇಖಾ ದೇವಿಯವರ . .’

‘ಹಾಂ, ನನ್ನ ಹೆಸರು ಹೇಗೆ ಗೊತ್ತಾಯಿತು?’

‘ಜ್ಯೋತಿಷಿಗಳಿಗೆ ಯಾವದು ತಾನೇ ಅಶಕ್ಯ? ಭೂತ, ವರ್ತಮಾನ, ಭವಿಷ್ಯತ್ತುಗಳನ್ನು ಚನ್ನಾಗಿ ತಿಳಿದು ಹೇಳಬಲ್ಲೆವು. ಒಂದು ಸಲ ನಾನು ಕರ್ನಾಟಕ ಸಾಮ್ರಾಜ್ಯಕ್ಕೆ ಹೋಗಿದ್ದೆನು . . . ....’

‘ಆಂ, ವಿಜಯನಗರ ಸಾಮ್ರಾಜ್ಯಕ್ಕೊ?’

‘ಅಹುದು. ಕನ್ನಡ ಸಮ್ರಾಟನ ಬಳಿಗೇನೇ ಹೋಗಿದ್ದೆನು.’

‘ಯಾವ ಸಮ್ರಾಟರು? ಈಗಿನವರೋ?....... ....’

‘ಅಹುದು ದೇವಿ. ನರಪತಿ ಶ್ರೀ ಕೃಷ್ಣದೇವರಾಯರು ಪಟ್ಟಕ್ಕೆ ಬಂದ ಪರಕ್ಷಣವೇ ಹೋಗಿದ್ದೆನು ಆಗ್ಗೆ ಅಲ್ಲಿ ನನ್ನ ಜ್ಯೋತಿಷ್ಯದ ಪರೀಕ್ಷೆಯೇ ನಡೆಯಿತು’ ‘ಅದೇಕೆ?’

‘ಯಾರಾದರೂ ಜ್ಯೋತಿಷ್ಯವನ್ನು ಒಮ್ಮೆಲೆ ನಂಬುವುದಿಲ್ಲ....’

‘ಪಂಚ ಭವತಿ ಪಂಚ ನ ಭವತಿ.’

‘ಅಲ್ಲ. ಅದು ಹಸಿ-ಬಿಸಿ ವೇದಾಂತಿಗಳ ವಿಷಯ. ಚನ್ನಾಗಿ ನುರಿತ ಜ್ಯೋತಿಷ್ಣನು ಕಿಂಚಿತ್ತಾದರೂ ಸಟೆಯಿಲ್ಲದಂತೆ ಹೇಳಬಲ್ಲನು.’

‘ಆಂ ನಿಜವೆ?’

‘ಅನುಭವವನ್ನೇ ಹೇಳುತ್ತೇನೆ, ನಾನೇನು ಹೇಳುತಲಿದ್ದೆನು?’

‘ಕರ್ನಾಟಕ ’

‘ಆಂ, ಅಹುದು, ಅಂದು ಮಹಾರಾಜರು ನನ್ನ ಪರಿಕ್ಷೆಗೇನೇ ಹಾಕಿದರು

'ಏನೆಂದು?'

'ನಾವೆಲ್ಲರೂ ಒಂದು ಕೋಣೆಯಲ್ಲಿ ಕುಳಿತಿದ್ದೆವು. ಆಗ್ಗೆ ಮಹಾರಾಜರು ತಾವು ಯಾವ ಬಾಗಿಲಿಂದ ಹೊರಹೋಗುವೆವೆಂಬದನ್ನು ಹೇಳುವಂತೆ ಕೇಳಿದರು. ಆ ಕೋಣೆಗೆ ನಾಲ್ಕು ಬಾಗಿಲುಗಳಿದ್ದುವು.' 'ಮುಂದೇನಾಯಿತು?'

'ನಾನು ಒಡನೆಯೇ ಕುಂಡಲಿ ಹಾಕಿದೆನು. ಚನ್ನಾಗಿ ಪರೀಕ್ಷಿಸಿ ಫಲಿತಾರ್ಥವನ್ನು ಕಂಡುಹಿಡಿದೆನು ' 'ಮುಂದೆ?'

'ಮಹಾರಾಜರು ಹೋಗುವ ದ್ವಾರವನ್ನು ನಾನರಿತಿರುವೆನು ' ಎಂದೆನು.

'ಮಹಾರಾಜರು ಅದೇನು' ಎಂದು ಕೇಳಿದರು. ಶಶಿ -'ನೀವೇನಂದಿರಿ?'

'ಇದನ್ನು ಬರೆದಿಡುವೆನು. ಮಹಾರಾಜರು ಆ ಮೇಲೆ ನೋಡತಕ್ಕದ್ದು. ಎಂದು ನಾನು ಹೇಳಲು, ಎಲ್ಲರೂ ಸಮ್ಮತಿಸಿದರು.' 'ಮುಂದೆ.'

'ನಾನು ಲಗ್ನಕುಂಡಲಿಯನ್ನು ಚನ್ನಾಗಿ ಪರೀಕ್ಷಿಸಿ ನನಗೆ ತಿಳಿದ ಪ್ರಕಾರ ಒಂದು ಕಾಗದದಲ್ಲಿ ಬರೆದು, ಅದನ್ನೊಂದು ಚೀಲದಲ್ಲಿ ಹಾಕಿ ಮುದ್ರೆ ಮಾಡಿ ಮಹಾರಾಜರ ಕರದಲ್ಲಿತ್ತೆನು.' 'ಮುಂದೆ?'

'ಮಹಾರಾಜರು ತಮ್ಮ ಮಂತ್ರಿಗಳೊಡನೆ ವಿಚಾರಿಸಿ, ಕಡೆಗೆ ಒಂದು ದ್ವಾರವನ್ನು ನಿರ್ಧರಿಸಿದರು.' 'ಯಾವುದು?'

'ಅವರು ನಾಲ್ಕೂ ಬಾಗಿಲುಗಳಿಂದಲೂ ಹಾಯಲಿಲ್ಲ.'

'ಆಂ, ಹಾಗಾದರೆ ಹೇಗೆ ಹೋದರು?'

'ಮೇಲಿನ ಗವಾಕ್ಷದಿಂದ.' 'ಆಂ, ಗವಾಕ್ಷದಿಂದಲೆ!'

'ಅಹುದು. ಏಣಿಯೊಂದನ್ನು ತರಿಸಿ, ಅದರಿಂದ ಹತ್ತಿ ಗವಾಕ್ಷದ ಗಜಗಳನ್ನು ತೆಗೆದು ಪಾರಾಗಿ ಹೋದರು.'

'ಭಾಪು! ಭಾಪು! ಅದು ಕನ್ನಡಿಗರ ಚತುರ ಮಂತ್ರಿಗಳಾದ ಅಪ್ಪಾಜಿಯವರ ಹಂಚಿಕೆಯೇ ಇರಬೇಕು. ಏಕೆ,ಜೋತಿಷಿಗಳೇ, ಆಗ್ಗೆ ನಿಮ್ಮ ಪಂಚಾಂಗ ನಾಗಾಲೋಟ ಓಡಿರಬಹುದಲ್ಲ!'

'ಹಾಗೆ ಓಡಿದ್ದರೆ ಅದಕ್ಕೆ ಜ್ಯೋತಿಷ್ಯವೆಂದೇಕೆ ಅನ್ನಬೇಕು?'

'ಅಂದರೆ?'

'ಮಹಾರಾಜರು ಇನ್ನೊಂದು ಸ್ಥಳಕ್ಕೆ ಹೋಗರು. ನಾವೆಲ್ಲರೂ ಅಲ್ಲಿಗೇನೇ ಹೋದೆವು. ಅಲ್ಲಿ ನಾನು ಬರೆದಿತ್ತ ಕಾಗದ ತೆಗೆದು ಓದಿದರು.'

'ಅದರಲ್ಲಿ ಏನೆಂದು ಬರೆದಿದ್ದಿರಿ?

'ಮೇಲಿನ ಗವಾಕ್ಷದಿಂದ, ಎಂದು ಬರೆದಿದ್ದೆನು.'

'ಆಂ ನಿಜವಾಗಿಯೂ '

'ಸ್ವತಃ ಮಹಾರಾಜರೇ ತಮ್ಮ ರಾಜಮುದ್ರೆ ಸಹಿತವಾದ ಈ ಮನ್ನಣೆ ಯೋಲೆ ಇತ್ತುದಲ್ಲದೆ, ನನಗೆ ಹೇರಳವಾಗಿ ಪಾರಿತೋಷಕವಿತ್ತರು. ಇಲ್ಲಿದೆ ನೋಡಿ ಅವರಿತ್ತ ಓಲೆ.' 'ಇದನ್ನು ಹೇಗೆ ತಿಳಿದಿರಿ?'

'ಅದು ಗ್ರಹ ಗತಿ; ಅದನ್ನೆಲ್ಲ ಹೇಳಿದರೆ ನಿಮಗೆ ತಿಳಿಯಲಿಕ್ಕಿಲ್ಲ.'

'ನಮಗದರ ಆವಶ್ಯವೂ ಇಲ್ಲ; ಆದರೆ ಈ ನನ್ನ ಪ್ರಶ್ನೆ '

'ಹಾಂ, ಅಹುದು, ಅದನ್ನೇ ಹೇಳುವೆನು ಮೊದಲು ಆ ನಿಮ್ಮ ಮನೋಭಿಲಾಷೆಯ ಬಗ್ಗೆ ಕುಂಡಲಿಯಿಂದ ತಿಳಿಯುವುದೇನೋ ನೋಡು ವೆನು. ಮೇಷ, ವೃಷಭ, ಮೀನ. ಹಾಂ, ಇದು ಪ್ರೇಮದ ವಿಷಯವಿರ ಬೇಕು. ಏಕೆ, ನಾನು ಹೇಳಿದುದು ಸುಳ್ಳೇ?'

'ತರುಣರನ್ನು ಕಾಣುತ್ತಲೇ ನೀವಿದನ್ನು ಮುಂಪೆ ಮಾಡುವಿರಿ?'

'ಹಾಂ, ಹಾಗೆನ್ನಬೇಡಿ ನಿಮಗೆ ಇಷ್ಟಕ್ಕೇನೇ ನಂಬುಗೆಯಾಗಲಿಕ್ಕಿಲ್ಲ. ಆ ಪ್ರೇಮಿಗಳ ನಾಮಗಳನ್ನೂ ಹೇಳಿಬಿಡುವೆ. ಅಂದರೆ ನಿಮಗೆ ನಂಬುಗೆ ಯಾಗುವುದೋ?' 'ಜ್ಯೋತಿಷ್ಯದಿಂದ ಹೆಸರುಗಳೂ ತಿಳಿಯುತ್ತವೇನು?'

'ಜ್ಯೋತಿಷ್ಯ, ರಮಲ, ಸಾಮುದ್ರಿಕಗಳೆಲ್ಲವುಗಳನ್ನೂ ನೋಡಿ ಹೇಳ ಬಲ್ಲೆನು.' 'ನಿಮಗೆ ಸಾಮುದ್ರಿಕವೂ ತಿಳಿಯುತ್ತದೆಯೆ?'

'ಒಂದನ್ನೊಂದು ಬಿಟ್ಟು ಇಲ್ಲವೇ ಇಲ್ಲ ಮೂರೂ ಒಂದಾಗ್ಗೇನೇ ಈ ಶಾಸ್ತ್ರ ಪರಿಪೂರ್ಣವಾದಂತಾಯಿತು. ಈ ಮೂರನ್ನೂ ಚನ್ನಾಗಿ ಅಭ್ಯಾಸ ಮಾಡಿರುವವನೇ ನಿಜವಾದ ಜ್ಯೋತಿಷ್ಕನು. ಅವನಿಂದ ತಪ್ಪುಗಳೆಂದೂ ಸಂಭವಿಸಲಾರವು. ಎಂತಹ ಸಂಗತಿಯನ್ನಾದರೂ ಹೇಳಬಲ್ಲನು.'

'ಈಗ ನಾನು ಕೇಳಿದುದನ್ನು ಹೇಳಿ, ನೋಡುವಾ?'

'ನೀವು ಕೇಳಿದುದು ಪ್ರೇಮದ ವಿಷಯ ಅಲ್ಲವೆ?'

'ಹಾಗಾದರೆ ರಾಜಪುತ್ರಿಯು ಯಾರಲ್ಲಿ ಅನುರಕ್ತಳಾಗಿರುವಳು ಹೇಳಿ ನೋಡುವಾ?'

'ಹೀಗೋ?, ಹಾಗೆಯೇ ಆಗಲಿ. ಅಶ್ವಿನಿ, ಭರಣಿ, ಕೃತ್ತಿಕಾ .. ಒಂದು, ಎರಡು. . ಮಿಥುನ, ವೃಶ್ಚಿಕ. ಹಾ ಅವರು ಉಚ್ಚಕುಲದವರಿರುವರು, ದಕ್ಷಿಣಭಾರತದಲ್ಲಿ ಒಂದು ವಿಶಾಲ ಸಾಮ್ರಾಜ್ಯದೊಡೆಯರು, ತರುಣರು, ಸುಂದರರು, ವಿದ್ವಾಂಸರು.' 'ಅವರ ಹೆಸರು?'

"ಅವರ ಹೆಸರೆ? ನಾರಾಯಣನ ದಶಾವತಾರಗಳಲ್ಲೊಂದು 'ಕ' ಅಕ್ಷರ ದಿಂದಾರಂಭವಾದುದು, 'ಕೂರ್ಮ' ಅಲ್ಲ; ಅಂತಹ ಹೆಸರು ಇರಲಿಕ್ಕಿಲ್ಲ. ಬಹುತರ 'ಕೃಷ್ಣ' ಎಂದಿರಬೇಕು ಏಕೆ ಶಶಿಲೇಖಾದೇವಿ?"

'ಒಳ್ಳೇದು. ಮುಂದೇನು?'

'ಮುಂದೇನು, ಎಂದು ಕೇಳಿದಿರಲ್ಲವೆ?' ಮುಂದೆ ತೊಂದರೆ ಬಹಳವಿರುವಂತೆ ತೋರುತ್ತದೆ. ರಾಜಪುತ್ರಿಯರ ಕರವನ್ನಷ್ಟು ತೋರಿಸುವಿರಾ?'

'ಹಾಗೆಯೇ ಆಗಲಿ. ರಾಜಪುತ್ರೀ, ಕೈ ಮುಂದೆ ಮಾಡು'

'ಇಕೊಳ್ಳಿ, ಇದೇ ವಿವಾಹರೇಖೆ.. ..ಹುಂ, ಇನ್ನು ನೀವು ಕೈ ತೆಗೆಯಬಹುದು. ಮತ್ತೆ ವಿವಾಹಯೋಗವೇನೋ ಸಮೀಪದಲ್ಲಿಯೇ ಇದ್ದಂತೆ ತೋರುತ್ತದೆ; ಆದರೆ ಕೊಂಚ ಕಂಟಕವೂ ಇರುವಂತೆ ಕಾಣುತ್ತದೆ.'

'ಕಂಟಕವೇನು?'

'ಲಗ್ನಸ್ವಾಮಿ ಮತ್ತು ರಾಶಿಗೃಹಸ್ವಾಮಿ ಇಬ್ಬರೂ ಒಬ್ಬರೊಬ್ಬರ ಮೇಲೆ ವಕ್ರಿಸಿರುವ ಮೂಲಕ ಒಬ್ಬರೊಬ್ಬರು ಸರಳವಾಗಿ ಕಾಣುವಂತೆ ತೋರುವುದಿಲ್ಲ.' 'ಅದರ ಫಲವೇನು?'

'ಅದರ ಪರಿಣಾಮವಾಗಿ ರಾಜಪುತ್ರಿಯ ವಿವಾಹಕಾರ್ಯವು ಸುಗಮವಾಗುವಂತಿಲ್ಲ. ಆವುದೋ ಒಂದು ದೊಡ್ಡ ಕಂಟಕ ಮನೆ ಮಾಡಿದೆ.'

'ಆ ಕಂಟಕವು ದೂರವಾಗಿ ವಿವಾಹ ಕಾರ್ಯ ಸುಗಮವಾಗುವುದೆ?'

'ಇದು ಒಂದೆರಡು ಹೊರಗಿನ ಬಲಗಳನ್ನವಲಂಬಿಸಿರುತ್ತದೆ'

'ಅದೇನು?' 'ಇದುವರೆಗಿನ ಸಂಗತಿ ನಿಜವೋ ಹೇಗೆ?'

'ಎಲ್ಲವೂ ನಿಜವೇ ಎಂದಿಟ್ಟುಕೊಳ್ಳಿ. ಮುಂದಿನ ವಿಷಯ ವಿವರಿಸಿರಿ.'

'ಹಾಗೆಯೇ ಆಗಲಿ. ಲಗ್ನಸ್ವಾಮಿ-ಗೃಹಸ್ವಾಮಿಯು ಮೇಲೆ ಮುನಿದಂತಿದೆ. ಆತನನ್ನು ಶಾಂತಗೊಳಿಸಲು ತಕ್ಕ ಉಪಾಯ ಕೈಕೊಳ್ಳಬೇಕಾಗಿದೆ. ಅಂದರೆ ಗೃಹಸ್ವಾಮಿ-ಲಗ್ನಸ್ವಾಮಿಗಳ ಮಧ್ಯೆ ಮೈತ್ರಿ ಬೆಳೆಯಿಸಲು ಹಲವು ಉಪಾಯಗಳನ್ನು ಬೇರೆಯವರು ಕೈಕೊಂಡು ಯತ್ನಿಸಿದರೆ ಮಾತ್ರ ಸಾಧ್ಯವಿರುವಂತೆ ತೋರುತ್ತದೆ. ಇದಕ್ಕೂ ಹೆಚ್ಚಿನ ವಿಷಯ ಏನೂ ಇಲ್ಲ.

'ಆ ಉಪಾಯಗಳೆಂತಹವು?'

'ಜಪ ತಪಾದಿಗಳಿರಬಹುದು; ಇಲ್ಲವೆ ಬಾಹ್ಯ ಕೆಲವು ಸಂಗತಿಗಳನ್ನವಲಂಬಿಸಿದ್ದರೂ ಇರಬಹುದು. ಆ ವಿಷಯ ನೀವೇ ತಿಳಿದು ನೋಡುವುದೊಳಿತು.' 'ನಿಮಗೆ ಹೇಳಲಿಕ್ಕೆ ಬರುವಂತಿಲ್ಲವೆ?'

'ಬರುವಂತಿಲ್ಲವೆನ್ನಲಿಕ್ಕಾದೀತೆ?' 'ಹಾಗಾದರೆ ಏಕೆ ಹೇಳುವುದಿಲ್ಲ?'

'ನೀವು ಸಂಪೂರ್ಣ ಸಂಗತಿ ವಿವರಿಸಿದರೆ ಮಾತ್ರ ನಾನು ಹೇಳುವೆನು.'

'ಸಂಪೂರ್ಣ ಸಂಗತಿಯೆಂದರೆ?'

'ರಾಜಪುತ್ರಿಯವರ ಪ್ರೇಮೀ ಪುರುಷನಾರು? ಎಂಬ ಸಂಗತಿ ತಿಳಿದರೆ,

ಆತನಿಗಿರುವ ಗ್ರಹಗಳ ಬಲಾಬಲಗಳು ತಿಳಿಯುವುವು. ಅಂದರೆ ಯಾವದು ಶಕ್ಯ, ಯಾವದು ಅಶಕ್ಯ ಮತ್ತು ಈ ವಿವಾಹವು ಜರುಗಲೇ ಬೇಕಾದರೆ ಕೈಕೊಳ್ಳತಕ್ಕ ಉಪಾಯಗಳಾವು? ಮುಂತಾದ ಸಂಗತಿಗಳ ವಿಷಯಕವಾಗಿ ಆಲೋಚಿಸಲು ಬರುವುದು.'

'ನಿಮ್ಮ ಜ್ಯೋತಿಷ್ಯದಿಂದಾಗಲಿ, ಸಾಮುದ್ರಿಕದಿಂದಾಗಲಿ ಇಲ್ಲವೆ ರಮಲಿನಿಂದಾಗಲಿ ಈ ಸಂಗತಿಯು ನಿಮಗೆ ತಿಳಿಯದೆ?'

'ನೀವೇನು ನನ್ನನ್ನು ಪರೀಕ್ಷಿಸಿಯೇ ಬಿಡಬೇಕೆನ್ನುವಿರಾ?'

'ಯಾರು, ನಾವೇ?' 'ಅಹುದು, ನೀವೇ.'

'ಕನ್ನಡ ದೊರೆಗಳಿಂದ ಮನ್ನಣೆ ಹೊಂದಿದ ನಿಮ್ಮನ್ನು ಪರೀಕ್ಷಿಸುವಷ್ಟು ಗಟ್ಟಿಗರು ನಾವಲ್ಲ.'

'ಒಳ್ಳೇದು. ನೀವೇನು ಕೇಳಿದಿರ?-ಹಾಂ, ಅಹುದು. ನಿಮ್ಮ ಎಲ್ಲ ಸಂಗತಿಯನ್ನೂ ನಾನು ಚಾ ಚು ತಪ್ಪದೆ ಹೇಳಬಲ್ಲೆನು; ಆದರೆ—'

'ಆದರೇನು, ಅದಕ್ಕೆ ವೆಚ್ಚ ಬಹಳ ಬರುವದೇನು?'

'ವೆಚ್ಚವೇನೂ ಬಹಳವಿಲ್ಲ' 'ಹಾಗಾದರಿನ್ನೇನು?'

'ವೇಳೆ ಬಹಳ ಬೇಕು?' 'ಒಂದು ದಿನ ಸಾಕಾಗಬಹುದೆ?'

'ಛೆ! ನಾಲ್ಕು ದಿನವಾದರೂ ಬೇಕು.'

'ಹಾಗಾದರೆ ನಾಲ್ಕುದಿನ ತಡೆದೇ ಹೇಳಿರಿ.'

'ಹಾಗಾದರೆ ನಿಮ್ಮಿಚ್ಛೆ. ನಾವೀಗ ಹೋಗುವೆವು.'

'ನಿಮ್ಮ ಸಂಭಾವನೆಯನ್ನು ಆ ಮೇಲೆಯೇ ಕೊಡುವೆವು.'

'ಹಾಗೆಯೇ ಮಾಡಿರಿ. ಮತ್ತೆ ನಾನು ಇದು ವರೆಗೂ ಹೇಳದಿದ್ದ ಒಂದು ವಿಷಯವಿದೆ.' 'ಅದೇನು?'

'ಶಶಿಲೇಖಾದೇವಿ, ನೀವಾದರೂ ರಾಜಪುತ್ರಿಯವರಂತೆ ಪ್ರೇಮಕ್ಕೊಳಗಾಗಿರುವಿರಿ; ಮತ್ತು ರಾಜಪುತ್ರಿಯವರ ಪ್ರೇಮವಿಜಯದ ಮೇಲೆಯೇ ನಿಮ್ಮ ಪ್ರೇಮವಿಜಯವೂ ಅವಲಂಬಿಸಿರುತ್ತದೆ.'

ಆ ಜ್ಯೋತಿಷಿ ಹೀಗೆ ಹೇಳುತ್ತಲೆ ಹೊರಟನು. ಶಶಿಲೇಖೆ ಬಾಗಿಲವರೆಗೆ ಬೀಳ್ಕೊಟ್ಟಳು.

'ಆ ಜ್ಯೋತಿಷಿಯ ಜ್ಯೋತಿಷ್ಯ ಶಬ್ದಶಃ ನಿಜವಿರುತ್ತದಲ್ಲವೆ?' ಶಶಿಲೇಖೆ ಮರುಳುತ್ತಲೇ ರಾಜಪುತ್ರಿಗೆ ಪ್ರಶ್ನೆಮಾಡಿದಳು.

'ಹೋಗುವ ಸಮಯದಲ್ಲಿ ಹೇಳಿದುದನ್ನು ಅವನು ಹೇಳದೇ ಹೋ-ಗಿದ್ದರೆ ಮಾತ್ರ ನಾನು ತೀರ ಸಟೆಯೆನ್ನುತ್ತಲಿದ್ದೆನು.'

'ಅದಿರಲಿ. ರಾಜಪುತ್ರಿ, ಅವನ ಜ್ಯೋತಿಷ್ಯದ ಬಗ್ಗೆ ನಿನ್ನ ಮತವೇನು?' ಶಶಿಲೇಖೆ ಪುನಃ ಪ್ರಶ್ನೆ ಮಾಡಿದಳು.

'ಎಲ್ಲವೂ ಸೂರ್ಯಪ್ರಕಾಶದಷ್ಟು ಸ್ವಚ್ಛವಿರಲು, ನನ್ನ ಮತವೇನು?' ಮತ್ತೆ ರಾಜಪುತ್ರಿ ಸಮ್ಮತಿಸೂಚಕಸ್ವರದಲ್ಲಿ ಉತ್ತರವಿತ್ತಳು.

ಇಬ್ಬರ ಮನದಲ್ಲಿ ಜ್ಯೋತಿಷಿಯ ಭವಿಷ್ಯ ನೆಟ್ಟುಹೋಗಿದ್ದಿತು. 'ವಿವಾಹ ನೆರವೇರಬಹುದು; ಆದರೆ ಒಂದೆರಡು ಕಂಟಕಗಳಿವೆ. ಆ ಕಂಟಕಗಳಾವು?' ಎಂಬ ಬಗ್ಗೆ ಅವರಿಗೆ ಸಂದೇಹವೇ ಇರಲಿಲ್ಲ. ವಿಜಯನಗರದಿಂದ ವಿಜಯುದ ಮೇಲೆ ವಿಜಯ ದೊರಕಿಸುತ್ತ ಕಲಿಂಗದ ವರೆಗೆ ದಂಡೆತ್ತಿ ಬಂದಿದ್ದನು. ಜೇತೃವಾದ ಶ್ರೀ ಕೃಷ್ಣದೇವರಾಯನೇ ಜಗನ್ಮೋಹಿನಿಯ ಪ್ರೇಮಪಾತ್ರ ಪುರುಷನಾಗಿದ್ದನು. ಇಷ್ಟು ತಾನೋ? ಸೋಲಿಸಲ್ಪಟ್ಟ ಕಲಿಂಗದೊರೆ ಪ್ರತಾಪರುದ್ರದೇವನ ಪುತ್ರಿ. ಸೋಲಿನ ಕಲಂಕದಿಂದ ಅಪಮಾನಿತನಾದ ಗಜಪತಿ ಆ ಸಂಬಂಧಕ್ಕೆ ಸಮ್ಮತಿಸುವುದು ಶಕ್ಯವೇ ಇರಲಿಲ್ಲ. ಇಂತಹ ಸಂದರ್ಭದಲ್ಲಿ ವಿವಾಹ ಸಂಭವಿಸುವುದೆಂತು? ತನ್ನ ಮನವನ್ನಪಹರಿಸಿದವನು ಕನ್ನಡ ಸಮ್ರಾಟನೆಂದು ಕೇಳುತ್ತಲೆ ಮೊದಲು ಆಕೆಗೆ ಅತ್ಯಾನಂದವಾಯಿತು ಅಂತಹ ಧೀರೋದಾತ್ತನೂ ಗುಣಗಣಮಂಡಿತನೂ, ಧೀಮಾನನೂ ಆದ ನರಶ್ರೇಷ್ಠನಲ್ಲಿ ತನ್ನ ಮನಸ್ಸು ನೆಟ್ಟುದಕ್ಕೆ ಆಕೆ ತನ್ನಾಮನವನ್ನು ಬಹಳವಾಗಿ ಅಭಿನಂದಿಸಿದಳು. ಕನ್ನಡ ದೊರೆ ತನಗೆ ಅನುರೂಪನಿರುವನೋ ಇಲ್ಲವೋ ಎಂಬ ಬಗ್ಗೆ ಶಂಕೆಯೇ ಇರಲಿಲ್ಲ. ತದ್ವಿರುದ್ಧವಾಗಿ ತಾನೇ ಆತನಿಗೆ ಪಾತ್ರಳಲ್ಲವೆಂಬ ಶಂಕೆ ಆಕೆಗೆ ಬಾಧಿಸಲಾರಂಭಿಸಿತು ಹೀಗ ತನ್ನಾ ಗುಣಗ್ರಾಹಕ ಮನವನ್ನು ಬಹಳವಾಗಿ ಹೊಗಳುತ್ತಿರಲು, ವಸ್ತುಸ್ಥಿತಿ ಕಣ್ಣೆದುರು ನಿಂತಿತು. ಒಡನೆಯೇ ಆಕೆಯ ಮುಖಕಮಲವು ಬತ್ತಿಹೋಯಿತು. ತನ್ನ ವಿವಾಹವು ಅಸಾಧ್ಯವೆಂದೇ ಆಕೆಗೆ ಹೆಚ್ಚು ಹೆಚ್ಚು ನಂಬುಗೆಯಾಗಹತ್ತಿತು ದಾರುಣವಾದ ವ್ಯಥೆಯಿಂದ ಆಕೆಯ ಹೃದಯ ತಳಮಳಸಹತ್ತಿತು ಭಾವೀ ಆಶಾಮಂದಿರಕ್ಕೆಲ್ಲ ಬೆಂಕಿ ಬಿದ್ದಂತಾಗಿ, ಬೂದಿಯ ರಾಶಿಯೇ ಕಣ್ಣಿನಲ್ಲಿ ಕಟ್ಟಿತು ನಿರಾಶೆಯಿಂದ ಬಳಲುವ ಆಕಗೆ ಒಂದೇ ಒಂದು ಆಶ್ರಯಸ್ಥಾನವೆಂದರೆ, ಶಶಿಲೇಖೆ ಪಾಪ! ಶಶಿಲೇಖೆಯಾದರೂ ಏನು ಮಾಡುವಳು? ತನ್ನ ಶಕ್ತಿಮೀರಿ ಯತ್ನಿಸಿ ಜಗನ್ಮೋಹಿನಿಯ ಪ್ರೇಮೀಪುರುಷನ ಗೊತ್ತುಹಚ್ಚಿದ್ದಳು.

ಹೀಗೆ ಅವರು ಸಂಕಟಕ್ಕೊಳಗಾಗಿರಲು, ದೇವದೂತನಂತೆ ಜೊಯಿಸನೋರ್ವನು ಅಲ್ಲಿಗೆ ಬಂದನು. ಸಿಷ್ಣಾತ ಜೊಯಿಸನೆಂಬದು ಅವನ ಮುಖದ

ಲಕ್ಷಣಗಳಿಂದಲೇ ತಿಳಿಯುವಂತಿದ್ದನು. ಮಾತಿನಲ್ಲಿ ಚತುರನಾದ ಆ ಜೊಯಿಸನು ಅವರಲ್ಲಿದ್ದ ಪರಕೀಯತ್ವದ ಭಾವನೆಗಳನ್ನು ಅಲ್ಪಾವಕಾಶ ದಲ್ಲಿಯೇ ಹೊಡೆದು ಹಾಕಿದನು. ಅವರಾ ಸಂಭಾಷಣೆ ಹಿಂದೆಯೇ ಬಂದಿದೆ. ಶಶಿಲೇಖೆಯೇನೋ ಗುಟ್ಟು ಕೊಡದೇನೇ ಮಾತನಾಡಿದಳು; ಆದರೆ ಜೊಯಿಸನು ಒಳ್ಳೇ ಚಾಣಾಕ್ಷನು. ಅವರ ಗುಟ್ಟನ್ನೆಲ್ಲ ಕಂಡು ಹಿಡಿದೇ ಬಿಟ್ಟನು. 'ರಾಜಪುತ್ರಿ, ಉಪಾಯಗಳೆಂತಹವಿರಬಹುದು?'

'ಅದನ್ನು ಹೇಗೆ ಹೇಳಬೇಕು?'

'ಗ್ರಹಶಾಂತಿ ಮಾಡಿಸಬೇಕಾದೀತೆ?'

'ಆತ ಹೇಳಿದುದನ್ನು ಕೇಳಿದೆಯಲ್ಲವೆ?' 'ಏನೆಂದು?'

'ಗೃಹಸ್ವಾಮಿ ಮತ್ತು ಲಗ್ನಸ್ವಾಮಿಗಳೀರ್ವರೂ ವಕ್ರಿಸಿರುವರೆಂದು'

'ಅದುದು. ಅದು ಸ್ಪಷ್ಟವೇ ಇದೆ. ಗೃಹಸ್ವಾಮಿಯೆಂದರೆ, ನಮ್ಮ ಮಹಾರಾಜರು; ಲಗ್ನಸ್ವಾಮಿಯೆಂದರೆ, ಕನ್ನಡ ದೊರೆಗಳು ಇಬ್ಬರೂ ಒಬ್ಬರೊಬ್ಬರ ಶತ್ರುಗಳಾಗಿರುವುದು ಸ್ವಾಭಾವಿಕವಿದೆ.'

'ಅಂತಹ ಶತ್ರುಗಳಲ್ಲಿ ಮೈತ್ರಿ ಸಂಭವಿಸಬಹುದೆ?'

'ಜೊಯಿಸನು ಹಾಗೆ ಹೇಳಿದನಲ್ಲವೆ?'

'ಪಂಚ ಭವತಿ ಪಂಚ ನ ಭವತಿ'

'ಎಲ್ಲ ಸಂಗತಿಗಳೂ ಸಂಭವಿಸಿ, ಪ್ರಾಮುಖ್ಯವಾದ ಇದೇ ಒಂದು ಸಂಭ ವಿಸದಿದ್ದರೆ ಅವನು ಹೇಳಿದುವೆಲ್ಲವೂ ನಿರರ್ಥಕವೇ ಸರಿ.'

'ಅಹುದು, ಅದೆಲ್ಲವೂ ನಿಜವೆ, ಆದರೆ ಸಂಭವಿಸುವುದು ಹೇಗೆ?'

'ಹೇಗಾದರೂ ಸರಿಯೇ'

'ಯುದ್ಧಕ್ಕೆ ಇಬ್ಬರೂ ಪ್ರವೃತ್ತರೇ ಆಗಿರುವರು. ಅತ್ತ ನರಪತಿಗಳು ದಂಡೆತ್ತಿ ಇಷ್ಟು ದೂರ ಬಂದವರು. ಅವರು ಯುದ್ಧವಿಲ್ಲದೆ ಹಿಂದಿರುಗುವುದು ತೀರಾ ಅಶಕ್ಯ. ಇನ್ನು ತಂದೆಯವರೋ? ಈ ಮೊದಲೇ ಯುದ್ಧದ ಪ್ರಸಕ್ತಿ ಯಿಲ್ಲದೆ ಇಬ್ಬರಲ್ಲಿಯೂ ಮೈತ್ರಿ ಬೆಳೆಯುವುದಿದ್ದರೆ ಆ ವಿಚಾರವೇ ಬೇರೆ; ಆದರೆ ಇಷ್ಟರಲ್ಲಿ ಭೀಕರ ಕಾಳಗವಾಗಿದೆ. ಅನೇಕ ಕಲಿಂಗ ಯುವಕರು ಮಾತೃ ಭೂಮಿಗಾಗಿ ಪ್ರಾಣಾರ್ಪಣ ಮಾಡಿರುವರು. ಆದರೂ ಸೋಲು ಬಂದಿರು ವುದು. ಸೋಲಿನ ಕಲಂಕದಿಂದ ಕಪ್ಪಾದ ಮುಖದಿಂದ ತಂದೆಯವರು ಮೈತ್ರಿಗೆಂದು ಹೇಗೆ ಮುಂದಾಗುವರು? ಈ ಸನ್ನಿವೇಶದಲ್ಲಿ ಮೈತ್ರಿ ಅಶಕ್ಯವೇ ಸರಿ.' 'ಅಂತೆಯೇ ಆ ಜೊಯಿಸ ಹೇಳಿದನು.' 'ಏನೆಂದು?'

'ಒಂದೆರಡು ಉಪಾಯಗಳು ಅವಶ್ಯವಾಗಿವೆಯೆಂದು.'

'ಇದರಲ್ಲಿ ನಮ್ಮ ಯಾವ ಉಪಾಯ ನಾಟುವಂತಿವೆ?'

'ಅದನ್ನು ಈಗಲೇ ಹೇಗೆ ಹೇಳಬೇಕು?' 'ಮತ್ತಾವಾಗ ಹೇಳುವೆ?'

'ಹಲವು ಸಂಗತಿಗಳನ್ನು ಸಮಾಲೋಚಿಸಬೇಕಾಗಿದೆ.'

'ನೀನೂ ಒಳ್ಳೇ ರಾಜಕಾರಣಿಯಾಗುತ್ತಲಿರುವೆ.'

'ಪ್ರೇಮವಿಷಯವೇನು ಚಿಕ್ಕ ಪುಟ್ಟ ರಾಜಕಾರಣವಿಲ್ಲ. ಈ ಪ್ರೇಮದ ಸಲುವಾಗಿಯೇ ಅನೇಕ ಸುಸಂಪನ್ನ ರಾಷ್ಟ್ರಗಳು ನಾಮಶೇಷವಾಗಿ ಹೋ-ದುವು. ಈ ಪ್ರೇಮವೆಂದರೇನು ಅಂತಿಂತಹ ಸಂಗತಿಯಲ್ಲ ..'

'ಹಾಂ ಹಾಂ, ನಿನ್ನಾ ಉದ್ದವಾದ ಭಾಷಣ ಕೇಳಲು ನನ್ನ ಮನಸ್ಸು ಸ್ವಸ್ಥವಿಲ್ಲ.' 'ಸ್ವಸ್ಥವಿಲ್ಲವಲ್ಲ; ಸ್ಥಳವಿಲ್ಲ.' 'ಅಂದರೆ?'

'ಅಂದರೇನು? ನರಪತಿಯು ಸಂಪೂರ್ಣವಾಗಿ ಆಕ್ರಮಿಸಿ ಕುಳಿತಿರಲು, ಅನ್ಯವಿಷಯಕ್ಕವಕಾಶವೆಲ್ಲಿಯದು?'

'ಏನಾದರೂ ಆಗಲಿ. ಈಗ ಮಾತ್ರ ನಿನ್ನ ಉದ್ದವಾದ ಭಾಷಣಗಳ ನ್ನಾರಂಭಿಸುವುದು ಬೇಡ.' 'ಹಾಗಾದರೆ ಈಗೇನು ಮಾಡಬೇಕೆನ್ನುವೆ?'

'ನನಗೆ ಕೆಲವು ಕೆಲಸಗಳಿವೆ.' 'ಅವೇನು?' 'ಆ ಮೇಲೆ ಹೇಳುವೆನು.'

ಅವರೀರ್ವರಲ್ಲಿ ಹೀಗೆ ಭಾಷಣ ನಡೆದಿರಲು, ಆ ಜೊಯಿಸನು ಗಜ ಪತಿ ಕುಳಿತಲ್ಲಿಗೆ ಬಂದನು. ಗಜಪತಿಯು ತನ್ನ ಅಮಾತ್ಯ ದಾಮೋದರ ಶರ್ಮರೊಡನೆ ಆಲೋಚಿಸುತ್ತ ಕುಳಿತಿದ್ದನು.

ಜೊಯಿಸರು, ದಾಸರು, ಭವಿಷ್ಯವಾದಿಗಳು ಇವರಿಗೆ ಎಲ್ಲೆಲ್ಲಿಯೂ ತಡೆ ಯೇ ಇರುವುದಿಲ್ಲ. ಅದರಲ್ಲಿಯೂ ಭವ್ಯವಾಗಿ ವೇಷಧರಿಸಿ, ನಾಮ-ಮುದ್ರೆ ಗಳೊಡನೆ ಮುಂಬಂದರಾಯಿತು. 'ಹ್ಞ-ಹ್ಞ ರಾಯರೇ.... .' ಎಂಬ ದೇಶಾ ವರಿ ನಗೆಯಿಂದ ಕಚೇರಿ-ಕಟ್ಟೆಗಳಲ್ಲೆಲ್ಲ ಪ್ರವೇಶ ಮಾಡುತ್ತಾರೆ. ಎಂತೆಂ ತಹ ಸುಶೀಕ್ಷಿತರು ಕೂಡ ಇಂತಹರಲ್ಲಿ ಭಕ್ತಿ-ವಿಶ್ವಾಸಗಳಿಲ್ಲದಿದ್ದರೂ ತಮ್ಮ ತಮ್ಮ ಭವಿಷ್ಯವೇನಿದೆಯೋ? ಎಂಬ ಉಪಲಪಿಕೆಯಿಂದ ಮುಂದೊರವುದುಂಟು. ಸಾಮುದ್ರಿಕ ಬಲ್ಲವರಿಗೆ ಕೈತೋರುವುದುಂಟು. ಇನ್ನು ಆಗಿನ ಕಾಲದಲ್ಲಿ ಯಂತೂ ಬ್ರಾಹ್ಮಣರಿಗೆ ಎಲ್ಲೆಲ್ಲಿಯೂ ಮುಕ್ತದ್ವಾರ. ಎಲ್ಲರೂ ವಂದನೆ ಗಳಿಂದ ದಾರಿ ಕೊಡುವವರೇ. ಆ ಜೊಯಿಸನಾದರೂ ಎಲ್ಲಿಯೂ ತಡೆ ಯಿಲ್ಲದೆ ನೇರವಾಗಿ ಗಜಪತಿ ಕುಳಿತಲ್ಲಿಗೆ ಬಂದು:—'ಕಲಿಂಗ ರಾಜನಿಗೆ ಕಲ್ಯಾಣವಾಗಲಿ' ಎಂದು ಹರಸಿದನು.

ಬ್ರಾಹ್ಮಣನನ್ನು ಕಾಣುತ್ತಲೆ ಅರಸು-ಮಂತ್ರಿಗಳೀರ್ವರೂ ಭಕ್ತಿಯಿಂದ ವಂದಿಸಿ, ಉಚ್ಚಾಸನವಿತ್ತರು. ಎಲ್ಲರೂ ಕುಳಿತ ಕೂಡಲೆ ಆ ಜೊಯಿಸನು:

'ಕಲಿಂಗರಾಜರ ಮುಖವು ಕಂದಿದಂತಿದೆ. ಚಿಂತೆಯಲ್ಲಿರುವಂತೆ ತೋರುತ್ತದೆ' ಅಂದನು.

'ಬ್ರಾಹ್ಮಣರೇ, ಕಲಿಂಗಕ್ಕೆ ಕೊನೆಯಿಲ್ಲದ ಕಂಟಕ ಬಂದೊದಗಿದೆ.'

'ಅಹುದು, ಕೇಳಿರುವೆನು, ಆದರೆ ಮಹಾರಾಜರು ಇಷ್ಟರಿಂದ ಹತಾಶರಾಗಲು ಕಾರಣವೇನೂ ಇದ್ದಂತಿಲ್ಲ'

'ಕಾರಣವಿಲ್ಲವೆಂದರೇನು ಸ್ವಾಮಿ? ನಮ್ಮಲ್ಲುಳಿದ ಅಲ್ಪಸ್ವಲ್ಪ ಬಲವೂ ಕರ್ನಾಟಕದರಸಿನೆದುರು ತಡೆಯುವಂತಿಲ್ಲ. ಕಲಿಂಗವು ಸ್ವಾತಂತ್ರ್ಯ ಜ್ಯೋತಿ ವಿಹೀನವಾಗಿ ಪಾರತಂತ್ರ್ಯ ಕತ್ತಲೆಯಲ್ಲಿಯೇ ಕಾಲಕಳೆಯಬೇಕಾಗುವುದಲ್ಲದೆ ಇನ್ನೇನಿಲ್ಲ.'

'ಛೀ! ಮಹಾರಾಜರೆ, ಕಲಿಂಗಕ್ಕೆ ಅಂತಹ ಹೀನ ಸ್ಥಿತಿಯೇನೂ ಬರುವಂತೆ ತೋರುವುದಿಲ್ಲ' 'ಹೇಗೆ ಹೇಳುವಿರಿ?'

'ಮಹಾರಾಜರ ಕುಂಡಲಿಯ ಮೇಲಿಂದ?'

'ನೀವು ಜ್ಯೋತಿಷ್ಯ ಹೇಳುವಿರೊ?'

'ಅಹುದು. ಚನ್ನಾಗಿ ಹೇಳಬಲ್ಲೆ.'

'ಹಾಗಾದರೆ ಲಗ್ನಕುಂಡಲಿ ಹಾಕಿ ನೋಡುವಾ.'

'ಹಾಗೆಯೇ ಆಗಲಿ. ಮೇಷ, ವೃಷಭ. .. .ಹಾಂ, ದಶಮಸ್ಥಾನದಲ್ಲಿ ಬುಧನಿರುವನು; ಆದರೆ ಶನಿಯದೃಷ್ಟಿ ಅವನ ಮೇಲೆ ಬಿದ್ದಿದೆ.'

'ಅಂದರೇನು?'

'ಪರಿಣಾಮವು ಕೊಂಚ ಕಂಟಕಮಯವೇ ಆಗಿದೆ.' 'ಅಂದರೆ?'

'ಯುದ್ಧದಲ್ಲಿ ಕಲಿಂಗರಾಜರಿಗೆ ವಿಜಯ ಸಿಕ್ಕುವ ಲಕ್ಷಣವಿಲ್ಲ.'

'ಅದನ್ನು ಬೇರೆಯಾಗಿ ಹೇಳಬೇಕಿಲ್ಲ. ನಾವೆಲ್ಲ ಪೂರ್ಣವಾಗರಿತಿರುವೆವು. ಆ ಮುಂದಿರುವ ಕಲಿಂಗದ ಸ್ಥಿತಿಯನ್ನು ಕೇಳಬೇಕಾಗಿದೆ'

'ಶನಿಯದೃಷ್ಟಿ ಲಾಭಸ್ಥಾನದಲ್ಲಿರುವುದು ದಿಟವು; ಆದರೂ ಆ ಬುಧನು ಶುಭಯುಕ್ತನಾದ ಪೂರ್ಣ ಚಂದ್ರನೊಡನೆ ಕೂಡಿರುವ ಮೂಲಕ ಕೊನೆಗೆ ಕಲಿಂಗಕ್ಕೆ ಒಳಿತೇ ಆಗುವುದು.' 'ಒಳಿತೆಂದರೇನು?'

'ಬಹುಶಃ ಕಲಿಂಗ-ಕರ್ನಾಟಕಗಳಲ್ಲಿ ಮೈತ್ರಿ ಬೆಳೆಯಬಹುದು'

'ಏನು, ಮೈತ್ರಿಯೆ?'

'ಅಹುದು. ಲಗ್ನದಿಂದ ಹಾಗೆ ಹೊರಡುತ್ತಿದೆ.'

'ಮಂತ್ರಿಗಳೇ, ಈ ಬ್ರಾಹ್ಮಣರ ಸಂಭಾವನೆಯ ವ್ಯವಸ್ಥೆ ಮಾಡಿರಿ.'

ಮಂತ್ರಿ ಬ್ರಾಹ್ಮಣನೊಡಗೊಂಡು ಹೊರಟು ಹೋದನು. ಗಜಪತಿಯು

ವಿಚಾರದಲ್ಲಿ ಮುಳುಗಿದನು. ಆ ಬ್ರಾಹ್ಮಣನಿಗೆ ತೋರಿಸಿದಷ್ಟು ಬಲಹೀನನು ಅವನಿರಲಿಲ್ಲ; ಇನ್ನೂ ಬಲವು ಅವನಲ್ಲಿದ್ದಿತು. ಆ ಬಲವನ್ನೆಲ್ಲ ಒಂದುಗೂಡಿಸುವ ಕಾರ್ಯಕ್ಕೇನೇ ಅವನು ತೊಡಗಿದ್ದನು. ಗೆಲುವಿನ ಬಗ್ಗೆ ಅವನಿಗೆ ಸಂದೇಹವಿದ್ದರೂ ಸೋಲೇ ದೊರೆಯುವುದೆಂಬ ನಿಶ್ಚಿತ ಪರಿಣಾಮ ಆತನಿಗೆ ತಿಳಿದಿರಲಿಲ್ಲ. ಗೆಲುವು ದೊರೆಯಬಹುದೆಂಬ ಆಶೆಯೂ ಅವನಲ್ಲಿದ್ದಿತು. ಇಂತಹ ಸಮಯದಲ್ಲಿ ಕಲಿಂಗಕ್ಕೆ ಗೆಲವು ದೊರೆಯುವ ಲಕ್ಷಣವಿಲ್ಲ, ಎಂದು ಜೊಯಿಸನು ಹೇಳಿದುದು ಅವನಿಗೆ ಬಹಳ ವ್ಯಥೆಯನ್ನುಂಟು ಮಾಡಿತು. ಮತ್ತೆ ಮೈತ್ರಿಯ ಸಂಗತಿ ಕೇಳಿಯಂತೂ ಅವನಿಗೆ ಆಶ್ಚರ್ಯವೇ ಅನಿಸಿತು. ಅರಸು ಹೀಗೆ ವಿಚಾರಕ್ಕೊಳಗಾಗಿರುವಾಗಲೇ ಬ್ರಾಹ್ಮಣನನ್ನು ಕಳುಹಿ ಮಂತ್ರಿ ತಿರುಗಿ ಬಂದನು.

'ಮಂತ್ರಿಗಳೇ, ಮೈತ್ರಿ ಸಾಧ್ಯವಿದೆಯೆ?''

'ಮೈತ್ರಿಯ ಸಮಯ ಹಿಂದಾಯಿತು ಮೈತ್ರಿಗೆ ಅವಕಾಶ ಈ ಮೊದಲೇ ಇದ್ದಿತು; ಆದರೆ ಒಂದೆರಡು ಕಾಳಗಗಳಲ್ಲಿ ಗೆಲವು ಪಡೆದ ಯಾವ ರಾಜನೂ ಸೋತವರೊಡನೆ ಸಮಾನರಂತೆ ಸಂಧಿಗೆ ಸಮ್ಮತಿಸಲಾರನು ಇನ್ನು ನಾವು ನಮ್ಮ ಮಾನ-ಮನ್ನಣೆಗಳನ್ನೆಲ್ಲ ಮರೆತು ಸಂಧಿಗೆಂದು ಮುಂದಾಗಬೇಕು.'

'ಛೆ! ಅಂತಹ ಅಪಮಾನಕಾರಕವಾದ ಸಂಧಿಗೆ ನಾನೆಂದೂ ಸಮ್ಮತಿಸಲಾರೆನು ಕಲಿಂಗವೆಲ್ಲವು ನಿರ್ನಾಮವಾದರೂ ಚಿಂತೆಯಿಲ್ಲ, ಆದರೆ ಅಪಮಾನ ಹೊಂದಿ ಬಾಳುವುದು ಎಷ್ಟು ಮಾತ್ರಕ್ಕೂ ಬೇಡ.'

'ಅಹುದು ದೊರೆಗಳೇ, ನಾನದನ್ನು ಬಲ್ಲೆ. ಇಂತಹ ಸನ್ನಿವೇಶದಲ್ಲಿ ಮೈತ್ರಿಗೆ ಅವಕಾಶವೇ ಇಲ್ಲ.'

'ಆ ಜೋಯಿಸನು ಧೂರ್ತನಿರಬಹುದೆ? ಇಲ್ಲವೆ ಶತ್ರುಪಕ್ಷದವನಾವನಾದರೂ ಗುಪ್ತಹೇರನಿರಬಹುದೆ?'

'ನಾನಾದರೂ ಆ ವಿಷಯಕವಾಗಿ ಬಹಳ ಸಂದೇಹಿಸಿ ಸೂಕ್ಷ್ಮವಾಗಿ ಪರೀಕ್ಷಿಸಿದೆನು; ಆದರೆ ಎಷ್ಟು ಮಾತ್ರಕ್ಕೂ ಅವನು ಶತ್ರುವಿರಲಾರನೆಂದು ತೋರುತ್ತದೆ.' 'ದೊರೆಗಳೇ ಮಹಾಪಾತ್ರರಿಂದ ಪ್ರತ್ರಗಳು ಬಂದಿವೆ.'

'ಯಾರು-ಯಾರು ಏನೆಂದು ಬರೆದಿರುವರು?"

'ಗೊತ್ತು ಮಾಡಿದ ವೇಳೆಗೆ ಬಂದು ದೊರೆಗಳನ್ನು ಕಾಣುವಂತೆ ಸಮ್ಮತಿಸಿರುತ್ತಾರೆ'

'ಹಾಗಾದರೆ ಅವರ ಸ್ವಾಗತ ಸಿದ್ಧತೆಯಲ್ಲಿ ತೊಡಗಿರಿ. ಆ ಎಲ್ಲರ ಬಲದ ಮೇಲೆಯೇ ನಮ್ಮ ಸೋಲು-ಗೆಲುವುಗಳು ಅವಲಂಬಿಸಿರುತ್ತವೆ.'

'ಬಹುತರ ಎಲ್ಲ ಸಿದ್ಧತೆಯೂ ಮುಗಿದಂತೆಯೇ ಆಗಿದೆ ಅವರವರ ಬಿಡಾರಗಳು ಸಭಾಗೃಹಗಳು ಮುಂತಾದವುಗಳೆಲ್ಲವೂ ಸಿದ್ಧವೇ ಆಗಿರುತ್ತವೆ.'

'ಹಾಗಾದರೆ ಒಳಿತೇ ಆಯಿತು.'

ಗಜಪತಿಯ ಮುಖ್ಯ ಆಶೆಯೆಂದರೆ ಮಹಾಪಾತ್ರರು. ಅವರು ಆತನ ಮಾಂಡಲಿಕ ಅರಸರು. ಅವರ ಬಲವೂ ಚೆನ್ನಾಗಿಯೇ ಇದ್ದಿತು. ಆ ಎಲ್ಲರ ಬಲವನ್ನೊಟ್ಟುಗೂಡಿಸಿದರೆ ಹತ್ತು-ಹನ್ನೆರಡು ಲಕ್ಷ ಬಲವಾಗುವಂತಿದ್ದಿತು. ಅವರ ಸಹಾಯ ಮೊದಲೇ ಸ್ವೀಕರಿಸಿದ್ದರೆ ಗಜಪತಿಯು ಗೆಲ್ಲಬಹುದೆಂಬ ಆಶಾಂಕುರವಿದ್ದಿತು. ಆದರೆ ತನ್ನ ಬಲದ ಮೇಲೆಯೇ ವಿಶೇಷವಾಗಿ ನಂಬುಗೆ ಯಿದ್ದಮೂಲಕ ಅವನವರನ್ನು ಕರೆಯಿಸಿರಲಿಲ್ಲ; ಆದರೆ ಈಗ ಅಂತಹ ಸಮಯವೇ ಪ್ರಾಪ್ತವಾಗಿದ್ದಿತು. ಅವರೆಲ್ಲರ ಸಹಾಯದಿಂದ ಉಳಿದ ಬಲವನ್ನು ಬಲಪಡಿಸಿ, ಒಮ್ಮುಖದಿಂದ ನರಪತಿಯನ್ನು ಮುತ್ತತಕ್ಕುದೆಂದು ಯೋಚಿಸಿದ್ದನು. ಅಂತೆಯೇ ತನ್ನಾ ಮಹಾಪಾತ್ರರ ಸಭೆಯನ್ನೇರ್ಪಡಿಸಿದ್ದನು. ಬಹಳ ಆಶೆಯಿಂದ ಸ್ವಾಗತದ ಸಿದ್ಧತೆಗೆ ತೊಡಗಿದನು.

## ಶತ್ರುಗೃಹದಲ್ಲಿ.

ಪ್ರೊಟ್ಟನೂರ ಬಹಿರ್ಭಾಗದ ಗಿಡಗಳ ಗುಂಪು. ಮಧ್ಯಾಹ್ನದ ಸಮಯವಾದರೂ ದಟ್ಟವಾದ ನೆರಳಿನಿಂದ ಬಹಳ ತಂಪಾಗಿದ್ದಿತು. ಆ ನೆಳಲಿನಲ್ಲಿ ವಿಜಯನಗರದ ವೀರಸೇನಾಪತಿ ಮತ್ತು ಚತುರ ಮಂತ್ರಿಗಳು ಕಲೆತಿದ್ದರು.

'ಅಪ್ಪಾಜಿಯವರೇ, ಒಟ್ಟಿನಲ್ಲಿ ಅವರ ಗುಟ್ಟನ್ನೇ ಕಂಡುಹಿಡಿದಿರಿ.'

'ಇನ್ನೂ ಪೂರ್ಣ ದೊರೆತಿಲ್ಲ. ತಕ್ಕ ಮಟ್ಟಿಗೆ ಸಿಕ್ಕಿದೆ. ಉಳಿದುದನ್ನಾದರೂ ಅರಿತು ಬರುವುದರಲ್ಲಿ ಸಂದೇಹವಿಲ್ಲ.'

'ನಿಮ್ಮನ್ನು ಯಾರೂ ಗುರುತಿಸಲಿಲ್ಲವೆ?'

'ಛಿ, ಎಲ್ಲಿಯದು? ಕಿಂಚಿತ್ತಾದರೂ ಸಂಶಯ ತೋರಲಿಲ್ಲ.'

'ಯಾರೂ ಪರೀಕ್ಷಿಸಲಿಲ್ಲವೆ?'

'ಪರೀಕ್ಷಿಸದೇನು? ಜೊಯಿಸರನ್ನೂ ಭವಿಷ್ಯವಾದಿಗಳನ್ನೂ ಕಂಡರೆ, ಪರೀಕ್ಷಿಸದೆ ಯಾರೂ ಬಿಡುವುದಿಲ್ಲ; ಆದರೆ ಅವರು ಸತ್ಯಾಸತ್ಯಗಳನ್ನು ಹೇಗೆ ತಿಳಿಯುವರು? ಭೂತ-ವರ್ತಮಾನಗಳನ್ನು ಇದ್ದಕ್ಕಿದ್ದಂತೆ ಹೇಳಿದರಾಯಿತು. ಅಷ್ಟು ನನಗೆ ಮೊದಲೇ ತಿಳಿದಿತ್ತು. ಅದನ್ನೇ ಜ್ಯೋತಿಷ್ಯದ ರೂಪದಿಂದಿಡಲು, ರಾಜಪುತ್ರಿಯೂ ಮತ್ತುಆಕೆಯ ಗೆಳತಿ ಶಶಿಲೇಖೆಯೂ ಪೂರ್ಣ ನಂಬಿಧರು.'

'ಭಾವೀ ರೂಪರೇಷೆಯನ್ನು ಹೇಗೆ ಹಾಕಿರುವಿರಿ?'

'ಯುದ್ಧದಲ್ಲಿ ಕಲಿಂಗರಾಜ ಸೋಲುವನೆಂದೂ ಮತ್ತು ಆದರಿಂದ ಕಲಿಂಗವು ನಷ್ಟವಾಗದೆ, ಕಲಿಂಗ-ಕರ್ನಾಟಕಗಳಲ್ಲಿ ಐಕ್ಯವು ನೆಲೆಗೊಳ್ಳುವುದೆಂದೂ ಹೇಳಿರುವೆನು.' 'ಅವರು ನಂಬಿದರೆ?'

'ಆ ಕುಮಾರಿಯರೀರ್ವರೂ ನಂಬಿರುವರು. ಹಾಗೆಯೇ ಗಜಪತಿಗೂ ಈ ಸಂಗತಿಯನ್ನರುಹಿರುವೆನು. ಆದರಾತನು ನನ್ನ ಬಗ್ಗೆ ಸಂಶಯ ವ್ಯಕ್ತ ಮಾಡುತ್ತಿರುವಂತೆ ತೋರಿತು. ಆ ಅರಸು-ಮಂತ್ರಿಗಳೀರ್ವರೂ ಶೋಧಕ ದೃಷ್ಟಿಯಿಂದ ಸೂಕ್ಷ್ಮವಾಗಿ ನಿರೀಕ್ಷಿಸಿದರು.'

'ಅವರ ಬಲ ಹೇಗಿದೆಯೆಂದು ತೋರಿತು?'

" 'ನಾನು ಕಲಿಂಗವು ಸೋಲುವುದೆ'ಂದು ಹೇಳುತ್ತಲೇ ಅದಕ್ಕೆ ಕಲಿಂಗರಾಜ ಸಮ್ಮತಿಸಿದನು; ಆದರೆ ಅಷ್ಟರಿಂದಲೇ ಕಲಿಂಗರಾಜನು ಬಲಹೀನನಾಗಿರುವನೆಂದು ನಂಬಲು ಬರಲಾಗದು. ಸದ್ಯ ಅವರಾ ಬಲವನ್ನೊಟ್ಟುಗೂಡಿಸುವುದರಲ್ಲಿಯೇ ತೊಡಗಿರುತ್ತಾರೆ, ಆದರ ನಿಜವನ್ನರಿಯಲು ನಾನೀಗ ಮರಳಿ ಹೋಗಲೇಬೇಕಾಗಿದೆ."

'ಹಾಗೆಯೇ ಮಾಡಿರಿ; ಆದರೆ ಜಾಗ್ರತೆಯಿಂದಿರತಕ್ಕದು.'

'ನಾನೇನೋ ಜಾಗರೂಕನಾಗಿಯೇ ಇರುತ್ತೇನೆ. ಕೊಂಚ ಹೆಚ್ಚು ಕಡಿಮೆಯಾದರೂ ನನಗೆ ಮರಣದಂಡನೆಯನ್ನೆಂದೂ ವಿಧಿಸಲಾರನಲ್ಲವೆ?'

ಛೆ, ತ್ರಿಕಾಲಕ್ಕೂ ಸಾಧ್ಯವಿಲ್ಲ. ಆತನೇನೂ ಅಷ್ಟು ಮೂರ್ಖನಲ್ಲ. ಒಂದು ವೇಳೆ ಅಕೃತ್ಯವೇನಾದರೂ, ಸಂಭವಿಸಿದರೆ ಆದರಿಂದ ಕನ್ನಡಿಗರು ತ್ವೇಷಗೊಂಡು ಕಲಿಂಗವನ್ನೆಲ್ಲ ನಿರ್ನಾಮಮಾಡದಿರಲಾರರೆಂಬದನ್ನು ಆತನೆಂದೂ ಮರೆಯನು. ಆದರೂ ನೀವು ಜಾಗ್ರತೆಯಿಂದಲೇ ವರ್ತಿಸಬೇಕು. ಏಕೆಂದರೆ, ನಾವು ಕಲಿಂಗ-ಕರ್ನಾಟಕಗಳ ನಡುವೆ ಬರಿಯ ಮೈತ್ರಿಯಲ್ಲ, ಸಂಬಂಧವನ್ನೇ ಬೆಳೆಯಿಸಬೇಕಾಗಿದೆ. ಆ ದೃಷ್ಟಿಯಿಂದಲೇ ಕಾರ್ಯ ಕೈಗೂಡಿಸಬೇಕು.'

'ಅಹುದು; ಸೇನಾಪತಿಗಳೇ ನಾನದನ್ನು ಮರೆತಿಲ್ಲ. ಇಷ್ಟೇ ಅಲ್ಲ, ಆ ದಿಸೆಯಲ್ಲಿಯೇ ಕಾರ್ಯಸಾಧನೆ ಮಾಡುತ್ತಲಿರುವೆನು.'

'ನಾನು ನಿಮಗೆ ಹೇಳಬೇಕೆಂದೇನೂ ಇಲ್ಲ; ಆದರೂ ನೀವು ಆದಷ್ಟು ಬೇಗನೆ ಮತ್ತು ಶಕ್ಯವಿದ್ದಷ್ಟು ಒಳ್ಳೇ ರೀತಿಯಿಂದ ಕಾರ್ಯಸಾಧನೆ ಮಾಡಿಕೊಂಡು ಬನ್ನಿ. ಆದರಿಂದಲೇ ನಮಗೆ ನಿಮ್ಮ ಕಾರ್ಯಕ್ರಮ ರಚಿಸಲನುವಾಗುವದು.'

ಮಂತ್ರಿ-ಸೇನಾಧೀಶರೀರ್ವರೂ ಹೀಗೆ ಸಂಭಾಷಿಸಿ ಅಲ್ಲಿಂದ ಹೊರ ಬಿದ್ದರು. ಸೇನಾಪತಿ ರಾಮಲಿಂಗನು ಕನ್ನಡ ಸೈನ್ಯ ರಾಜ್ಯದತ್ತ ಹೊರಟನು. ಅಪ್ಪಾಜಿ ಜೊಯಿಸನ ವೇಷದಲ್ಲಿ ಹೊರಟನು. ವೃದ್ಧಾಪ್ಯವನ್ನು ಸಮೀಪಿಸುತ್ತಲಿದ್ದ ಅಪ್ಪಾಜಿಗೆ ಜೊಯಿಸನ ವೇಷ ಬಹು ಚನ್ನಾಗಿ ಸಾಧಿಸಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲಲ್ಲ, ಮುದ್ರೆ-ನಾಮಗಳು, ಉತ್ತರಹಿಂದುಸ್ಥಾನದವರಿಗೊಪ್ಪುವಂತಹ ಉಡುಪು, ಉಡುಪಿಗೆ ತಕ್ಕ ಮಾತುಗಳು ಅವನು ನಿಜವಾಗಿಯೂ ಜೊಯಿಸನೆಂಬದನ್ನು ಸಿದ್ಧಮಾಡುತ್ತಲಿದ್ದವು. ಅಪ್ಪಾಜಿ ಒಳ್ಳೇ ಕುಶಲ. ಮಾತುಗಳಲ್ಲಂತೂ ಮಹಾ ಪ್ರವೀಣ. ಆತನನ್ನು ಸರಿಗಟ್ಟುವ ಚತುರರಾರೂ ಇಲ್ಲವೆಂದು ಇತಿಹಾಸಕಾರರೇ ಸಮ್ಮತಿಸಿರುತ್ತಾರೆ. ಅಂತಹ ಚಾಣಾಕ್ಷನೇ ವೇಷಾಂತರ ಮಾಡಿಕೊಂಡು ಪೊಟ್ಟನೂರು ಪ್ರವೇಶಿಸಿರಲು, ಅವನನ್ನು ಗುರುತಿಸುವ ಧೀರನಾರು? ಅಪ್ಪಾಜಿ ರಾಮಲಿಂಗನನ್ನಗಲುತ್ತಲೇ ಜಗನ್ಮೋಹಿನಿಯ ಮಂದಿರದತ್ತ ಹೊರಟನು.

ಜೊಯಿಸ ಹೇಳಿದ ಅವಧಿಯಾದುದರಿಂದ ಜಗನ್ಮೋಹಿನಿ-ಶಶಿಲೇಖೆಯರು ಆತನ ದಾರಿಯನ್ನೇ ಕಾಯುತ್ತಲಿದ್ದರು. ಹೆಣ್ಣುಮಕ್ಕಳ ಸ್ವಭಾವವೇ ಅದು. ಪುರುಷರೇನೂ ಭವಿಷ್ಯವನ್ನರಿಯಲು ಆತುರರಾಗಿರುವುದಿಲ್ಲವೆಂದಲ್ಲ. ಅವರಲ್ಲಿ ಆತುರತೆ ಇರುತ್ತದೆ. ಅವರಾದರೂ ಉತ್ಕಂಠೆಯಿಂದ ತಮ್ಮ ಭಾವೀ ಜೀವನದ ಸುಖದುಃಖಗಳನ್ನರಿಯಲು ಯತ್ನಿಸುತ್ತಾರೆ, ಆದರೆ ಸ್ತ್ರೀಯರಲ್ಲಿ ಈ ಆತುರತೆ ಬಹಳವಾದುದಿರುತ್ತದೆ. ಪುರುಷರಿಗಿಂತಲೂ ಅವರು ಅದೆಷ್ಟೋ ಪಾಲು ಆತುರರಾಗಿರುತ್ತಾರೆ; ಆದರೆ ಭೇದವಿಷ್ಟೇ, ಪುರುಷರು ಕಂಡಕಂಡವರನ್ನು ನಂಬದೆ, ತಮಗೆ ಮನಕ್ಕೆ ವಿಶ್ವಾಸವೆನಿಸಿದಲ್ಲಿಯೇ ಕೇಳುತ್ತಾರೆ, ಆದರೆ ಸ್ತ್ರೀಯರ ವಿಷಯ ಹಾಗಲ್ಲ. ಯಾವನೊಬ್ಬನು ಭವಿಷ್ಯಹೇಳುತ್ತಾನೆಂದರಾಯಿತು. ಒಮ್ಮೆಲೆ ವಿಶ್ವಾಸವಿಡುತ್ತಾರೆ ಭೂತ-ವರ್ತಮಾನಗಳನ್ನು ಹೇಗೋ ತಿಳಿದು, ಅದನ್ನು ನಿಜವೆಂದು ಹೇಳಿ ಬಿಟ್ಟರಾಯಿತು. ಅವರು ಹೇಳುವ ಭವಿಷ್ಯವನ್ನೂ ನಂಬಿಯೇ ಬಿಡುತ್ತಾರೆ. ಅನೇಕರು ಅವರ ಮನದಲ್ಲಿ ಒಂದಿಲ್ಲೊಂದು ಭಾವೀಸಂಕಟದ ಭೀತಿಯನ್ನು ಹುಟ್ಟಿಸಿ, ಅದರ ಶಮನಕ್ಕೆಂದು ಅವರಿಂದ ಹಣವನ್ನೆಳೆಯುತ್ತಾರೆ; ಇಲ್ಲವೆ ಅದಾವುದೋ ಒಂದು ಭಾವೀ ಉಚ್ಚ ಆಶೆಯನ್ನುಂಟು ಮಾಡಿ, ಅದರಿಂದ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುತ್ತಾರೆ. ಎಷ್ಟೋ ಸುಶಿಕ್ಷಿತ ಭಗಿನಿಯರು ಜೊಯಿಸನ ಜ್ಯೋತಿಷವಾಗಲಿ, ಇನ್ನಾವ ಬಗೆಯದೇ ಆಗಲಿ, ಭವಿಷ್ಯ ಸಟೆಯನ್ನುತ್ತಾರೆ. ಆದರದು ದಾಕ್ಷಿಣ್ಯಕ್ಕೆ ಮಾತ್ರ. ತಮ್ಮ ಶಿಕ್ಷಣದ ಮನ್ನಣೆ

ಉಳಿಸಿಕೊಳ್ಳಲು ಮಾತ್ರ. ಒಳಗೆ ಸಂಪೂರ್ಣ ನೆಟ್ಟೇಹೋಗಿರುತ್ತದೆ. ಅದು ಅವರ ಸ್ವಭಾವವು ಸ್ವಭಾವವೆಂದಾದರೂ ಬದಲಾದೀತೆ? ಜಗನ್ಮೋಹಿನಿ-ಶಶಿಲೇಖೆಯರಾದರೂ ತಮ್ಮ ಸ್ವಭಾವದಂತೆ ಆತುರರಾಗಿದ್ದರು. ಅದರಲ್ಲಿ ತಾವೀರ್ವರೂ ಯಾರಿಗೂ ಉಸುರದ ಮನಸ್ಸಿನೊಳಗಿನ ಗೌಪ್ಯವನ್ನು ಅವನು ಅರಿತಿದ್ದನು; ಅಲ್ಲದೆ ಅದನ್ನವರಿಗೆ ಹೇಳಿದುದಲ್ಲದೆ, ಅದಕ್ಕೆ ಎಲ್ಲರಿಗೂ ಶಕ್ಯವಾಗುವಂತಹ ಭವಿಷ್ಯವನ್ನೂ ಹೇಳಿದ್ದನು; ಮತ್ತು ಕಲಿಂಗ ರಾಜ್ಯದ ಭವಿಷತ್ತು ಅಂದು ಅಪ್ಪಾಜಿಯ ಕೈಯಲ್ಲಿಯೇ ಇದ್ದಿತೆಂದರೂ ತಪ್ಪಾಗಲಿಕ್ಕಿಲ್ಲ ಕರ್ನಾಟಕ ಸಾಮ್ರಾಜ್ಯದ ಅರಸು ಅಪ್ಪಾಜಿಯ ಮಾತಿನಂತೆಯೇ ವ್ಯವಹರಿಸುತ್ತಲಿದ್ದನು. ಅಪ್ಪಾಜಿಯೇ ಅಂದು ಜಗನ್ಮೋಹಿನಿಯ ಭಾವೀ ಸುಖ-ದುಃಖಗಳಿಗೆ ಕಾರಣರೂಪನಾಗಿದ್ದನೆಂಬದನ್ನು ಸ್ವತಃ ಅಪ್ಪಾಜಿ-ಗರ್ವದಿಂದಲ್ಲದಿದ್ದರೂ-ಆತ್ಮ ವಿಶ್ವಾಸದಿಂದರಿತಿದ್ದನು. ತನ್ನ ಚಾತುರ್ಯದಲ್ಲಿ ಅವನಿಗೆ ನಂಬುಗೆಯಿದ್ದಿತು; ಆದರೆ ಈ ಸಂಗತಿಯೇನೂ ಜಗನ್ಮೋಹಿನಿಗೆ ತಿಳಿದಿರಲಿಲ್ಲ. ತಿಳಿದಿದ್ದರೆ, ಆಕೆ ಇನ್ನೂ ಹೆಚ್ಚಾಗಿ ಸಹಾಯ ಮಾಡುತ್ತಲಿದ್ದಳು. ಆಕೆ ಆತನನ್ನು ನಿಜವಾದ, ಆದರೆ ಶಕ್ತಿವಂತನಾದ ಜೋಯಿಸನೇ ಎಂದು ನಂಬಿದ್ದಳು. ಆತನ ಬರವನ್ನು ಆತುರತೆಯಿಂದ ಎದುರು ನೋಡುತ್ತಲಿದ್ದಳು. 'ಬರದಿರಬಹುದೆ?' ಎಂದು ಆಕೆ ಶಂಕಿಸುವಳು; ಆದರೆ ಶಶಿಲೇಖೆ ಅದನ್ನು ಕೂಡಲೆ ಹೊಡೆದೋಡಿಸುವಳು.

'ಲೇಖೆ, ಜೋಯಿಸ ಬರಬೇಕಾಗಿದ್ದಿತಲ್ಲವೆ?'

'ಅಹುದು ರಾಜಪುತ್ರೀ; ಬರುವ ಸಮಯವೇ ಆಯಿತು.'

'ಛೆ! ಬರುವಂತೆ ಕಾಣುವುದಿಲ್ಲ' 'ಹೇಗೆ ಹೇಳುವೆ?'

'ಇಷ್ಟು ಸಮಯ ತಡೆಯುಲು ಕಾರಣವೇನು?'

'ಬರಬಹುದು ಬಿಡು. ಈಗ ತಾನೆ ಆತ ಹೇಳಿದ ಸಮಯವಾಯಿತು. ಅದಿರಲಿ. ಸಖಿ, ಆತನ ಆವಶ್ಯಕತೆಯಾದರೂ ಏನಿದೆ?'

'ಅಂದರೆ? ನೀನೇ ಜೋಯಿಸನ ಪಾತ್ರವಹಿಸುವೆಯೇನು?'

'ಏಕೆ ವಹಿಸಲಿಕ್ಕಿಲ್ಲ? ಕೇಳು, ಬೇಕಾದ ಪ್ರಶ್ನೆಯನ್ನು ವಿಚಾರಿಸು.'

'ಹಾಗಾದರೆ ಹೇಳು ನೋಡುವಾ, ನಿನಗೆ ಕರ್ನಾಟಕ ಸೇನಾಪತಿ ಪತಿಯಾಗುವನೆ?'

'ರಾಜಪುತ್ರಿಗೆ ಕನ್ನಡ ಸಮ್ರಾಟ ಪತಿಯಾದರೆ ಆಗುವರು.'

'ಓಹೋ! ಇದೆಯೋ ನಿನ್ನ ಭವಿಷ್ಯವು?'

'ಅಹುದು ನಾನೇನು ಮಾಡಲಿ? ನೀನು ಮೂಲ ಪ್ರಶ್ನೆಯನ್ನು

ಬಿಟ್ಟು ಉಪಪ್ರಶ್ನೆಯನ್ನೇ ವಿಚಾರಿಸಿದೆ. ನಾನಾದರೂ ಅದಕ್ಕೆ ತಕ್ಕಂತೆಯೇ ಉತ್ತರವಿತ್ತೆನು. ನೀನು ಮುಖ್ಯ ಪ್ರಶ್ನೆ ಕೇಳು; ಅಂದರೆ ನೋಡು.'

'ಮುಖ್ಯ ಪ್ರಶ್ನೆಯೇನು?'

'ಕಲಿಂಗ ರಾಜಪುತ್ರಿ ಕರ್ನಾಟಕ ಸಮ್ರಾಟನ ಕಂಠಕ್ಕೆ ಕುಸುಮಮಾಲೆ ಹಾಕುವಳೇ? ಎಂದು.' 'ಹಾಗೇ ಆಗಲಿ; ಅದನ್ನೇ ಹೇಳು.'

'ಕಲಿಂಗ ರಾಜಕುವರಿ ಕನ್ನಡ ದೊರೆಯನ್ನು ವರಿಸುವುದು ನಿಜವೇ; ಆದರೆ ಹಲವು ಸಂಗತಿಗಳು ಮೊದಲು ಸಂಭವಿಸಬೇಕಾಗಿದೆ.' 'ಅವೇನು?'

'ಅವೇನೊ ... ...ಅದಿರಲಿ. ಸಖೀ, ಮೊನ್ನೆ ಜೊಯಿಸ ಬಂದು ಹೋಗುತ್ತಲೆ ನಾನು ನಿನಗೆ ಪ್ರಶ್ನೆ ಕೇಳಿದೆನಲ್ಲ?'

'ಏನೆಂದು?' 'ಸ್ಮರಣೆಯಲ್ಲಿಲ್ಲವೆ?'

'ಆಹಾ! ನೆನಪಾಯಿತು ಒಳ್ಳೇದು. ಲೇಖೆ, ಇದಕ್ಕೆ ನಿನ್ನ ಹಂಚಿಕೆ ಯೇನಿದೆ?'

'ನಾನೊಂದು ಮಾತು ಹೇಳಿದರೆ ನೀನು ಕೋಪಿಸುವುದಿಲ್ಲವಷ್ಟೆ?'

'ಏನು, ನಿನ್ನ ವಿಷಯಕವಾಗಿ ಕೋಪವೇ? ಛೆ! ಎಂದಿಗೂ ಇಲ್ಲ.'

'ಕಲಿಂಗ-ಕರ್ನಾಟಕಗಳಲ್ಲಿ ಮೈತ್ರಿ ಬೆಳೆಯುವಂತೆ ನಾವೇ ಏಕೆ ಉಪಾಯ ಮಾಡಕೂಡದು.' 'ಏನು? ನಾನೇ!'

'ಅಹುದು, ನಾವೇ ಏಕೆ? ನಾವು ಹೆಂಗಳೆಯರಾದ ಮಾತ್ರಕ್ಕೇನೇ ನಮ್ಮಿಂದ ಯಾವ ಕಾರ್ಯವೂ ಸಾಧಿಸಲಿಕ್ಕಿಲ್ಲವೆ?'

'ಆಗಲಿ ಅದೇನೋ ವೀರಪುರುಷರಿಗಿಂತಲೂ ವೀರತನದಿಂದ ನಿಂತಿರುವೆ. ಕಲಿಂಗ-ಕರ್ನಾಟಕಗಳಲ್ಲಿ ಸಂಧಿ ಹೇಗೆ ಸಾಧಿಸುವೆ?'

'ನೀನು ಸಮ್ಮತಿಸಿದರೆ ನಾನು ಹೇಳುವೆನು'

'ಸಮ್ಮತಿ-ಅಸಮ್ಮತಿ ಆ ಮೇಲೆ. ಮೊದಲು ಹೇಳು.'

'ಈಗ ನಮ್ಮ ರಾಜರು ಗುಪ್ತವಾಗಿ ಯುದ್ಧದ ಸಿದ್ಧತೆಯಲ್ಲಿರುತ್ತಾರಲ್ಲವೆ?'

'ಅಹುದು. ಹಿಂದೆ ನಷ್ಟವಾದ ಬಲಕ್ಕೆ ಕಡಿಮೆಯಿಲ್ಲದಷ್ಟು ಸೈನ್ಯ ಕೂಡುವಂತಿದೆ.'

'ಕನ್ನಡಿಗರ ದೊರೆಯೂ ಆತನ ಪರಿವಾರವೂ ಚಾತುರ್ಯದಲ್ಲಿ ಹೆಸರು ಹೊಂದಿರುವರಷ್ಟೆ?'

'ಹೆಸರು ಹೊಂದಿರುವರೆಂದರೇನು? ಚತುರಮಂತ್ರಿ ಅಪ್ಪಾಜಿಯೊಬ್ಬನೇ ಕರ್ನಾಟಕದ ಹೆಸರನ್ನು ಕೊನೆಯವರೆಗುಳಿಸಲು ಸಮರ್ಥನಿರುತ್ತಾನೆ.'

'ಅವರಾದರೂ ಯುದ್ಧಕ್ಕೆ ಆತುರರಿಲ್ಲವೆಂಬದು ಸ್ವಾಭಾವಿಕವಷ್ಟೆ?'

'ಸಾರಾಸಾರ ವಿಚಾರವಿದ್ದ ಯಾವ ಮನುಷ್ಯ ತಾನೆ ಯುದ್ಧಕ್ಕೆ ಪ್ರವೃತ್ತನಾಗುತ್ತಾನೆ? ತಗಣಿ-ಚಿಕ್ಕಾಟಗಳನ್ನು ಒರೆದಂತೆ ಮಾನವನ ಜೀವನಗಳನ್ನು ನಾಶಗೊಳಿಸುವ ಈ ಯುದ್ಧವು ಯಾರಿಗೆ ತಾನೆ ಬೇಕಾದೀತು? ಭಾವೀ ಮುತ್ಸದ್ದಿಗಳು, ಶಿಲ್ಪಿಗಳು, ವಾಜ್ಞಿಗಳು, ಕಲಾವಂತರು ಕವಿಗಳು ಮುಂತಾದ ಮಾನವ ಶ್ರೇಷ್ಠರು ಕೂಡಾ ಜೀವನದ ಆಶೆ ತೊರೆದು ತಮ್ಮ ಅಮೌಲ್ಯ ಕಲೆಗೆ, ಜಾಣತನಕ್ಕೆ, ಚಾತುರ್ಯಕ್ಕೆ ನೀರೆರೆದು ಪಟಪಟನೆ ಸತ್ತು ಹೋಗುವುದೆಂದರೆ, ಎಂತಹ ಹೀನಸ್ಥಿತಿಯು? ಮಾನವನು ಜನುಮಿಸಿದುದು ಇದಕ್ಕೆಯೋ? ಮಾನವನು ಉಚ್ಚ ಆಚಾರ-ವಿಚಾರಗಳಿಗೆ ಪ್ರವೃತ್ತನಾಗುವುದು ಒಬ್ಬರೊಬ್ಬರ ಪ್ರಾಣನಾಶಕ್ಕಾಗಿಯೇ ಏನು? '

'ರಾಜಪುತ್ರಿ ಸ್ವಾತಂತ್ರ್ಯಕ್ಕಾಗಿ, ಮಾತೃಭೂಮಿಯ ಮಾನ ರಕ್ಷಣೆಗಾಗಿ, ಭಾವೀ ಜನತೆಯ ಹಿತರಕ್ಷಣೆಗಾಗಿ ಇಂದಿನವರು ತಮ್ಮ ಪ್ರಾಣಾರ್ಪಣೆ ಮಾಡಲೇಬೇಕಾಗುತ್ತದೆ. ತಮ್ಮ ಜಾಣತನ-ಚಾತುರ್ಯಗಳನ್ನೆಲ್ಲ ಹಿಂದಿಟ್ಟು, ಉಚ್ಚಸ್ವಾತಂತ್ರ್ಯವನ್ನು ಮುಂದಿಟ್ಟು, ಮುಂಬರುವ ಅರಿಗಳನ್ನು ಎದುರಿಸಿ ಕಾದಲೇಬೇಕಾಗುತ್ತದೆ. ಒಮ್ಮೆ ಸ್ವಾತಂತ್ರ್ಯನಷ್ಟವಾದರೆ ಆ ದೇಶವು ತೀರಾ ಕೀಳ್ತರಗತಿಗಿಳಿಯುವುದರಲ್ಲಿ ಸಂದೇಹವೇ ಇಲ್ಲ ಪಾರತಂತ್ರ್ಯಕ್ಕೆ ಸಿಕ್ಕ ರಾಷ್ಟ್ರದ ಜನತೆಗೆ, ಕಲೆಗೆ, ಜಾಣತನಕ್ಕೆ ಚಾತುರ್ಯಕ್ಕೆ ಎಲ್ಲಿಯೂ ಮನ್ನಣೆಯಿಲ್ಲ. ಯಾರೂ ಮಾತನಾಡಿಸುವದಿಲ್ಲ ಅಂತಹರ ಜೀವನವು ಹೀನತರದ್ದಾಗುವುದು ಪರಕೀಯರ ಆಕ್ರಮಣ ನಡೆಯುವ ಸಮಯಕ್ಕಾದರೂ ದೇಶವಾಸಿಗಳು ಎಚ್ಚರಿದು, ಆವಶ್ಯಕವಾದ ರಕ್ಷಣೆಯೋಪಾಯ ಕೈಕೊಳ್ಳಬೇಕಾಗುವದು. ಆ ಸಮಯದಲ್ಲಿ ಹಿಂದುಬಿದ್ದರೆ, ಮುಂದಿನವರ ನಿಂದೆಗೆ ಪಾತ್ರರಾಗಬೇಕಾಗುವುದರಲ್ಲಿ ಸಂದೇಹವಿಲ್ಲ'

'ನಿಜ, ಲೇಖೆ, ನಿಜ; ಆದರೆ ಪರಕೀಯರಾದರೂ ತಮಗೆ ಏನೊಂದೂ ಕೇಡು ಬಗೆಯದ, ಯಾವ ಬಗೆಯಿಂದಲೂ ದುಷ್ಟತನಕ್ಕೆ ಪ್ರವೃತ್ತರಾಗದ, ತಮ್ಮಷ್ಟಕ್ಕೇ ತಾವು ನೆಮ್ಮದಿಯಿಂದಿರುವಾಗ್ಗೆ ಬಂದು ಆ ದೇಶವನ್ನು ಆಕ್ರಮಿಸುವುದೇಕೆ? ಅದರ ಪವಿತ್ರ ಸ್ವಾತಂತ್ರ್ಯ ನಶಿಸುವದೇಕೆ? ಜನತೆಯನ್ನು ಹೀನ ಸ್ಥಿತಿಗೆ ಗುರಿಮಾಡುವುದೇಕೆ? .. .....'

'ರಾಜಪುತ್ರಿ, ಅದಕ್ಕೇನೇ ರಾಜಕಾರಣವೆಂದು ಹೆಸರು.'

'ನಿಜ ನಿಜ; ಬಲಿಷ್ಠರು ಬಲಹೀನರನ್ನು ಗೆಲ್ಲುವುದರಲ್ಲಿಯೇ ಅವರ ಪೌರುಷವು. ಪರಕೀಯ ರಾಜ್ಯಗಳನ್ನು ನಾಶಗೊಳಿಸುವುದೇ ಅವರ ಕರ್ತ

ವ್ಯವು. ಪರರಾಷ್ಟ್ರಗಳನ್ನು ನೆಲಸಮ ಮಾಡುವುದೇ ಅವರ ಧ್ಯೇಯವು. ಧಿಃಕಾರವು................'

'ಇರಲಿ ಬಿಡು ರಾಜಪುತ್ರಿ, ಆದರೆ ಕನ್ನಡ ದೊರೆ ಮಾತ್ರ ಇಂತಹರಲ್ಲೊಬ್ಬನಲ್ಲವೆಂದು ನೀನರಿತಿರುವೆ.' 'ಹೇಗೆ ಹೇಳುವೆ?'

'ನಮ್ಮ ಮಹಾರಾಜರು ಮಹಮ್ಮದೀಯರೊಡನೆ ಮಾಡಿಕೊಂಡ ಸಂಧಿಯು, ಹಿಂದೆ ವಿಜಯನಗರ ಸಾಮ್ರಾಜ್ಯಕ್ಕಿತ್ತ ಪೀಡೆಯು ಇವೇ ಕನ್ನಡ ದೊರೆಯನ್ನು ಕನಲಿಸಲು ಕಾರಣವಾದುವಲ್ಲದೆ, ಅನ್ಯಥಾ ಕೋಪಿಸಿ ದಂಡೆತ್ತಿ ಬಂದಿಲ್ಲ'

'ಆಗಲಿ. ಕಾಲಾಯ ತಸ್ಮೈ ನಮಃ.'

'ಆದರೆ ರಾಜಪುತ್ರಿ, ನನ್ನ ಸೂಚನೆ ಅಷ್ಟಕ್ಕೇನೇ ಉಳಿಯಿತಲ್ಲ.'

'ನಿನ್ನ ಸೂಚನೆಯೇನು?' 'ಪ್ರಕೃತ್ಯಕ್ಕೆ ಸಂಬಂಧಿಸಿದುದು.'

'ಅಹುದು. ಲೀಲೆ, ಅದೇನೋ ಹೇಳಲಿದ್ದೆಯಲ್ಲ?'

'ನನ್ನ ಸೂಚನೆಯಿಷ್ಟೆ; ನಾವೇ ಮುಂದೊರೆದು ಸಂಧಿಯಾಗುವಂತೆ ಏಕೆ ಯತ್ನಿಸಬಾರದು?' 'ಆಂ, ನಾವೇ! ಅದು ಹೇಗೆ?'

'ಈ ಬಗ್ಗೆ ನನ್ನ ಒಂದು ವಿಚಾರವಿದೆ. ನಿನಗೆ ಕೊಂಚ ವಿಚಿತ್ರವಾಗಿ ತೋರುವದು' 'ಅದೇನು? ಹೇಳು ನೋಡುವಾ.'

'ನಮ್ಮ ಮಹಾರಾಜರು ಬಹಳವಾಗಿ ಸೈನ್ಯಸಂಗ್ರಹ ಮಾಡುತ್ತಲಿರುವರಲ್ಲವೆ?' 'ಮುಂದೆ?'

ಈ ಸಂಗತಿಯೆನ್ನೆಲ್ಲ ಗುಪ್ತವಾಗಿ ನಾವೇ ಕನ್ನಡ ದೊರೆಗೆ ತಿಳುಹಬೇಕು.'

'ಕಲಿಂಗ ಸ್ವಾತಂತ್ರ್ಯನಾಶಕ್ಕೆ ಕಾರಣರಾಗಬೇಕೇ?'

'ಅಲ್ಲ, ಕಲಿಂಗ-ಕರ್ನಾಟಕಗಳ ಸಖ್ಯಕ್ಕೆ ಕಾರಣರಾಗಬೇಕು.'

'ಹುಚ್ಚು ಹಿಡಿದಿದೆಯೇನು ನಿನಗೆ?'

'ಹುಚ್ಚು ಹಿಡಿದಿದ್ದರೆ ಇಲ್ಲಿ ಹೇಗೆ ಬರುತ್ತಲಿದ್ದೆ?'

'ಛೆ! ಇದು ಎಂದೂ ಸಾಧ್ಯವಾಗದ ವಿಚಾರ.'

'ಇದರಿಂದಾಗುವ ನಷ್ಟವೇನು?'

'ನಷ್ಟವೇನು, ವೈರಿಗೆ ಗುಟ್ಟು ಕೊಡುವುದರಿಂದ ನಷ್ಟವೇನು, ಎಂದು ಕೇಳಿದರೇನು?'

'ರಾಜಪುತ್ರೀ, ನನ್ನ ಯೋಜನೆ ಪೂರ್ಣವಾಗಿ ಕೇಳಿಕೊಳ್ಳು.'

'ಹುಂ, ಆಗಲಿ. ಹೇಳು ನೋಡುವಾ.'

'ನಾವೀರ್ವರೂ ಗುಪ್ತವಾಗಿ ಕನ್ನಡ ದೊರೆಯನ್ನು ಕಾಣಬೇಕು. ಕಲಿಂಗವನ್ನು ಕಾಲಲ್ಲಿ ತುಳಿಯದಂತೆ ಕೇಳಬೇಕು. ಪ್ರಾಣಹಾನಿಯಾಗದಂತಹ ಯುಕ್ತಿಯನ್ನು ಯೋಜಿಸಿ ಅದರಿಂದ ಕಲಿಂಗ-ಕರ್ಣಾಟಕಗಳ ಸಖ್ಯಕ್ಕೆ ಅವರೇ ಮುಂದಾಗಬೇಕು. ಮಿತ್ರತ್ವದ ಕರವನ್ನು ಕನ್ನಡದೊರೆಯೇ ಮೊದಲು ಮುಂದೆ ಮಾಡಬೇಕಲ್ಲದೆ, ಸೋತವರಾದ ನಮ್ಮ ಮಹಾರಾಜರಿಗೆ ಮೊದಲು ಮುಂಬರುವಂತೆ ಹೇಳಬಾರದು ಇಷ್ಟೆಲ್ಲ ಸೂಚನೆಗಳಿಗೆ ಸಮ್ಮತಿಸಿದರೆ ಮಾತ್ರ ನಾವು ಉಳಿದ ವಿಷಯಗಳನ್ನು ತಿಳಿಸಬೇಕು; ಇಲ್ಲವಾದರೆ ಮರಳಬೇಕು.' 'ಲೇಖೆ, ಭಯಂಕರವಾದ ಸಾಹಸವು!'

'ನಿಜ. ಸಾಹಸವೆಂದು ನಾನರಿತಿರುವೆ. ಸಾಹಸೇ ಶ್ರೀಃ ಪ್ರತಿವಸತಿ. ಸಾಹಸಕ್ಕೆ ಕೈಹಾಕದಿದ್ದರೆ, ಯಾವದೂ ಕೈಗೂಡಲಾರದು. ಈಗ ಕೊಂಚ ಸಾಹಸವನ್ನು ತೋರಿಸಿದುದಾದರೆ, ಕಲಿಂಗ-ಕರ್ನಾಟಕಗಳಲ್ಲಿ ಸಖ್ಯ ನೆಲೆಗೊಳ್ಳುವುದು. ಕಲಿಂಗ-ಕರ್ನಾಟಕಗಳ ಅಸಂಖ್ಯ ಪ್ರಾಣಹಾನಿ ತಪ್ಪುವುದು ನಮ್ಮ ನಮ್ಮ ಉದ್ದೇಶಗಳು ನೆಲೆಗೊಳ್ಳುವವು.

'ಒಂದು ವೇಳೆ ಕನ್ನಡ ದೊರೆ ನಮ್ಮ ಮಾತು ಮನ್ನಿಸದೇ ಹೋದರೆ?'

'ನಾವು ಇದುವರೆಗೆ ಕೇಳಿದ ಗುಣಗಳು ಆತನಲ್ಲಿದ್ದುದಾದರೆ, ಕೇಳದಿರಲು ಎಂದೂ ಸಾಧ್ಯವಿಲ್ಲ.'

ಶಶಿಲೇಖೆ ಮತ್ತು ಜಗನ್ಮೋಹಿನಿಯರೀರ್ವರೂ ವಿಶೇಷವಾಗಿ ಚರ್ಚಿಸಿದರು, ಆದರೆ ಮುಂದೆ ಅಲ್ಪಾವಕಾಶದಲ್ಲಿಯೇ ಅವರಲ್ಲಿ ಮೊದಲು ಬಂದ ಜೊಯಿಸನೇ ಬಂದುದರಿಂದ, ಅವರೀರ್ವರೂ ತಮ್ಮ ಚರ್ಚೆಯನ್ನು ನಿಲ್ಲಿಸಿ, ಜೊಯಿಸನನ್ನು ಸ್ವಾಗತಿಸಿದರು.

ಶಶಿಲೇಖೆ ಜೊಯಿಸನನ್ನು ಪರೀಕ್ಷಿಸಬೇಕೆಂದು:—'ಜೊಯಿಸರೇ, ನಾವೀಗ ಯಾವ ವಿಷಯ ಚರ್ಚಿಸುತ್ತಲಿದ್ದೆವು; ಹೇಳಿರಿ ನೋಡುವಾ?' ಎಂದು ಕೇಳಿದಳು.

'ಜೊಯಿಸನು ಪ್ರಸನ್ನ ಮನಸ್ಕನಾಗಿ ಕುಳಿತು ಗಂಟು ಬಿಚ್ಚಿದನು. ರಾಜಪುತ್ರಿ-ಶಶಿಲೇಖೆಯರ ಪ್ರಶ್ನೆಯಿಂದ ಅವನು ಚಕಿತನೇನೂ ಆಗಲಿಲ್ಲ. ಒಳ್ಳೇ ನಿಪುಣ ಜೊಯಿಸ. ಅವನು ಕುಳಿತು ಕಾಗದದಲ್ಲಿ ಸೀಸಕಡ್ಡಿಯಿಂದ ಮನೆಮನೆಗಳನ್ನು ಮಾಡಿ ಗ್ರಹಗಳನ್ನು ತುಂಬಿ ಬೆರಳು ಎಣಿಸುತ್ತ, ಪಂಚಾಂಗ ನೋಡುತ್ತ ಕೆಲವು ಕಾಲ ಕಳೆದ ನಂತರ 'ಶಶಿಲೇಖಾದೇವಿ, ನೀವು ಚರ್ಚಿಸುತ್ತಲಿದ್ದ ವಿಷಯವು ಕನ್ನಡ ದೊರೆಗಳ ವಿಷಯವಾಗಿದೆ' ಎಂದು ನುಡಿದನು.

'ಒಳ್ಳೇದು; ನಾವಾವ ನಿರ್ಧರಕ್ಕೆ ತಲುಪಿರುವೆವು'' ಎಂದು ಶಶಿಲೇಖೆ ಜಗನ್ಮೋಹಿನಿಯ ಮೊಗವನ್ನೀಕ್ಷಿಸಿ, ಜೊಯಿಸನಿಗೆ ನಗುಮುಖದಿಂದ ಪ್ರಶ್ನೆ ಮಾಡಿದಳು.

ಜೊಯಿಸ ಮಹಾ ಚಾಣಾಕ್ಷ. ಒಂದು ಸಲ ಕಾಗದದಲ್ಲಿನ ಗ್ರಹಗಳನ್ನು, ಇನ್ನೊಂದು ಸಲ ಎದುರಿನಲ್ಲಿ ಕುಳಿತ ತಾರಕೆಗಳನ್ನು ಚನ್ನಾಗಿ ನಿರೀಕ್ಷಿಸಿ, 'ಅಮ್ಮಾ, ಶಶಿಲೇಖಾದೇವಿ, ನೀವು ಇನ್ನೂ ಯಾವ ನಿರ್ಣಯಕ್ಕೂ ತಲುಪಿಲ್ಲ' ಎಂದನು.

'ಹಾಗಾದರೆ ನಾವಾವ ದಾರಿಯನ್ನು ಸ್ವೀಕರಿಸಬೇಕೆಂಬಿರುವೆವು'' ಶಶಿಲೇಖೆ ಜೊಯಿಸನನ್ನು ಸಂಪೂರ್ಣವಾಗಿ ಪರೀಕ್ಷಿಸಬೇಕೆಂದು ಕೇಳಿದಳು.

ಜೊಯಿಸನು ಗೊಂದಲದಲ್ಲಿ ಬಿದ್ದನು ಬಹಳ ಜನ ಜ್ಯೋತಿಷಿಗಳ ಅವಸ್ಥೆ ಹೀಗೆಯೇ ಆಗುವುದುಂಟು ಅದೇನೋ ಒಂದು ಕತೆಯಿಲ್ಲವೆ? ಹೇಗೊ ಹೇಗೋ ಪ್ರಸಿದ್ಧಿ ಪಡೆದ ಒಬ್ಬ ಜ್ಯೋತಿಷಿ ಅರಸನ ಸಮೀಪದಲ್ಲಿದ್ದಾಗ್ಗೆ ಆತನು ಮಿಡಿಚೆಯನ್ನು ಕೈಯಲ್ಲಿ ಹಿಡಿದು, 'ಜೊಯಿಸರೇ, ನನ್ನ ಕೈಯಲ್ಲೇನಿದೆ?' ಎಂದು ಕೇಳಿದನು. ಜೊಯಿಸನಿಗೆ ಜೀವಕ್ಕೆ ಬಂದಿತು. ಕಾಲಧರ್ಮ ಸಂಯೋಗದಿಂದ ಅವನ ಗೆಳೆಯರು ಅವನಿಗೆ ಚಿಕ್ಕತನದಲ್ಲಿ 'ಮಿಡಿಚೆ'ಯೆಂದು ಸಂಬೋಧಿಸುತ್ತಲಿದ್ದುದು ಸ್ಮರಣೆಗೆ ಬಂದಿತು ಕೂಡಲೆ ಅರಸರ ಕರದಲ್ಲೇಕೆ ಸಿಲುಕಿದೆಯೋ ಮಿಡಿಚೆಪ್ಪಾ?' ಎಂದಂದುಬಿಟ್ಟನು. ಅರಸು ಆನಂದದಿಂದ ಜೊಯಿಸನ ಬೆನ್ನು ಚಪ್ಪರಿಸಿದನು. ಹಾಗೆ ಆಗ್ಗೆಯೂ ಅಪ್ಪಾಜಿ-ಜೊಯಿಸನ ವೇಷದಲ್ಲಿದ್ದವನು ಅಪ್ಪಾಜಿಯೇ ಎಂದು ಓದುಗರರಿತಿರುವರು—ಗೆ ಕೊಂಚ ಗೊಂದಲವನ್ನುಂಟು ಮಾಡಿತು. ಕಾಗದದಲ್ಲಿ ಹಾಕಿದ ಮನೆಗಳನ್ನು ನೋಡುತ್ತಲಿದ್ದರೂ ಅವರೀರ್ವರ ಮೊಗಗನ್ನಡಿಯಲ್ಲಿ ಹೃದಯ ಬಿಂಬಗಳ ಪ್ರತಿಬಿಂಬವನ್ನೀಕ್ಷಿಸಿ ಅಲ್ಲಿದ್ದುದನ್ನರಿಯುವದೇ ಮುಖ್ಯ ಕಾರ್ಯವಾಗಿದ್ದಿತು. ಚತುರನಾದ ಅಪ್ಪಾಜಿಗೆ ಅವರ ಹೃದ್ಗತವನ್ನರಿಯಲು ಬಹಳ ವೇಳೆ ಹಿಡಿಯಲಿಲ್ಲ. 'ಕಲಿಂಗ-ಕರ್ನಾಟಕಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಗೆಳೆತನ ಕೂಡಿಸಬೇಕೆಂದಿರುವಿರಿ' ಎಂದು ಹೇಳಿ ಬಿಟ್ಟನು.

ಶಶಿಲೇಖೆಗೆ ಜೊಯಿಸನ ಭವಿಷ್ಯ ಕೇಳಿ ಬಹಳ ಆನಂದವಾಯಿತು. ಜಗನ್ಮೋಹಿನಿಯ ಮೊಗವು ಲಜ್ಜೆಯಿಂದ ಕೆಂಪಾಯಿತು. 'ಹಾಗಾದರೆ ನಮ ಸಂಧಿ ಸಾಧಿಸಬಹುದೆ'' ಶಶಿಲೇಖೆ ಮರಳಿ ಪ್ರಶ್ನೆ ಮಾಡಿದಳು.

'ಶಶಿಲೇಖಾದೇವಿ, ನೀವೇ ಟೊಂಕ ಕಟ್ಟಿದ ಮೇಲೆ ಸಂಧಿ ಅಸಾಧ್ಯವಾದೀತೆ? ಮೊನ್ನಿನ ಪರಿಸ್ಥಿತಿಗೂ ಇಂದಿನ ಪರಿಸ್ಥಿತಿಗೂ ಅಂತರವಾಗಿದೆ.

ಎಷ್ಟೇ ತೊಂದರೆಗಳೊದಗಿದರೂ ನೀವು ತಪ್ಪದೆ ನಿಮ್ಮ ನಿರ್ಧಾರದಂತೆ ನಡೆಯಿರಿ; ಅಂದರೆ, ಜಗನ್ನಾಥನು ಯಶಸ್ಸು ಕೊಡುವನು' ಜ್ಯೋತಿಷಿ ಆಶೀರ್ವಾದಪೂರ್ವಕ ಹೇಳಿದನು.

'ಜೊಯಿಸರೇ, ನೀವು ಕನ್ನಡ ದೊರೆಗಳನ್ನು ಕಂಡಿಲ್ಲವೆ?'

'ಅಹುದು, ಅವರಲ್ಲಿ ನಾಲ್ಕೆಂಟು ದಿನ ಇದ್ದೆನು.'

'ಹಾಗಾದರೆ ಅವರ ಸ್ವಭಾವ ಹೇಗಿದೆ?'

'ಉದಾರಿಗಳು, ಅಂತಃಕರಣಿಗಳು, ವಿನಯಿಗಳು, ದಾನಿಗಳು, ಮಮತೆಯ ಮಾತುಗಳಿಂದ ಪರಿಪೂರ್ಣರು,'

'ನಾನದನ್ನು ಕೇಳಲಿಲ್ಲ' 'ನೀವು ಕೇಳಿದುವೇನು?'

'ಯಾರಾದರೂ ಅವರನ್ನು ಕಾಣ ಬಯಸಿದರೆ?'

'ತತ್ ಕ್ಷಣ ಕಾಣುವರು.'

'ಒಳ್ಳೇ ಮಾತುಗಳಿಂದ ಜನರ ದೂರುಗಳನ್ನು ಕೇಳುವರೇನು?'

'ಕಾಣಬಂದವರನ್ನು ಒಳ್ಳೇ ಸಹಾನುಭೂತಿಪೂರ್ವಕವಾಗಿ ವಿಚಾರಿಸುವರು. ಅವರ ತೊಂದರಗಳನ್ನು ಚನ್ನಾಗಿ ಕೇಳಿಕೊಂಡು ಅವುಗಳನ್ನು ನಿವಾರಿಸುವರು.'

ಹೀಗೆ ಇನ್ನೂ ಕೊಂಚ ಸಮಯ ಚರ್ಚೆಯಾಗಲು, ಶಶಿಲೇಖೆ ಜೊಯಿಸನಿಗೆ ಯೋಗ್ಯ ಸಂಭಾವನೆಯಿತ್ತು ಕಳುಹಿದಳು

ಅಪ್ಪಾಜಿ ಜಗನ್ಮೋಹಿನಿಯ ಮನೆಯಿಂದ ಹೊರಟವನು ಇನ್ನೆಲ್ಲಿಯೂ ಮರಳದೆ, ನೇರವಾಗಿ ಸಿಂಹಾದ್ರಿಗೇನೇ ಹೋದನು.

ರಾಯನು ಮತ್ತು ರಾಮಲಿಂಗನು ಅಪ್ಪಾಜಿಯ ಬರವನ್ನೇ ಎದುರು ನೋಡುತ್ತ ಕುಳಿತಿದ್ದರು. ಅವರೀರ್ವರಲ್ಲಿಯೂ ಮುಂದೆ ಮಾಡಬೇಕೆಂದಿದ್ದ ಕಾರ್ಯದ ಯೋಚನೆಯೇ ಮನೆಮಾಡಿದ್ದಿತು.

'ರಾಮಲಿಂಗ, ಗಜಪತಿಯ ಬಲವು ಎಷ್ಟಿರಬಹುದು?'

'ಪ್ರಭುಗಳೇ, ನನಗೆ ಅದೇ ಯೋಚನೆಗಿಟ್ಟಿದೆ. ಬಹಳವಾಗಿ ಯತ್ನಿಸಿದರೂ ನನಗದು ಸಾಧ್ಯವಾಗಲಿಲ್ಲ.'

'ಹಾಗಾದರೆ ನಮ್ಮ ಮುಂದಿನ ಸಿದ್ಧತೆ ಹೇಗೆ ಮಾಡಬೇಕೆನ್ನುವಿರಿ?'

'ನಾನಾದರೂ ಮಹಾಮಂತ್ರಿಗಳನ್ನು ಕಂಡೆನು. ಅವರಾದರೂ ನಿಶ್ಚಿತ ಸಂಗತಿಯನ್ನೇನೂ ತಿಳಿಸಲಿಲ್ಲ. ಅವರು ಬರುವವರೆಗಂತೂ ನಮಗೆ ಏನೂ ತಿಳಿಯುವಂತಿಲ್ಲ.'

ಹೀಗೆ ಅರಸು-ಸೇನಾಪತಿಗಳು ಚರ್ಚಿಸುತ್ತಲಿರುವಾಗಲೇ ಅಪ್ಪಾಜಿ

ಬಂದ ವಾರ್ತೆ ತಿಳಿಯಿತು. ಕೂಡಲೆ ಅಪ್ಪಾಜಿ ಬಂದೇಬಿಟ್ಟನು. ಅರಸು-ಸೇನಾಪತಿಗಳೀರ್ವರೂ ಆನಂದದಿಂದ ಸ್ವಾಗತಿಸಿದರು.

'ಏನು ಮಹಾಮಂತ್ರಿಗಳೇ, ವಾರ್ತೆಯೇನು?'

'ವಾರ್ತೆ ಪ್ರಭುಗಳನ್ನೇ ಅವಲಂಬಿಸಿದೆ.' 'ಪ್ರಭುಗಳನ್ನೇ?'

'ಅಹುದು ಸೇನಾಪತಿಗಳೇ, ಒಪ್ಪಂದ ಅಥವಾ ಯುದ್ಧಗಳು ನಮ್ಮ ದೊರೆಗಳನ್ನೇ ಅವಲಂಬಿಸಿರುತ್ತವೆ.'

'ನಿಮ್ಮ ಸೂತ್ರಕ್ಕೆ ಕೊಂಚ ಭಾಷ್ಯ ಬರೆಯಿರಿ ನೋಡುವಾ'

'ಅಪ್ಪಾಜಿಯವರೇ, ನೀವೇನು ಗಜಪತಿಯಿಂದ ಸಂದೇಶ ತಂದಿರುವಿರೋ?' 'ಸಂದೇಶ ಗಜಪತಿಯಿಂದಲ್ಲ ..'

'ಇನ್ನಾರಿಂದ? ...' 'ಕನ್ನಡ ಸಾಮ್ರಾಜ್ಯದ ಮಹಾರಾಣಿಯಿಂದ.'

'ಏನು ಅಪ್ಪಾಜಿಯವರೇ, ಈಗಲೇ ಮಹಾರಾಣಿ ಮಾಡಿಬಿಟ್ಟಿರಲ್ಲ?'

'ಅಹುದು. ಅಷ್ಟು ಲಕ್ಷಣವನ್ನೆಲ್ಲ ತಿಳಿದೇ ಬಂದಿರುತ್ತೇನೆ'

'ಏನಿದ್ದುದನ್ನು ಸ್ಪಷ್ಟವಾಗಿ ಹೇಳಿರಿ ನೋಡುವಾ'

'ನಿಜವಾಗಿ ಹೇಳಬೇಕೆಂದರೆ, ನನಗೆ ನಿಶ್ಚಿತಸಂಗತಿಯೇನೂ ತಿಳಿಯದು.'

'ನಿಮ್ಮ ಒಗಟೇ ತಿಳಿಯುವುದಿಲ್ಲವಲ್ಲ?'

'ಇದರಲ್ಲಿ ಒಗಟೇನೂ ಇಲ್ಲವೇ ಇಲ್ಲ.'

'ಒಳ್ಳೇದು. ನೀವು ಮಾಡಿಕೊಂಡು ಬಂದುದನ್ನಾದರೂ ಹೇಳಿರಿ.'

'ನಾನು ಯಾವ ಗುಟ್ಟನ್ನೂ ತಿಳಿದಿಲ್ಲವೆಂಬದು ನಿಜವೇ; ಆದರೆ ಅಷ್ಟರಿಂದ ನಾನೇನೂ ಕಾರ್ಯ ಸಾಧಿಸಿಲ್ಲವೆಂದು ತಿಳಿಯಬೇಡಿರಿ. ನಾನೊಂದು ಅತಿ ಮಹತ್ವವಾದ ಕೆಲಸ ಮಾಡಿರುವೆನು.' 'ಅದೇನು?'

'ಕಲಿಂಗ ರಾಜಪುತ್ರಿ ಬೇಗನೆ ಕನ್ನಡ ದೊರೆಗಳ ಸನ್ನಿಧಾನಕ್ಕೆ ಬರಲಿರುವಳು.' 'ಆಂ, ಇದೇನು ವಿಚಿತ್ರ ಸಂಗತಿ!'

'ಸೇನಾಪತಿಗಳೇ, ನಾನು ಹೇಳಿದುದು ಸಟೆಯಲ್ಲ.' 'ಏಕೆ?'

'ಅವರು ಬಂದನಂತರವೇ ತಿಳಯುತಕ್ಕುದು.'

'ಸಾಧಾರಣವಾಗಿ ಬರುವ ಕಾರಣ ತಿಳಿದಿರಬಹುದಲ್ಲವೆ?'

'ಕನ್ನಡ ರಾಜ್ಯಲಕ್ಷ್ಮಿಯು ಕನ್ನಡ ಸಿಂಹಾಸನವನ್ನಾಶ್ರಯಿಸಲು ಬರಬಹುದು.' 'ಏನು ಮಂತ್ರಿಗಳೇ, ಬಹಳವಾಗಿ ಹಾಸ್ಯಕ್ಕೆಡೆಯಾಗಿರುವಿರಿ?'

'ಅಲ್ಲ ಮಹಾಪ್ರಭು, ಉಪಹಾಸವಲ್ಲ ಪ್ರಭುಗಳೇ, ಜಗನ್ಮೋಹಿನೀ ದೇವಿಯನ್ನು ನಾನು ನೋಡಿ ಬಂದೆನು. ಏನು ರಾಜಲಕ್ಷಣಗಳು! ಏನು ದಿವ್ಯರೂಪು! ಆ ಮಹಾತಾಯಿಯ ಕರದಲ್ಲಿನ ಲಕ್ಷಣಗಳಂತೂ ಅತ್ಯಂತ

ತೇಜಸ್ವಿಯಾಗಿವೆ. ಇಂತಹ ಭಾಗ್ಯಲಕ್ಷ್ಮಿಯು ತಾನೇ ಒಲಿದು ಬರುವಳೆಂದಲ್ಲಿ ಆನಂದವಾಗಬೇಡವೆ?'

'ಅಂತೂ ಜೋಯಿಸರ ಕಾರ್ಯ ಚೆನ್ನಾಗಿ ಕೈಗೂಡಿಸಿರುವಿರಿ.'

'ಪ್ರಭುಗಳೇ, ನಿಜವಾಗಿಯೂ ನನ್ನ ಸ್ವಭಾವವೆಂದರೆ, ಯಾವದೊಂದು ಸಂಗತಿಯನ್ನು ಚನ್ನಾಗಿ ಸಮಾಲೋಚಿಸುವದು.' 'ಮುಂದೆ?'

'ಮಹಾಪ್ರಭುಗಳು ಜಗನ್ಮೋಹಿನಿದೇವಿಯಲ್ಲನುರಕ್ತರಾದ ಸಂಗತಿ ಕೇಳುತ್ತಲೆ, ಆ ದೇವಿ ಅನುಪಮ ರೂಪವತಿಯೂ ಶುಭಲಕ್ಷಣಸಂಪನ್ನೆಯೂ ಇರಬೇಕೆಂದು ನಿರ್ಧರಿಸಿದ್ದೆನು; ಆದರೂ ಒಂದು ಸಲ ನೋಡಲೇಬೇಕೆಂಬ ಲವಲವಿಕೆ ಬಹಳವಿತ್ತು ಅನಾಯಾಸವಾಗಿ ಸಂಧಿಯೂ ಸಾಧಿಸಿತು ಜಗನ್ಮೋಹಿನೀದೇವಿ ನಮ್ಮ ದೊರೆಗಳ ಅರ್ಧಾಂಗಿಯಾದಲ್ಲಿ ನಮ್ಮ ಮಹಾಪ್ರಭುಗಳು ಪೂರ್ಣ ಸುಖಿಯಾಗುವರಲ್ಲದೆ, ಕನ್ನಡ ಪ್ರಜೆಗಳೂ ಆನಂದವನ್ನನುಭವಿಸುವರು; ಮತ್ತು ವಿಜಯನಗರ ಸಾಮ್ರಾಜ್ಯವೂ ವಿಶೇಷವಾಗಿ ಘನತೆಗೇರುವದು. ನಿಜವಾಗಿಯೂ ನಮ್ಮ ದೊರೆಗಳಿಗೆ, ವಿಜಯನಗರಸಾಮ್ರಾಜ್ಯಕ್ಕೆ, ಕನ್ನಡಿಗರಿಗೆ ಸಂಪೂರ್ಣ ತಕ್ಕವಳಾದ ದೇವಿಯೆಂದರೆ, ಜಗನ್ಮೋಹಿನೀದೇವಿಯೇ ಎಂದು ನನಗೆ ಮನವರಿಕೆಯಾಗಿದೆ ಆ ಮಹಾತಾಯಿ ನಮ್ಮನ್ನೆಲ್ಲ ಚನ್ನಾಗಿ ಜೋಪಾನ ಮಾಡುವಳು.'

'ಮಹಾಮಂತ್ರಿಗಳೇ, ನಿಮ್ಮ ಮುಂದಿನ ವಿಚಾರವೇನು?'

'ಈಗಲೆ ಯಾವದನ್ನೂ ಹೇಳಲಾರೆನು.' 'ಇನ್ನಾವಾಗ ಹೇಳುವಿರಿ?'

'ಜಗನ್ಮೋಹಿನೀದೇವಿ ಬೇಗನೆ ಬರಲಿರುವಳು ಮಹಾಪ್ರಭುಗಳನ್ನು ಕಾಣುವಳು. ಅನಂತರವೇ ಏನೆಂಬ ವಿಷಯಕ್ಕೆ ನಿರ್ಧರಿಸುವಾ.'

'ಸರ್ವಸಾಮಾನ್ಯ ನಿಮಗೆ ತೋರಿದ ವಿಷಯವನ್ನೇ ಹೇಳಲಿಲ್ಲವಲ್ಲ?'

'ಸರ್ವಸಾಮಾನ್ಯ ವಿಷಯವೇನು? ಗಜಪತಿ ಮೆತ್ತಗಾಗಿರುವನು. ನಮ್ಮ ದೊರೆಗಳ ಸದ್ಗುಣಗಳೂ ಅವನ ಮನಸ್ಸನ್ನಾಕರ್ಷಿಸಿವೆ; ಆದರ ತಾನಾಗಿ ಸಂಧಿಗೆ ಮುಂದೊರೆಯಲು ಮನಸ್ಸಿಲ್ಲದವನಾಗಿರುವಂತೆ ಕಾಣುವನು.' 'ಯುದ್ಧದ ಸಿದ್ಧತೆ ಹೇಗಿದೆ?'

'ತನ್ನ ಬಲವನ್ನೆಲ್ಲ ಕಲೆ ಹಾಕುತ್ತಲಿರುವನು. ಯುದ್ಧದ ವಿಷಯಕವಾಗಿ ಸಂಪೂರ್ಣ ಸಿದ್ಧತೆಯಿರುವದು.'

'ಹಾಗಾದರೆ ಸಂಧಿ ಹೇಗಾಗುವದು?'

'ಅದನ್ನು ನಾನು ಈಗಲೆ ಹೇಳಲಾರೆನು.'

———

## ೯ ಸಂದರ್ಶನ.

ಜಗನ್ಮೋಹಿನಿ-ಶಶಿಲೇಖೆಯರು ತಮ್ಮ ಕರ್ತೃತ್ವಶಕ್ತಿಯಿಂದ ಕರ್ನಾಟಕ-ಕಲಿಂಗಗಳಲ್ಲಿ ಸಂಧಿ ಸಾಧಿಸಿ, ತಮ್ಮ ಮನವನ್ನಾಕರ್ಷಿಸಿದ ಪ್ರಿಯರನ್ನು ಪಡೆಯಬೇಕೆಂದು ನಿರ್ಧರಿಸಿದ್ದು ಹಿಂದೆ ಬಂದಿದೆ. ಅದೇ ಯೋಚನೆಯಲ್ಲಿಯೇ ಅವರೀರ್ವರೂ ತೊಡಗಿದ್ದರು ಅವರು ತಮ್ಮ ಕಾರ್ಯವನ್ನು ಬಹಳ ದಕ್ಷತೆಯಿಂದ ಕೈಗೂಡಿಸಬೇಕಾಗಿದ್ದಿತು; ಏಕೆಂದರೆ, ಆ ಸಂಗತಿ ಗಜಪತಿಗೆ ತಿಳಿದಿದ್ದರೆ, ಅವನೆಂದೂ ಸುಮ್ಮನಿರುತ್ತಲಿರಲಿಲ್ಲ. ಸೋಲಿನ ಕಲಂಕವು ಆತನಿಗೆ ಸಾಕಷ್ಟಕ್ಕಿಂತ ಹೆಚ್ಚೇ ಆಗಿದ್ದಿತು. ನರಪತಿಯ ಶೌರ್ಯ-ಸದ್ಗುಣಗಳ ಪರಿಚಯವು ಅವನಿಗೆ ಚನ್ನಾಗಿ ಇದ್ದಿತು ಮುಂದಾದರೂ ತನಗೆ ಸೋಲು ನಿಶ್ಚಿತವೇ ಎಂದು ಆತನಿಗೆ ಮನವರಿಕೆಯಾಗಿದ್ದಿತು ಅಂತಹನ ಮಿತ್ರತ್ವ ಸಾಧಿಸುವದೇ ಒಳಿತೆಂದು ಅವನು ಯೋಚಿಸುತ್ತಲಿದ್ದನು, ಆದರೆ – ಅಭಿಮಾನ ಒಂದಿದ್ದಿತಲ್ಲ? ನಾಕ ಅಪಮಾನವೇ ಸಾಕಷ್ಟಾಗಿದ್ದಿತು. ಆದರಲ್ಲಿ ಮತ್ತೆ ತಾನೇ ಸಂಧಿಗೆಂದು ಮುಂದೊರೆಯುವುದೆಂತು? ಏನೇ ಆದರೂ ಕೊನೆಯವರೆಗೆ ಯುದ್ಧ ಮಾಡುವುದೇ ಎಂದು ಅವನು ನಿರ್ಧರಿಸಿ ಯತ್ನಿಸುತ್ತಲಿದ್ದನು. ಇಂತಹ ಸಮಯದಲ್ಲಿ ತನ್ನ ಮಗಳು ಕನ್ನಡ ರಾಜನ ಬಳಿಗೆ—ತಮ್ಮ ಕಲಿಂಗ ನಾಡಿನ ಸ್ವಾತಂತ್ರ್ಯನಾಶಕ ಶತ್ರುವಿನ ಬಳಿಗೆ-ಹೋಗುವುದೆಂದರೆ, ಅವನಿಗೆಂದಾದರೂ ಸಮ್ಮತವಾದೀತೆ? ಅಂತೆಯೇ ಜಗನ್ಮೋಹಿನಿ ಬಹಳ ಗೊಂದಲಕ್ಕೊಳಗಾಗಿದ್ದಳು. ಇದಲ್ಲದೆ ತಾನು ಕೈಕೊಂಡ ಕಾರ್ಯ ಯೋಗ್ಯವಾಗಿದ್ದಿತೆ? ಅದರ ಪರಿಣಾಮ ಹಿತವಾದುದಿದ್ದಿತೆ? ಅದರಿಂದ ತನಗೂ ತನ್ನ ನಾಡಿಗೂ ಒಳಿತಾಗುವಂತಿದ್ದಿತೆ? ಇವೆಲ್ಲ ಸಂಗತಿಗಳು ಆಕೆಗೆ ಬಹಳ ಪೀಡೆಯನ್ನುಂಟುಮಾಡುತ್ತಲಿದ್ದವು. ಅನೇಕ ಬಗೆಯಾಗಿ ಯೋಚಿಸಿದಳು. ಅನೇಕ ವಿಧವಾಗಿ ವಿಚಾರಿಸಿದಳು ಶಶಿಲೇಖೆಯೊಬ್ಬಳ ಉತ್ತೇಜನವಿಲ್ಲದಿದ್ದರೆ, ಜಗನ್ಮೋಹಿನಿ ಇಂತಹ ಕಾರ್ಯಕ್ಕೆ ಎಂದೂ ಕೈಹಾಕುವುದು ಶಕ್ಯವಿರಲಿಲ್ಲ.

'ಲೇಖೆ, ನಾವು ಹೋದರೆ ತಂದೆಗೆ ತಿಳಿಯಲಿಕ್ಕಿಲ್ಲವೆ? ಆ ಮೇಲೆ ಅವರು ಕೋಪಿಸಬಹುದು, ಆದುದರಿಂದ ಪೂರ್ಣ ಯೋಚಿಸಿ ಕಾರ್ಯ ಕೈಕೊಳ್ಳತಕ್ಕದು'

'ರಾಜಪುತ್ರಿ, ಅಹುದು ನಿನ್ನ ಅಭಿಪ್ರಾಯ ನಿಜವಿದೆ, ಆದರೆ ನಾವಾದರೂ ಯೋಚಿಸದ ಕಾರ್ಯ ಕೈಕೊಳ್ಳಲಿರುವುದಿಲ್ಲ.'

'ಹಾಗಾದರೆ ನಾವು ಸಿಂಹಾದ್ರಿಯವರೆಗೆ ಹೋಗಲೇಬೇಕೆಂದು ನಿನ್ನ **ಅಭಿಪ್ರಾಯವೋ?'**

'ಅಂದರೆ, ನಿನಗೆ ಇನ್ನೂ ಸಂದೇಹವಿದೆಯೇ?'

'ನಾನಿನ್ನೂ ಪೂರ್ಣ ವಿಚಾರಿಸಿಲ್ಲ.'

'ಹಾಗಾದರೆ ನಿರ್ಣಯವಾಗುವುದಾವಾಗ?'

'ಛೆ! ನನಗೆ ಏನೂ ತಿಳಿಯದಾಗಿದೆ.'

'ಸಂಶಯಾತ್ಮಾ ವಿನಶ್ಯತಿ' ಆದುದರಿಂದ ಈ ಸಂಶಯವೃತ್ತಿಯಿಂದ ಏನೂ ಉಪಯೋಗವಿಲ್ಲ ನೋಡು. ಈ ಒಂದು ಸಂಧಿಯನ್ನು ನಾವು ಕಳೆದರೆ, ಮುಂದಿನ ಪರಿಣಾಮಗಳೇನಾಗುವವೆಂಬ ಯೋಚನೆ ಮಾಡು. ಕನ್ನಡ ದೊರೆಯು ಬಲಿಷ್ಠನಿರುವನು. ಚತುರನಿರುವನು. ಯುದ್ಧ ಕಲೆಯಲ್ಲಿ ಪರಿಪೂರ್ಣನಿರುವನು. ಆತನ ಸಹಾಯಕರಾದರೂ ಆತನಿಗೆ ಯಾವ ವಿಧದಲ್ಲಿಯೂ ಕೊರತೆಯುಳ್ಳವರಿಲ್ಲ ಇಂತಹ ಆತನು ಮುಂದಾಗಲಿರುವ ಕಲಿಂಗ-ಕರ್ನಾಟಕ ಯುದ್ಧದಲ್ಲಿ ನಿಶ್ಚಯವಾಗಿ ಗೆಲ್ಲುವನು ಆಗ್ಗೆ ಕಲಿಂಗದ ಗತಿಯೇನಾಗಬಹುದೆಂಬದನ್ನು ನೀನೇ ತಿಳಿದು ನೋಡು. ಇನ್ನಾ ಸಂಗತಿಗಳನ್ನು ಮರೆತರೂ, ಯುದ್ಧದಲ್ಲಾಗುವ ಅಪಾರ ಪ್ರಾಣಹಾನಿ, ಅಪರಮಿತ ಸಂಪತ್ತಿಯ ನಾಶ, ತಂದೆ ಸತ್ತ, ಪತಿಗಳನ್ನು ಕಳಿದುಕೊಂಡ, ಪುತ್ರರು ನಾಶವಾದ, ಮಕ್ಕಳ ಶೋಕ, ಮಡದಿಯರ ಗೋಳಾಟ, ಮಾತೆಯರ ಕಳವಳಗಳನ್ನು ನೆನಪಿಗೆ ತಂದುಕೊಳ್ಳು. ಯುದ್ಧದ ಪರಿಣಾಮವಾಗಿ ಕಲಿಂಗವು ಕುಂಕುಮ ವಿಹೀನಳಾದ ಸತಿಯಂತಾಗಬಹುದು. ಆ ಯುದ್ಧದಲ್ಲಿ ಯಾರ ಅವಸ್ಥೆ ಏನಾದೀತೆಂಬದಂತೂ ಊಹೆಗೆ ಮೀರಿದುದಿದೆ. ನಿನ್ನ ಅವಸ್ಥೆಯೇ ಆ ಮೇಲೆ ಏನಾದೀತೆಂಬದು ಕೂಡ ಊಹಿಸಲು ಬರುವಂತಿಲ್ಲ. ನೋಡು ನಾವು ಕೈಕೊಳ್ಳಲಿರುವ ಕಾರ್ಯದಲ್ಲಿ ಸ್ವಾರ್ಥವಿರುವದೇನೋ ಸಟಿಯಲ್ಲ, ಆದರೆ ತನ್ಮೂಲಕ ದೇಶ, ರಾಷ್ಟ್ರ, ಪ್ರಜಗಳಿಗೂ ಹಿತವಾಗುವುದಲ್ಲದೆ, ಕಲಿಂಗ-ಕರ್ನಾಟಕಗಳಲ್ಲಿದ್ದ ವೈರಭಾವ ನಷ್ಟವಾಗಿ, ಮಧುರ ಸ್ನೇಹ ನೆಲೆಗೊಳ್ಳುವುದು. ರಾಜಪುತ್ರಿ, ನಿಜವಾಗಿಯೂ ಹೇಳಬೇಕೆಂದರೆ .... ...'

'ಲೇಖೆ, ಸಾಕು ಸಾಕು. ನಾನೀಗ ನೀನು ಹೇಳಿದಂತೆ ಮಾಡಲು ಸಿದ್ಧಳಿರುವೆನು. ಹೊರಡುವುದಾವಾಗ ಹೇಳು?'

'ಇಂದು ತೃತೀಯ ಪ್ರಹರದ ಕೊನೆಗೆ. ಮತ್ತೆ ಮೊಬ್ಬಾಗುವ ಸಮಯಕ್ಕೆ ಮರುಳತಕ್ಕುದು. ಇಷ್ಟು ಸಮಯ ಸಾಕಾಗುವುದು.'

'ನಡೆಯುತ್ತಲೇ ಹೋಗುವುದಲ್ಲವೆ?'

'ಏಕೆ, ನಿನಗೆ ಬೇಸರವೇನು?'

'ಛೆ! ಹಾಗೇನಿಲ್ಲ, ಸುಮ್ಮನೆ ಕೇಳದೆ.'

'ನಾನೆಲ್ಲವೂ ಸಿದ್ಧ ಮಾಡಿರುವೆನು. ಕಾಲುದಾರಿಯಿಂದ ಹೊರಟ ಭೀತಿಯೇನೂ ಇಲ್ಲ, ಮತ್ತು ಅರ್ಧಪ್ರಹರದಲ್ಲಿ ತಲುಪಬಹುದು.'

'ಇಲ್ಲಿ ಸೇವಕರಿಗೆ ಏನೆಂದು ತಿಳುಹಬೇಕು?'

'ಪ್ರತಿದಿನವೂ ನಾವು ವಾಯುವಿಹಾರಾರ್ಥವಾಗಿ ಇಲ್ಲಿಯೇ ಹೋಗು ದಿಲ್ಲವೆ? ಹಾಗೆಯೇ ತಿಳುಹಬೇಕು; ಮತ್ತು ನಿತ್ಯದ ಸಮಯಕ್ಕೇನೇ ಮರ ವೆವು; ಅಂದರೆ ತೊಂದರೆಯೇನೂ ಆಗದು.'

'ಒಬ್ಬಿಬ್ಬ ಸೇವಕರನ್ನು ಕರೆದೊಯ್ಯುವುದು ಒಳಿತಲ್ಲವೆ?'

'ಏಕೆ, ಭೀತಿಯೆನಿಸುತ್ತಿದೆಯೇನು?'

'ಹಾಗೇನೂ ಇಲ್ಲ; ಆದರೂ ಸಂಗಡ ಕರೆದೊಯ್ಯುವದೊಳಿತೆಂದು .

'ಛೆ! ರಾಜಪುತ್ರಿ, ಅದು ಮಾತ್ರ ಬೇಡ.' 'ಏಕೆ?'

'ನಾವೀ ಕಾರ್ಯವನ್ನು ಬಹಳ ಗುಪ್ತವಾಗಿ ಕೈಕೊಳ್ಳಬೇಕಾಗಿ ಇನ್ನಾರಿಗೂ ತಿಳಿಯಕೂಡದು; ಮತ್ತು ಈಗ ನಮ್ಮ ದೇಶವನ್ನಾಕ್ರಮಿ ದವರು ಮಹಮ್ಮದೀಯರಲ್ಲ, ಸಚ್ಛೀಲರಾದ ಕನ್ನಡಿಗರು. ನಮಗೆ ಯಾ ಬಗೆಯ ಆಪತ್ತಿಯೂ ಒದಗಲಾರದು. ಒಂದುವೇಳೆ ಅಂತಹ ಸಂಗ ಯೇನಾದರೂ ಸಂಭವಿಸಿದರೆ, ನಮ್ಮ ಕಿರುಗತ್ತಿಗಳಿಲ್ಲವೆ?'

'ಹಾಗೆಯೇ ಆಗಲಿ.'

ಹೀಗೆ ನಿರ್ಧರವಾಗಿ ಈರ್ವರೂ ತೃತೀಯ ಪ್ರಹರ ಕೊನೆಗೊಳ್ಳು ಸಮಯಕ್ಕೆ ಹೊರಟರು.

ಬೆಂಗದಿರನ ಬಿಚ್ಚಿನ ಕಿರಣಗಳು ಭೂಮಿಯನ್ನು ಬೆಳಗುತ್ತಲಿದ್ದು ಬೇಸಿಗೆ ಕಾಲವಾದುದರಿಂದ ಬನದೊಳಗಿನ ಪ್ರಾಣಿವರ್ಗವೆಲ್ಲವೂ ತ ತಮ್ಮ ಗೂಡು-ಬೀಡುಗಳಲ್ಲಿ ಸೇರಿ ವನದ ರಮಣೀಯತೆ ನೋಡು ಪ್ರಸನ್ನಮನದಿಂದ ಕುಳಿತಿದ್ದುವು ತೃತೀಯ ಪ್ರಹರ ಕಳೆಯುತ್ತ ಬರ ಚಂಡಭಾಸ್ಕರನ ಕೋಪವು ತಕ್ಕಮಟ್ಟಿಗೆ ಶಾಂತವಾಯಿತು. ಮೆಲ್ಲಗೆ ಒಂದೊ ವೇ ಪ್ರಾಣಿ ಹೊರಗೆ ಕಾಲಿಕ್ಕಹತ್ತಿತು. ಬಿಸಿಲು ಎಷ್ಟೇ ಪ್ರಖರವಾದರೂ ದೊಳಗಿನ ವೃಕ್ಷರಾಜಿಗಳು ಹೆತ್ತು ಹೊತ್ತ ಉಪಕಾರಕ್ಕಾಗಿ ಭೂಮಾತೆಯ ಕಾಪಾಡಬೇಕೆಂಬ ಉದ್ದೇಶದಿಂದ ದಟ್ಟಾಗಿ ಸೂರ್ಯರಶ್ಮಿಗಳಿಗೆ ಕೆಳಗಿಳಿಯ ಅವಕಾಶ ಸಿಕ್ಕದಂತೆ ನಿಂತಿದ್ದುವು, ಆದರೆ ಅಂತಹ ಸದ್ಬುದ್ಧಿ ಪ್ರಾಣಿವ ಕ್ಕೆಲ್ಲಿ? ಅವು ಸ್ವಾರ್ಥೈಕ ದೃಷ್ಟಿಯಿಂದ ಬೇರೆ ಯೋಚನೆ ಮಾಡದೆ, ತ ಕಷ್ಟವಾಗಬಹುದೆಂಬ ಭೀತಿಯಿಂದ ವೃಕ್ಷರಾಜಿಗಳಿಗೆ ಮೊರೆ ಹೋಗ ಲಿದ್ದುವು. ಸಜ್ಜನರಾವಾಗಲೂ ಸಜ್ಜನರೇ! ಭೂಮಾತೆಯ ತಾಪ ಪರಿತ

ಕ್ಕೆಂದು ನಿಂತ ಅವು ಪ್ರಾಣಿವರ್ಗದ ಸಂಕಟವನ್ನೂ ಪರಿಹರಿಸಲು ಹಿಂದೆ ಬೀಳ ಲಿಲ್ಲ. ಮಹಾಪ್ರತಾಪಿ ಭಾಸ್ಕರನ ಬೇಗೆಗೆ ಬೇಗುದಿಗೊಂಡು ಬಳಲಿದ ಪ್ರಾಣಿಗಳೆಲ್ಲವನ್ನೂ ತಮ್ಮ ನೆಳಲಲ್ಲಿಟ್ಟು ತಮ್ಮ ಚಿಗಿತ ಹಸುರೆಲೆಗಳ ಗಾಳಿಯಿಂದ ಸಂತೈಸುತ್ತಲಿದ್ದುವು; ಆದರೆ ಇಳಿಹೊತ್ತಾಗಲು ಎಲ್ಲರೂ ತಮ್ಮ ತಮ್ಮ ಕಾರ್ಯ ಸಾಧನೆಗೆಂದು ಹೊರ ಹೊರಡುವುದರಲ್ಲಿದ್ದರು. ಮಂದಮಾರುತನಾದರೂ ಕಡು ಪ್ರತಾಪಿ ರವಿರಾಜನಿಗೆ ಭಯಪಟ್ಟು ಅಡಗಿ ಕುಳಿತವನು, ಮೆಲ್ಲನೆ ಬಯಲಿಗೆ ಬರುವುದರಲ್ಲಿದ್ದನು. ಪಶುಪಕ್ಷ್ಯಾದಿಗಳೆಲ್ಲವೂ ತಮ್ಮ ತಮ್ಮ ಆಹಾರ ಶೋಧನೆಗೆಂದು ಬಹಿರ್ಮುಖವಾಗಿದ್ದರು

ಇಂತಹ ಸಮಯದಲ್ಲಿ ಶಶಿಲೇಖ ಮತ್ತು ಜಗನ್ಮೋಹಿನಿಯರೀರ್ವರೂ ಕಾಲುದಾರಿಯೊಂದರಿಂದ ಹೊರಟಿದ್ದರು ಇಬ್ಬರ ಬಾಯಿಗೂ ಬೀಗ ಬಿದ್ದಂತಾಗಿದ್ದಿತು ಸುತ್ತಲಿನ ರಮ್ಯ ನೋಟವು ಅವರ ಮನರಂಜನೆ ಮಾಡಲು ಸಮರ್ಥವಾಗಲಿಲ್ಲ ಚಿಗಿತ ಗಿಡ-ಬಳ್ಳಿಗಳು ನಿಸರ್ಗ ರಮಣೀಯ ಸೌಂದರ್ಯವನ್ನು ಬಿಂಬಿಸುತ್ತಲಿದ್ದುವು. ಮಂದಮಾರುತನು ಮನೋಹ್ಲಾದಕ ಸುವಾಸವನ್ನು ಹೊತ್ತು ಹತ್ತುದಿಕ್ಕುಗಳಲ್ಲಿಯೂ ಹರಡುತ್ತಲಿದ್ದನು. ಮನಮೋಹಕ ಮಾಧುರ್ಯವನ್ನೀಂಟಿದ ತುಂಬಿಗಳು ಮದವೇರಿ ಮಧುರವಾಗಿ ಹಾಡುತ್ತಲಿದ್ದುವು. ಹಸುರು ಹುಲ್ಲಿನ ಮರೆಯಲ್ಲಿಯೇ ಅರಳಿದ ಅನೇಕ ವನ್ಯಕುಸುಮಗಳು ಮಾನವತಿಯರಂತೆ ಮೆಲ್ಲಗೆ ಮೊಗವೆತ್ತುತ್ತಲಿದ್ದುವು .ಇನ್ನೂ ಇಂತಹ ಸುಮಧುರ ನೋಟಗಳು ಅನೇಕವಾಗಿದ್ದುವು; ಆದರೆ ಅವಾವುಗಳಿಂದಲೂ ಅವರಿಗೆ ಉಪಯೋಗವಾಗುವಂತಿರಲಿಲ್ಲ. ಮೂಕ ಮನದಿಂದ ಮುಂದೆ ಸಾಗಿದ್ದರು. ಇಬ್ಬರ ತಲೆಯಲ್ಲಿಯೂ ಒಂದೇ ವಿಚಾರ ಮನೆ ಮಾಡಿದ್ದಿತು. 'ಕನ್ನಡ ದೊರೆಯಲ್ಲಿ ದೊರೆಯುವ ಮನ್ನಣೆ ಹೇಗಾದೀತು?' ನಿಜವಾಗಿಯೂ ಸಾಹಸದ ಕಾರ್ಯಕ್ಕೆ ಪ್ರವೃತ್ತರಾಗಿದ್ದರು. ಅದುವರೆಗೂ ಕನ್ನಡರಾಜನ ಯಶೋದುಂದುಭಿಯನ್ನು ಚನ್ನಾಗಿ ಕೇಳಿದ್ದರು, ಜನಮುಖದಿಂದ ನರಪತಿಯ ಗುಣಗಾನವನ್ನು ಕಿವಿಗಳಿಗೆ ಸಾಕೆನಿಸುವಂತೆ ಕೇಳಿದ್ದರು, ವಿಜಯನಗರ ಸಾಮ್ರಾಜ್ಯದೊಡೆಯನ ಶೌರ್ಯೌದಾರ್ಯಗಳನ್ನು ಮನದಣಿಯ ಕೇಳಿದ್ದರು. ಅಷ್ಟರಿಂದಲೇ ರಾಯನ ವಿಷಯಕವಾಗಿ ಅವರು ಒಳ್ಳೇ ಅಭಿಪ್ರಾಯವುಳ್ಳವರಾಗಿದ್ದರು; ಮತ್ತು ಕನ್ನಡದವರನು ಆದರ ಪೂರ್ವಕವಾಗಿ ನಡೆಯಬಹುದೆಂದು ಊಹಿಸಿಯೇ ಅವರು ಹೊರಟಿದ್ದರು ಆದರೂ ಸಂದೇಹವೊಂದು ಇದ್ದೇ ಇದ್ದಿತು. 'ಒಂದುವೇಳೆ ನಮ್ಮ ವಿಷಯಕವಾಗಿ ತಿರಸ್ಕಾರ ವ್ಯಕ್ತಪಡಿಸಿದರೆ ಹೇಗೆ?' ಎಂಬುದೇ ಅವರ ಶಂಕೆಯಾಗಿದ್ದಿತು.

ಅಂತೆಯೇ ಅವರೀರ್ವರ ಮನವು ಸುತ್ತಲಿರುವ ರಮಣೀಯ ನೋಟದಿಂದ ರಂಜಿತವಾಗಲಿಲ್ಲ.

ನಾಲ್ಕನೆಯ ಪ್ರಹರದ ಪೂರ್ವಾರ್ಧದಲ್ಲಿಯೇ ಅವರೀರ್ವರು ಸಿಂಹಾದ್ರಿಗೆ ತಲುಪಿದರು ವೇಳೆಗಳೆಯುವಂತಿರಲಿಲ್ಲ. ಅವರೀರ್ವರೂ ಗುಪ್ತವೇಷದಿಂದ ನರಪತಿಯ ಶಿಬಿರಕ್ಕೆ ತಲುಪಿದರು ಬಾಗಿಲಿಗೆ ತಲುಪುತ್ತಲೆ ತಮ್ಮ ಬಿನ್ನಹ ಪತ್ರವನ್ನು ಒಳಗೆ ಕಳುಹಿದರು. ಅಲ್ಪಾವಕಾಶದಲ್ಲಿಯೇ ಕನ್ನಡ ರಾಜ್ಯದ ಚತುರ ಮಂತ್ರಿ ಅಪ್ಪಾಜಿ ಹೊರಗೆ ಬಂದು, ಅವರನ್ನು ಆದರ ಪೂರ್ವಕವಾಗಿ ಒಳಗೆ ಕರೆದೊಯ್ದನು.

ಜಗನ್ಮೋಹಿನಿಯ ಸ್ಥಿತಿ ವಿಚಿತ್ರವಾಗಿದ್ದಿತು ಎಷ್ಟೇ ಧೀರತೆ ತಳೆದರೂ ಅಧೀರತೆ ಬೆನ್ನು ಬಿಡದಾಯಿತು. ಆಕೆ ತನ್ನ ಭಾವೀ ಪತಿಯ ಸಮೀಪಕ್ಕೆ ಹೋಗುತ್ತಲಿದ್ದಳು ಅದೂ ಸರ್ವಸಾಮಾನ್ಯ ರೀತಿಯಿಂದಲ್ಲ, ಆಕೆಯದೇ ಒಂದು ನವರೀತಿಯಾಗಿದ್ದಿತು ಕಲಿಂಗ-ಕರ್ನಾಟಕಗಳಲ್ಲಿ ಮೈತ್ರಿಯನ್ನುಂಟು ಮಾಡುವ ಮಹತ್ವದ ಕಾರ್ಯ ಆಕೆಯ ಮೇಲಿದ್ದಿತು. ತನ್ಮೂಲಕ ತನ್ನ ಉದ್ದಿಷ್ಟ ನೆರವೇರಿಸಬೇಕಿದ್ದಿತು. ತಲೆಯಲ್ಲಿ ತುಂಬಿ ಹೋಗಿದ್ದ ಭಿನ್ನ ಭಿನ್ನ ವಿಚಾರಗಳ ಭಾರದ ಮೂಲಕವೋ ಏನೋ ಆಕೆಯ ತಲೆ ತಗ್ಗಿದ್ದಿತು, ಕಾಲು ತತ್ತರಿಸುತ್ತಲಿದ್ದವು, ಶರೀರ ಕಂಪಿಸುತ್ತಲಿದ್ದಿತು, ಮೊಗ ಕೆಂಪಾಗಿದ್ದಿತು; ಆದರೂ ಧೈರ್ಯದಿಂದ ಮುಂದಾಗಲೇಬೇಕಿದ್ದಿತು.

ಮುಂದು ಮುಂದು ಅಪ್ಪಾಜಿ, ಆತನ ಹಿಂದೆ ಶಶಿಲೇಖೆ, ಎಲ್ಲಕ್ಕೂ ಹಿಂದೆ ಜಗನ್ಮೋಹಿನಿ ಹೀಗೆ ಮೂವರೂ ನರಪತಿಯಲ್ಲಿಗೆ ಹೋದರು. ಸೇನಾಪತಿ ರಾಮಲಿಂಗನು ಆದರದಿಂದ ಎದ್ದು ನಿಂತು, ಜಗನ್ಮೋಹಿನಿಗೆ ವಂದನೆಯನ್ನರ್ಪಿಸಿದನು. ಹಾಗೆಯೇ ಶಶಿಲೇಖೆಯ ಮೇಲೊಂದು ನಲ್ನೋಟ ಬೀರಲು ಮರೆಯಲಿಲ್ಲ ಶ್ರೀಕೃಷ್ಣದೇವರಾಯನು ನಗುಮುಖದಿಂದ:—'ಕಲಿಂಗ ರಾಜನಂದಿನಿಗೆ ಸುಸ್ವಾಗತವು' ಎಂದು ನುಡಿದು, ಅಲ್ಲಿಯೇ ಇದ್ದ ಆಸನಗಳನ್ನು ಸ್ವೀಕರಿಸಲು ಬಿನ್ನವಿಸಿದನು.

ತನಗೆ ದೊರೆತ ಸತ್ಕಾರವು ತನ್ನ ಕಲ್ಪನೆಗಿಂತಲೂ ಹೆಚ್ಚಾದುದನ್ನು ನೋಡಿ, ಜಗನ್ಮೋಹಿನಿಗೆ ಬಹಳ ಆನಂದವೆನಿಸಿತು. ಕೆಳಮೊಗಳಾಗಿ ಸುಮ್ಮನೆ ಕುಳಿತುಬಿಟ್ಟಳು. ಒಂದು ಸಲ ಮೇಲೆ ನೋಡಬೇಕೆಂದು ಮನಸ್ಸು ಎಷ್ಟುಪಟ್ಟರೂ ಮೊಗ ಮೇಲಾಗಲು ಒಪ್ಪಲಿಲ್ಲ.

ಕೊಂಚ ಸಮಯ ಸ್ತಬ್ಧತೆಯಲ್ಲಿಯೇ ಕಳೆಯಿತು. ಕೂಡಲೆ ಕುಶಲಮತಿಯಾದ ಅಪ್ಪಾಜಿಯು, 'ಕಲಿಂಗ ರಾಜಕುಮಾರಿ ಇಂದು ಬಂದ ಕಾರಣ

ವನ್ನು ತಿಳಿಸಿದರೆ, ಕರ್ನಾಟಕ ಸಾರ್ವಭೌಮರು ಅದನ್ನು ಸಮಾಲೋಚನೆ ಮಾಡಬಹುದು.' ಎಂದನು.

ಜಗನ್ಮೋಹಿನಿಯ ಬಾಯಿಗೆ ಬೀಗ ಬಿದ್ದುಹೋಗಿದ್ದಿತು. ಜಗನ್ಮೋಹಿನಿಯೇ ಮಾತನಾಡಬಹುದೆಂದು ಶಶಿ ಒಂದು ಕ್ಷಣ ತಡೆದಳು; ಆದರೆ ಆಕೆ ಬಾಯಿ ಬಿಚ್ಚುವ ಲಕ್ಷಣ ತೋರಲಿಲ್ಲವಾದುದರಿಂದ ತಾನೇ ಉತ್ತರವೀಯಬೇಕಾಯಿತು: 'ಕರ್ನಾಟಕದ ಮಹಾಮಂತ್ರಿಗಳೇ ಮತ್ತು ವಿಜಯನಗರದ ಸಾರ್ವಭೌಮರೇ, ಈ ದಿನ ಅನಿವಾರ್ಯವಾಗಿ ಕರ್ನಾಟಕ-ಕಲಿಂಗಗಳ ಭಾವೀ ಹಿತವನ್ನನುಲಕ್ಷಿಸಿ, ಭಾರತೀಯರು ತಮ್ಮ ತಮ್ಮಲ್ಲಿಯೇ ಬಡಿದಾಡುವ ಈ ಅನುಚಿತ ಕಾರ್ಯಕ್ಕೆ ತಡೆಹಾಕಬೇಕೆಂದು ರಾಜಕುಮಾರಿ ತಾನೇ ಸ್ವತಃ ಕರ್ನಾಟಸಿಂಹಾಸನಾಧೀಶ್ವರರ ಬಳಿಗೆ ಬಂದಿರುವಳು' ಎಂದಳು.

'ಹೀಗಿದ್ದರೆ ಅದು ಒಳಿತೇ ಆಯಿತು. ನಮ್ಮ ಮಹಾರಾಜರಾದರೂ ಭಾರತೀಯರಾದ ನಾವೆಲ್ಲರೂ ಒಬ್ಬ ತಾಯಿಯ ಮಕ್ಕಳಾದುದರಿಂದ ನಾವೀರ್ವರೂ ಬಂಧುಭಾವದಿಂದಲೇ ವ್ಯವಹರಿಸಬೇಕೆನ್ನುವ ಅಭಿಪ್ರಾಯದವರಿರುತ್ತಾರೆ; ಆದರೆ ಅನಿವಾರ್ಯಪಕ್ಷ ಯುದ್ಧಕ್ಕೆ ಪ್ರವೃತ್ತರಾಗಬೇಕಾಯಿತು. ಆಗಲಿ. ಆ ವಿಷಯ ಈಗ ಬೇಕಿಲ್ಲ. ಕರ್ನಾಟಕ-ಕಲಿಂಗಗಳಿಗೆ ಹಿತವಹವಾಗುವಂತಹ ಉಚಿತ ಸೂಚನೆಗಳನ್ನಿತ್ತರೆ, ಅದರಿಂದ ನಮ್ಮ ಪ್ರಭುಗಳು ಉಪಕೃತರಾಗುವರು' ಅಪ್ಪಾಜಿ ಪುನಃ ಉತ್ತರವಿತ್ತನು

'ಸೂಚನೆಯನ್ನೇನೋ ಕೊಡಲಿರುವರು, ಆದರೆ ಅದಕ್ಕೆ ಮೊದಲು ಕನ್ನಡ ಪ್ರಭುಗಳು ಒಂದು ವಿಷಯದ ಬಗ್ಗೆ ಆಶ್ವಾಸನೆ ಕೊಡಬೇಕು.' ಶಶಿಲೇಖೆಯೆಂದಳು.

'ಯೋಗ್ಯವಾದ ಯಾವ ಆಶ್ವಾಸನೆಯನ್ನಾದರೂ ಕನ್ನಡದೊರೆಗಳು ಕೊಡುವರು. ಆಶ್ವಾಸನವೇನು? ಎಂಬದನ್ನು ತಿಳುಹಬಹುದು.' ಅಪ್ಪಾಜಿಯೆಂದನು.

'ಈಗ ನಾವು ಬಂದ ವಿಷಯವನ್ನಾಗಲಿ ಇಲ್ಲವೆ ಕನ್ನಡದರಸಿನೊಡನೆ ಚರ್ಚಿಸಿದ ಸಂಗತಿಯನ್ನಾಗಲಿ ಬಹಿರಂಗಪಡಿಸಕೂಡದು. ಈ ಬಗ್ಗೆ ಆಶ್ವಾಸನೆಯಿತ್ತರೆ ಮಾತ್ರ ನಮ್ಮ ರಾಜನಂದಿನಿ ತಮ್ಮ ಸೂಚನೆ ಕೊಡುವರು' ಶಶಿಲೇಖೆಯೆಂದಳು.

ಅಪ್ಪಾಜಿ ರಾಯನತ್ತ ನೋಡಿದನು. ರಾಯನು ಸಮ್ಮತಿ ಸೂಚಿಸಿದನು. 'ಈ ಬಗ್ಗೆ ಕಲಿಂಗ ರಾಜಪುತ್ರಿಯವರು ಭೀತರಾಗಲು ಕಾರಣವೇನೂ ಇಲ್ಲ. ಅವರ ಸೂಚನೆ ಮಾನ್ಯವಿದೆ.' ಎಂದನು

ಶಶಿಲೇಖೆ ರಾಜಪುತ್ರಿಯತ್ತ ನೋಡಿದಳು. ಆಕೆ ಲೆಖೆಗೆ ಮುಂದೆ ಮಾತನಾಡಲು ಸೂಚಿಸಿ, ತಾನು ಮೌನವಾಗಿಯೇ ಉಳಿದಳು.

'ಪ್ರಭುಗಳು ಯುದ್ಧಕಾರ್ಯದಿಂದ ಪರಾವೃತರಾಗಿ ಮೈತ್ರಿಗೆ ಸಿದ್ಧರಿರುವರೆ? ನಾನು ಮತ್ತೆ ಕೇಳಿದುದಕ್ಕೆ ಕ್ಷಮೆ ಇರಲಿ.' ಶಶಿಲೇಖೆಯೆಂದಳು.

'ಉಚಿತವಾದ ರೀತಿಯಿಂದ ಮೈತ್ರಿ ದೊರೆವುದಾದರ ಇವರಾವಾಗಲೂ ಸಿದ್ಧರೇ ಇರುತ್ತಾರೆ ಆ ಬಗ್ಗೆ ಅತ್ಯಲ್ಪವಾದರೂ ಸಂದೇಹವಿಲ್ಲ.' ಅಪ್ಪಾಜಿಯೆಂದನು.

ಅಲ್ಲಿ ಐವರಿದ್ದರೂ ಮಾತನಾಡುವ ಹೊಣೆಯನ್ನು ಇಬ್ಬರೇ ಹೊತ್ತಂತಾಗಿದ್ದಿತು. ಉಳಿದ ಮೂವರೂ ಮೌನವಾಗಿ ಕುಳಿತುಬಿಟ್ಟಿದ್ದರು.

'ಹಾಗಾದರೆ ತಮ್ಮ ಸಂಧಿಯ ಸೂಚನೆ ಯಾವ ಪ್ರಕಾರದ್ದಿದೆ?' ಶಶಿಲೇಖೆಯೆಂದಳು

'ನಮ್ಮ ಸೂಚನೆಯೇನೇ ಇರಲಿ; ಆದರೆ ಈ ಕಲಿಂಗ ರಾಜಪುತ್ರಿಯವರೇನೂ ಗಜಪತಿಯವರಿಂದ ಸಂಧಿಯ ದೌತ್ಯ ಸ್ವೀಕರಿಸಿ ಬಂದಿಲ್ಲವಷ್ಟೇ?

'ಇಲ್ಲ.'

'ಹಾಗಾದರೆ ಅವರು ನಮಗೆ ಯಾವ ಸಂಗತಿ ಸೂಚಿಸಲಿರುವರು?'

'ಅವರ ಸೂಚನೆಯೆಂದರೆ, ಕನ್ನಡ ಪ್ರಭುಗಳೇ ಸಂಧಿಗೆ ಮುಂದಾಗಬೇಕು' 'ಅಂದರೆ?'

'ಸಂಧಿಯ ಸೂಚನೆಯನ್ನು ನಮ್ಮ ಮಹಾರಾಜರ ಬಳಿಗೆ ಮೊದಲು ಕನ್ನಡ ದೊರೆಗಳೇ ಕಳುಹಬೇಕು.'

'ಸದ್ಯದ ಸಮಯದಲ್ಲಿ ಇದು ಅಶಕ್ಯವೆಂದು ತೋರುತ್ತದೆ.'

'ಅದೇಕೆ?'

'ಕಲಿಂಗರಾಜರು ತಮ್ಮ ಬಲವಾದ ಸಿದ್ಧತೆಯಲ್ಲಿ ತೊಡಗಿರುವರೆಂದು ನಾವು ಕೇಳುತ್ತೇವೆ. ಇಂತಹ ಸಮಯದಲ್ಲಿ ನಾವೇ ಸಂಧಿಗೆಂದು ಮುಂದಾದರೆ, ಜನರು ನಮಗೆ ಏನೆನ್ನಬಹುದು? ಗಜಪತಿಯ ಬಲಕ್ಕೆ ಭಯಪಟ್ಟರೆಂದೆನ್ನಲಿಕ್ಕಿಲ್ಲವೆ? ಇದರಿಂದ ಕನ್ನಡ ದೊರೆಗಳ ಮನ್ನಣೆಗೆ ಕೊರತೆಯುಂಟಾಗಲಿಕ್ಕಿಲ್ಲವೆ? ವಿಜಯನಗರದ ಘನತೆಗೆ ಕುಂದು ಬಂದಂತಾಗಲಿಕ್ಕಿಲ್ಲವೆ? ಕನ್ನಡ ಪ್ರಭುಗಳಿಗೆ ಕೀಳ್ಮೆ ಪ್ರಾಪ್ತವಾಗಲಿಕ್ಕಿಲ್ಲವೆ? ಹೀಗಾಗುವದು ಕಲಿಂಗ ರಾಜಪುತ್ರಿಗೆ ಸರಿದೋರುವುದೇ?'

'ಛೆ, ಅವರು ಹಾಗೆ ಎಂದೂ ಇಚ್ಛಿಸುವುದಿಲ್ಲ'

'ಹಾಗಾದರೆ ಅವರ ಸೂಚನೆಯೇನಿದೆ?'

'ಕನ್ನಡ ಪ್ರಭುಗಳು ತಮಗೆ ಯೋಗ್ಯವಾದ ರೀತಿಯಲ್ಲಿಯೇ ಸಂಧಿ ಸಾಧಿಸಬೇಕೆಂದು ಸೂಚನೆಯಿರುತ್ತದೆ.'

'ಯೋಗ್ಯವಾದ ರೀತಿಯಲ್ಲಾದರೆ, ನಮ್ಮ ಪ್ರಭುಗಳು ಆವಾಗಲೂ ಸಿದ್ಧರೇ ಇರುತ್ತಾರೆ, ಆದರೆ..... ..........'

'ಆದರೆ ಏನು?' 'ಗಜಪತಿಯ ಸಿದ್ಧತೆಯಂತೂ ನಡೆದಿದೆಯಲ್ಲವೆ?'

'ಅಹುದು, ನಡೆದಿದೆ; ಮತ್ತು ರಾಜಪುತ್ರಿಯರಾದರೂ ಅದೇ ಸಂಬಂಧ ದಲ್ಲಿ ಸೂಚನೆ ಮಾಡಬಯಸುತ್ತಾರೆ.' 'ಅದೇನು?'

'ಮಹಾರಾಜರು ತಮ್ಮ ಚಾತುರ್ಯದಿಂದ ನಮ್ಮ ರಾಜರ ಬಲವನ್ನೆಲ್ಲ ವಿಫಲವಾಗಿ ಮಾಡಿ, ಆದರಿಂದ ಸಂಧಿಗೆ ಸಹಾಯ ಮಾಡಬೇಕು.'

'ಒಳ್ಳೇ ವಿಚಿತ್ರವಾದ ಸಲಹೆ! ಕಲಿಂಗ ರಾಜರು ಸಂಧಿಗೆ ಮುಂದಾ ಗದೆ ನಾವೇ ಮುಂಬರುವುದೆಂತು?'

'ಸೋತ ಅಪಮಾನದಿಂದ ಅವರು ಬೆಂದ ಹೃದಯದವರಾಗಿರುತ್ತಾರೆ; ಅದರಲ್ಲಿ ಸಂಧಿಗೆಂದು ಪ್ರಾರ್ಥಿಸುವುದು ಅವರಿಗೆ ಇನ್ನೂ ಅಪಮಾನಕರವೆನಿ ಸುವುದು ಸ್ವಾಭಾವಿಕವಿದೆ. ಇಂತಹ ಸಮಯದಲ್ಲಿ ಕನ್ನಡ ದೊರೆಗಳೇ ಮೈತ್ರಿ ಯ ಕರವನ್ನು ಮುಂದೆ ಮಾಡಿದರೆ, ಸೋಲಿನಿಂದ ಜೋಲು ಮೋರೆ ಹಾಕಿದ ಕಲಿಂಗ ರಾಜರಿಗೆ ಮೊಗವೆತ್ತಲನುವಾಗುವುದಲ್ಲದೆ, ಅವರ ಹೃದಯ ಕೃತ ಜ್ಞತೆಯಿಂದ ತುಂಬಿ ಹೋಗಬಹುದು; ಮತ್ತು ಇದರಿಂದ ಪ್ರಭುಗಳ ಘನತೆ ಬೆಳೆಯುತ್ತಲೇ ಹೋಗುವುದಲ್ಲದೆ, ಕನ್ನಡಿಗರ ಮಾನ-ಮನ್ನಣೆಗಳೂ ಬೆಳೆ ಯುವುದರಲ್ಲಿ ಸಂದೇಹವಿಲ್ಲ'

ಅಪ್ಪಾಜಿ ಶಶಿಲೇಖೆಯ ಮಾತುಗಳನ್ನು ಕೇಳಿ ಆನಂದಭರಿತನಾದನು ಅವನು ಶಶಿಲೇಖೆಯಿಂದ ಮತ್ತೆ ಬೇರೆ ಬೇರೆ ಸಂಗತಿ ದೊರಕಿಸಿದನು ಇಷ್ಟು ಸಮಯಕ್ಕೆ ಅಸ್ತಮಯ ಕಾಲ ಸಮೀಪಿಸಿತು. ಶಶಿಲೇಖೆ ತಾವು ಹೊರಡುವ ಸೂಚನೆ ಮಾಡಿದಳು ಅದುವರೆಗೆ ಜಗನ್ಮೋಹಿನಿ ಸ್ತಬ್ಧಳಾಗಿ ಕುಳಿತುಬಿಟ್ಟಿ ದ್ದಳು ತಾನೂ ಮಾತನಾಡಬೇಕೆಂದು ಬಹಳವಾಗಿ ಯತ್ನಿಸಿದಳು; ಆದರೆ ಅದೇಕೋ ಮುಖದಿಂದ ಮಾತೇ ಹೊರಡದಾದುವು. ಆಗಾಗ್ಗೆ ಕರ್ನಾಟಕ ದೊಡೆಯನ ಮೊಗದತ್ತ ತನ್ನ ನೋಟ ಕಳುಹುತ್ತ ಕುಳಿತುಬಿಟ್ಟಿದ್ದಳು. ಮಾತಾಡುವ 'ಮಕ್ತೆ'ಯನ್ನು ಅಪ್ಪಾಜಿ ಮತ್ತು ಶಶಿಲೇಖೆಯರೇ ವಹಿಸಿ ದ್ದರು. ರಾಮಲಿಂಗ ಅಲ್ಲಿಯೇ ಕುಳಿತಿದ್ದನು. ಆತನಾದರೂ ನಾಲಿಗೆಗೆ ಚಾಲನೆ ಕೊಡಲಿಲ್ಲ. ಅಪ್ಪಾಜಿಯಂತಹ ಚತುರನೂ ಹೆಸರುವಾಸಿಯೂ ಆದ ತಮ್ಮ ರಾಜ್ಯದ ಹೊಣೆಗಾರ ಮಂತ್ರಿಯೇ ಮಾತನಾಡುತ್ತಲಿರಲು, ತನ್ನ

ಜಾಣತನಕ್ಕೆ ಅಲ್ಲಿ ಅವಕಾಶವಿರಲಿಲ್ಲವೆಂದು ಅವನು ಭಾವಿಸಿದ್ದನು; ಮತ್ತು ಅಂದಿನ ವಿಷಯ ಮಹತ್ವದ ರಾಜಕಾರಣವಾಗಿತ್ತು. ಯುದ್ಧಕಲೆಯಲ್ಲಿ ನಿಪುಣನಾದ ತನಗೆ ರಾಜಕಾರಣದಲ್ಲಿ ಅಷ್ಟು ಜ್ಞಾನವಿರಲಿಲ್ಲವೆಂದು ಅವನರಿತಿದ್ದನು. ಇದಲ್ಲದೆ ತಾನೇನಾದರೂ ಬಾಯಿಹಾಕಿ ಒಂದು ಸಮಯೋಚಿತವಲ್ಲದ ಮಾತನಾಡಿ ಬಿಟ್ಟರೆ, ಅದರಿಂದ ಉಪಹಾಸಕ್ಕೊಳಗಾಗಬಹುದಲ್ಲದೆ ಕಾರ್ಯ ಹಾನಿಯಾದರೂ ಆಗಬಹುದು, ಎಂಬ ಭೀತಿಯಿಂದ ಅವನು ಸುಮ್ಮನೆ ಕುಳಿತಿದ್ದನು. ತನ್ನ ಮನದನ್ನೆಯ ಮಾತು ಕೇಳುವುದೇ ಅವನ ಮುಖ್ಯ ಉದ್ಯೋಗವಾಗಿದ್ದಿತು. ಆಕೆಯ ಚಾತುರ್ಯಕ್ಕೆ ಅವನು ತಲೆದೂಗಿದನು. ಅದರಲ್ಲಿ ಮೃದುಮಾತುಗಳಿಂದಲೇ ತನ್ನ ಕಾರ್ಯಸಾಧನೆ ಮಾಡಿಕೊಳ್ಳುವ ಶಶಿಲೇಖೆಯ ಕಲೆಯಂತೂ ಆತನಿಗೆ ಅತ್ಯಾನಂದವನ್ನುಂಟು ಮಾಡಿತು. ಮೊದಲು ಸಲ ಕೂಡಿದಾಗಲೇ ಆಕೆ ಚತುರಮತಿಯಿದ್ದಳೆಂದು ಕಂಡಿದ್ದನು; ಆದರೆ ರಾಜಕಾರಣದಲ್ಲಿ ಇಷ್ಟು ಮುಂದೊರೆದವಳೆಂದು ಅವನರಿತಿರಲಿಲ್ಲ ತನ್ನಲ್ಲಿದ್ದ ಕೊರತೆಯನ್ನು ಆಕೆ ಪೂರಯಿಸುವಳೆಂದು ಅವನು ಭಾವಿಸಿದನು. ಅತ್ತ ರಾಯನ ಸ್ಥಿತಿಯಾದರೂ ಹಾಗೆಯೇ ಆಗಿದ್ದಿತು. ಅತ್ಯಂತ ಧೀರ ಹೃದಯಿಯಾದ ಆತನ ಸ್ಥಿರಹೃದಯವನ್ನೂ ಅಲುಗಾಡಿಸಿದ ಆ ಸುರಸುಂದರಿ ಸಮೀಪದಲ್ಲಿಯೇ ಕುಳಿತುದರಿಂದ, ಮತ್ತೆ ಮತ್ತೆ ಆ ಮನಮೋಹಿನಿಯ ಮಧುರ ರೂಪ ನೋಡುವನು 'ಆಕೆಯ ಇನಿನುಡಿ ಕೇಳಬೇಕು, ಆಕೆಯೊಡನೆ ಮಾತುಗಳಾಡಬೇಕು' ಎಂಬಭಿಲಾಷೆಯೂ ಇದ್ದಿತು; ಆದರೆ ಸಾಧಿಸುವದೆಂತು? ಮೋಹಿನಿಯಂತೂ ಮುಗ್ಧಭಾವದಿಂದ ಮೂಕಳಾಗಿ ಕುಳಿತಿದ್ದಳು ಆ ಮುಗ್ಧ ಸೌಂದರ್ಯವಾದರೂ ಅತೀವ ಮನೋಹರವೇ ಆಗಿದ್ದಿತು ಆಗ ಮತ್ತೆ ಮತ್ತೆ ಮೋಹಿನಿಯ ಸಿರಿಮೊಗವನ್ನು ನೋಡುವುದೇ ಆತನ ಉದ್ಯೋಗವಾಗಿದ್ದಿತು

ಹೀಗೆ ಅವರವರ ಮನೋವ್ಯಾಪಾರಗಳು ಸೂಕ್ಷ್ಮವಾಗಿ, ಸುಮಧುರವಾಗಿ, ಸುಸಂಗತವಾಗಿ ಸಾಗಿರುವಾಗಲೆ ಸೂರ್ಯಾಸ್ತ ಸಮಯವಾಗಲು, ಶಶಿಲೇಖೆ ಮರಳುವ ಸೂಚನೆಯಿತ್ತಳು. ಅದರಿಂದ ಮೂವರಿಗೂ ಖೇದವಾಯಿತು ಆ ಆನಂದಮಯ ಮಧುರ ಮಿಲನವು ಕೊನೆಯವರೆಗುಳಿಯಬೇಕೆಂದು ಅವರ ಆಕಾಂಕ್ಷೆಯಾಗಿದ್ದಿತು. ಇದನ್ನು ಶಶಿಲೇಖೆಯಾದರೂ ಅರಿತಿರಲಿಲ್ಲವೆಂದಲ್ಲ. ಆಕೆಯಾದರೂ ಅಲ್ಲಿಂದ ಹೊರಡುವ ಮನಸ್ಸುಳ್ಳವಳಾಗಿರಲಿಲ್ಲ, ಆದರೆ ಅಂದು ಬೇಗನೆ ಮರಳುವುದೇ ಮುಂದೆ ಅಗಲದಂತೆ ಕೂಡುವುದಕ್ಕೆ ಕಾರಣವೆಂದು ಆಕೆಯರಿತಿದ್ದಳು.

ಸಾಯಂಕಾಲ ಸಮೀಪಿಸಲು ಅವರು ಹೋಗಲೆದ್ದರು. ಶಶಿಲೇಖೆ ಮತ್ತೆ ಮತ್ತೆ ಸಂಗತಿಯನ್ನು ಗುಪ್ತವಾಗಿರಿಸಲಿಕ್ಕೂ ಮತ್ತು ಆವುದೊಂದು ಚತುರೋಪಾಯದಿಂದ ಸಂಧಿ ಸಾಧಿಸಬೇಕೆಂದೂ ಸೂಚಿಸಿದಳು. ಅಪ್ಪಾಜಿ ಯಾದರೂ ಸಂಗತಿಯನ್ನು ಗುಪ್ತವಾಗಿರಿಸುವ ಬಗ್ಗೆ ವಚನವಿತ್ತುದಲ್ಲದೆ, ಮೈತ್ರಿಯ ಸೂಚನೆಯನ್ನು ಚನ್ನಾಗಿ ಸಮಾಲೋಚಿಸುವ ಆಶ್ವಾಸನೆಯಿತ್ತನು.

ಹೀಗೆ ತಮ್ಮ ಕಾರ್ಯಸಾಧಿಸಿದಂತಾಗಲು, ಜಗನ್ಮೋಹಿನಿ-ಶಶಿಲೇಖೆ ಯರು ಹೊರಡಲನುವಾದರು. ಸಾಯಂಕಾಲದ ಸಮಯವಾದುದರಿಂದ ಅವ ರನ್ನು ಸುರಕ್ಷಿತವಾಗಿ ಕಳುಹಿಸಲು ರಾಮಲಿಂಗನಿಗೆ ಹೋಗುವಂತೆ ಹೇಳಿ ದರು. ಶಶಿಲೇಖೆ ಅವಶ್ಯವಿಲ್ಲವೆಂದಳು; ಆದರೆ ಅದು ಯೋಗ್ಯವಾಗುವು ದಿಲ್ಲವೆಂದು ರಾಯನಂದನು. ಆದುದರಿಂದ ರಾಮಲಿಂಗನು ಅವರೊಡನೆ ಹೊರಟನು. ಜಗನ್ಮೋಹಿನಿ ಒಂದು ಸಲ ರಾಯನನ್ನು ತುಂಬುಗಣ್ಣು ಗಳಿಂದ ನೋಡಿ ಹೊರಡುವ ಮನಸ್ಸಿಲ್ಲದೆ ಹೊರಟಳು.

ಮೂವರೂ ಸಿಂಹಾಚಲದಿಂದ ಹೊರಟರು. ಸಾಯಂಕಾಲದ ವೇಳೆ ಯಾದುದರಿಂದ ಸುತ್ತಲಿನ ನೋಟವು ಬಹಳ ರಮಣೀಯವಾಗಿದ್ದಿತು. ಭಗ ವಾನ್ ಸಹಸ್ರರಶ್ಮಿಯ ಸಾಯಂಕಿರಣಗಳು ಪೊಂಬಣ್ಣದ ಪ್ರಭೆಯಿಂದ ನಿಸರ್ಗಕ್ಕೆ ಮುರುಗು ಹಾಕುವಂತೆ ತೋರುತ್ತಲಿದ್ದಿತು. ಚಿಗಿತ ಮರಗಳಲ್ಲಿ ಆ ಬಂಗಾರದ ಬಣ್ಣದ ಸೂರ್ಯಕಿರಣಗಳು ಹಾಯ್ದು ಅಲ್ಲಲ್ಲಿ ಎಲೆಗಳ ಸಂದುಗಳಿಂದ ಪಾರಾಗಿ ನೆಲದ ವರೆಗೆ ಕನಕದ ಎಳೆಗಳಂತೆ ಹಾಯುತ್ತ ಲಿದ್ದುವು. ಆದರಿಂದ ರಾಮಲಿಂಗನಿಗೆ ವಿಜಯನಗರಸ್ಥಾಪನಾಚಾರ್ಯರಾದ ವೀರಯತಿ ವಿದ್ಯಾರಣ್ಯ ಮಹಾಮುನಿಗಳು ತಮ್ಮ ರಾಜ್ಯಸ್ಥಾಪನೆಗೂ, ವೃದ್ಧಿ ಗೂ ಅವಶ್ಯವಾದ ಸಂಪತ್ತಿಯನ್ನು ಲಕ್ಷ್ಮೀದೇವಿಯಿಂದ ಪಡೆದಸಂಗತಿ ನೆನ ವಾಯಿತು. ಆ ಸಮಯದಲ್ಲಿ ಜಗತ್ತಿನ ಇತಿಹಾಸದಲ್ಲಿಯೇ ಅಭೂತಪೂರ್ವ ವಾಗಿ, ಸಕಲ ಮಾನವ ಜನಾಂಗವನ್ನೇ ಚಕಿತಗೊಳಿಸುವಂತೆ, ತಮ್ಮ ಅಸ ದಳ ತಪೋರಾಶಿಯ ಬಲದಿಂದ ಕರೆದ ಸುವರ್ಣ ವೃಷ್ಟಿಯ ಸ್ಮರಣೆಯಾಗ ದಿರಲಿಲ್ಲ ಅಂದು ಮರ್ತ್ಯರು-ತಮ್ಮ ಪೂರ್ವಜರು-ಇದೇ ಕರ್ನಾಟಕದ ವೀರ ಕನ್ನಡಿಗರು ಪ್ರತ್ಯಕ್ಷವಾಗಿ, ತಮ್ಮ ಸುದೈವದಿಂದ, ತಮ್ಮ ಕಣ್ಣುಗಳಿಂದಲೇ ಕಂಡು ಅನುಭವಿಸಿ ಅತ್ಯಾನಂದ ಹೊಂದಿದ ಕಮನೀಯ ನೋಟವನ್ನು ಒಳ ಗಣ್ಣುಗಳಿಂದ ಅವನು ನೋಡಹತ್ತಿದನು. ಮನಸ್ಸು ಅಂತರ್ಮುಖವಾಯಿತು. ದೃಷ್ಟಿ ಬಾಹ್ಯ ಸೃಷ್ಟಿಯನ್ನು ಮರೆಯಿತು. ಅವರೊಡನೆ ಮುಂದೆ ಸಾಗುತ್ತ ಲಿದ್ದರೂ ಮೈಮೇಲೆ ಭಾನವಿಲ್ಲದವರಂತೆ ಹೊರಟಿದ್ದನು. ತನ್ನ ಆ ಅತ್ಯಂತ

ಮಧುರತಮ ಸ್ವರ್ಗೀಯ ದಿವ್ಯ ನೋಟದಲ್ಲಿಯೇ ಮಗ್ನನಾಗಿ ಹೋಗುತ್ತಲಿರಲು, ಒಂದು ಕಂಟಿಯನ್ನು ಎಡವಿ ಬೀಳಲಿದ್ದನು. ಶಶಿಲೇಖೆ ಎಚ್ಚರಿಸಲು ಕಣ್ದೆರೆದನು.

'ಏನು ಸೇನಾಪತಿಗಳೇ, ಅದಾವುದೋ ಗಹನ ವಿಚಾರದಲ್ಲಿ ಮಗ್ನರಾಗಿರುವಿರಿ?'

'ರಾಜಪುತ್ರಿಯವರೇ, ಈ ಗಿಡಗಳ ಎಲೆಗಳ ಸಂದುಗಳಲ್ಲಿ ಹಾಯ್ದು ಬರುತ್ತಲಿರುವ ಸೂರ್ಯ ರಶ್ಮಿಗಳನ್ನು ನೀವು ನೋಡುವಿರಲ್ಲವೆ?'

'ನೋಡದೇನು? ಸಂಧ್ಯಾಕಾಲವಾದುದರಿಂದ ಕೆಂಬಣ್ಣದ ಅಂದವಾದ ಕಿರಣಗಳು ಸುಂದರಾಕಾರವ ವೃಕ್ಷ ಸಂದಣಿಯಲ್ಲಿ ಬೀಳಲು ಅಲ್ಲಲ್ಲಿ ಸಂದುಗಳಿಂದ ಹಾಯ್ದು ಭೂಮಿಗಿಳಿಯುವ ಬಂಗಾರದೆಳೆಗಳಂತೆ ಅತ್ಯಂತ ರಮಣೀಯವಾದ ನೋಟವನ್ನು, ನೋಡುವ ಶಕ್ತಿಯಿದ್ದ ಪ್ರತಿಯೊಂದು ವ್ಯಕ್ತಿಯೂ ನೋಡಿಯೇ ನೋಡುವನು. ಏಕೆ, ಲೇಖೆ?'

'ಅಹುದು ರಾಜಪುತ್ರೀ. ಈ ರಮಣೀಯವಾದ ಸೂರ್ಯ ರಶ್ಮಿಗಳು, ನಮ್ಮೀ ವನಗಳ ಸೊಬಗಿಗೆ ಮನಸೋತು ಸ್ವರ್ಗವನ್ನು ಬಿಟ್ಟು ವೃಕ್ಷಸಂದಣಿಯಲ್ಲಿ ವೈಮರೆತು ಆನಂದದಿಂದ ವಿಹರಿಸುವ ದಿವ್ಯಾಂಗನೆಯರ ಸ್ಮರಣೆ ತಂದೀಯುತ್ತಲಿವೆ.'

'ರಾಜಪುತ್ರಿಯವರೇ, ಈ ಸುಮಧುರ ನೋಟವೇ ನನ್ನನ್ನೊಂದು ಬೇರೆ ಸೃಷ್ಟಿಯಲ್ಲೆಳೆದೊಯ್ಯಿತು.' 'ಅದಾವುದು?'

'ಚಿರಸ್ಮರಣೀಯವಾದ ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಾದ ಶ್ರೀಮದ್ವಿದ್ಯಾರಣ್ಯರು ತಮ್ಮ ಅತುಲವಾದ ತಪೋಬಲದಿಂದ ತೋರಿದ ಅತ್ಯಂತ ಆಶ್ಚರ್ಯಕರವಾದ ನೋಟವು ನನ್ನ ಸ್ಮರಣೆಗೆ ಬಂದಿತು.'

'ಅಂತಹ ಸುಂದರ ನೋಟವಾವುದು?'

'ಕರ್ನಾಟಕ ಸಾಮ್ರಾಜ್ಯದ ಅಡಿಗಲ್ಲು ಕೂಡಿಸಿದ ಶ್ರೀ ವಿದ್ಯಾರಣ್ಯಯತಿವರರು ಪೂರ್ವಾಶ್ರಮದಲ್ಲಿ ಬಹಳ ಬಡವರಾಗಿದ್ದರು; ಆದರೆ ಶ್ರೇಷ್ಠ ಪಂಡಿತರು.' 'ಮುಂದೆ?'

'ಆಗ್ಗೆ ತಮ್ಮ ವಿದ್ವತ್ತೆಯಿಂದ ಬಡತನ ಹೋಗಲಾಡಿಸಿಕೊಳ್ಳಲು ವಿವಿಧವಾಗಿ ಯತ್ನಿಸಿದರು; ಆದರೆ ಸಾಧ್ಯವಾಗಲಿಲ್ಲ.'

'ಪರಕೀಯರ ಉಪದ್ರವದಿಂದ ತಮ್ಮ ರಕ್ಷಣೆ ಮಾಡಿಕೊಳ್ಳುವ ಯೋಚನೆಯಲ್ಲಿಯೇ ಮಗ್ನರಾದ ರಾಜರಿಗೆ, ವಿದ್ಯಾ-ಬುದ್ಧಿಗೆ ಮನ್ನಣೆ ಕೊಡಲವಕಾಶವೇ ದೊರೆಯುವಂತಿರಲಿಲ್ಲ. ಮುಂದೇನಾಯಿತು?'

'ತಮ್ಮ ದಾರಿದ್ರ್ಯನಾಶಕ್ಕಾಗಿ ವಿದ್ಯಾರಣ್ಯರು ಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡಿದರು'

'ಆಂ, ಲಕ್ಷ್ಮೀದೇವಿಯ ಪ್ರೀತ್ಯರ್ಥವಾಗಿಯೆ?'

'ಅಹುದು; ತಮ್ಮ ಬಡತನ ಹೋಗಲಾಡಿಸಿಕೊಳ್ಳಲು ನಿಶ್ಚಿತ ಮನಸ್ಕರಾದ ಅವರು ಬಹು ಕಠಿಣವಾದ ತಪವನ್ನೆಸಗಿದರು'

'ಹುಂ ಮುಂದೆ?'

'ಲಕ್ಷ್ಮೀದೇವಿ ಅವರ ತಪಸ್ಸಿಗೆ ಪ್ರಸನ್ನಳಾಗಿ ಅವರಿಗೆ ಮೈದೋರಿದಳು.'

'ಇಷ್ಟಾರ್ಥ ಸಿದ್ಧಿಯಾದಂತಾಯಿತು.'

'ಇಲ್ಲ. ಪ್ರತ್ಯಕ್ಷ ಲಕ್ಷ್ಮೀದೇವಿ ಎದುರಿಗಿದ್ದರೂ ಅವರ ಇಷ್ಟಾರ್ಥ ಪೂರ್ತಿಯಾಗಲಿಲ್ಲ.' 'ಅಂದರೆ?'

"ಸಂಪತ್ತಿ ಪಡೆಯುವುದು ಅವರ ದೈವದಲ್ಲಿಯೇ ಇರಲಿಲ್ಲವಂತೆ. ನಿರುಪಾಯಳಾದ ಲಕ್ಷ್ಮೀದೇವಿ 'ಈ ಜನ್ಮದಲ್ಲಿ ನಿನಗೆ ಸಂಪತ್ತಿ ದೊರೆಯದು' ಎಂದು ಸ್ಪಷ್ಟವಾಗಿ ಹೇಳಿಬಿಟ್ಟಳು."

'ಆಂ, ಎಂತಹ ವಿಚಿತ್ರವಿದು! ಬಹು ಕಠಿಣವಾದ ತಪವನ್ನಾಚರಿಸಿ, ಪ್ರತ್ಯಕ್ಷ ಲಕ್ಷ್ಮೀದೇವಿಯನ್ನೇ ಕಂಡರೂ ನಿರಾಶರಾಗಬೇಕಾಯಿತಲ್ಲ!'

'ಇಲ್ಲ. ಅವರು ನಿರಾಶರೆಂದೂ ಆಗಲಿಲ್ಲ.'

'ಆಂ ಅಂದರೆ? ಮುಂದೇನು ಮಾಡಿದರು?'

'ಇನ್ನೊಂದು ಜನ್ಮದಲ್ಲಾದರೂ ಕೊಡುವೆಯಾ? ಎಂದು ಅವರು ಲಕ್ಷ್ಮೀದೇವಿಯನ್ನು ಕೇಳಿದರು.'

'ಆಂ, ಎಂತಹ ವೀರಪುರುಷನವ! ಲಕ್ಷ್ಮಿಯೇನೆಂದಳು?'

'ಕೊಡುವೆನು, ಬೇಕಾದಷ್ಟು ಕೊಡುವೆನು. ಈ ಜನ್ಮವೊಂದು ಕಳೆದರೆ ನೀನು ಬೇಡಿದಷ್ಟು ಕೊಡುವೆನು, ಎಂದು ವಚನವಿತ್ತಳು.'

'ಮುಂದೇನು ಮಾಡಿದರು?'

'ಲಕ್ಷ್ಮೀದೇವಿಯ ಆ ಸಂಪತ್ತಿ ಪಡೆಯಲು ಸಿದ್ಧರಾದರು.'

'ಅವರಿಗೆ ಸಂಪತ್ತಿ ದೊರೆಯಲಿದ್ದುದು ಬೇರೊಂದು ಜನ್ಮದಲ್ಲಲ್ಲವೆ?'

'ಆ ಬೇರೊಂದು ಜನ್ಮವನ್ನೇ ಪಡೆಯಲು ಸಿದ್ಧರಾದರು.'

'ಅಂದರೆ?'

'ಕೂಡಲೆ ಅವರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು.'

'ಆಂ, ಬಹು ಜಾಣಾಕ್ಷರು, ಆಗ ಲಕ್ಷ್ಮಿಯೇನೆಂದಳು?'

'ಅನ್ನುವುದೇನು? ನಿನಗೆ ಬೇಕಾದಾಗ್ಗೆ ಕೊಡುವೆನೆಂದು ವಚನವಿತ್ತಳು.'

'ಹುಂ, ಮುಂದೆ?'

'ವಿಜಯನಗರ ರಾಜ್ಯಕ್ಕೆ ಸಂಪತ್ತಿಯ ಅವಶ್ಯಕತೆ ಬೀಳಲು, ವಿಜಯನಗರದ ಮೇಲೆ ಮೂರೂಮುಕ್ಕಾಲು ಗಳಿಗೆ ಹೊನ್ನಿನ ಮಳೆಯನ್ನೇ ಕರೆಯಿಸಿಬಿಟ್ಟರು.'

'ಅಹಾ, ಧನ್ಯರು! ತಪೋನಿಷ್ಠರಿಗೂ ಧರ್ಮನಿಷ್ಠರಿಗೂ ಅಶಕ್ಯವೆನ್ನುವುದಿಲ್ಲವೇ ಇಲ್ಲ'

'ನಮ್ಮಲ್ಲಿ ಈಗಲೂ ಅಬಾಲವೃದ್ಧರರಿತಿರುವ ಈ ರಮಣೀಯ ನೋಟವನ್ನೇ ವೃಕ್ಷಪಲ್ಲವಗಳಲ್ಲಿ ಹಾಯ್ದು ಬರುತ್ತಲಿದ್ದ ಪೊಂಬಣ್ಣದ ರವಿರಶ್ಮಿಗಳು ಪ್ರತಿಬಿಂಬಿಸುವಂತೆ ತೋರುತ್ತದೆ'

ಹೀಗೆಂದು ಮೂವರೂ ಗಿಡಗಳತ್ತ ನೋಡುತ್ತಾರೆ, ಅಲ್ಲೇನಿದೆ? ಆಗಲೇ ಸೂರ್ಯಾಸ್ತವಾಗಿ ಹೋಗಿದ್ದಿತು. ಆಹಾರಾರ್ಥವಾಗಿ ಹೋದ ಪಕ್ಷಿಗಣವು ತಮ್ಮ ಮರಿಗಳ ಮಧುರ ಸ್ಮರಣೆಯಿಂದ ಇಂಚರಗೆಯ್ಯುತ್ತ ತಮ್ಮ ತಮ್ಮ ಗೂಡುಗಳಿಗೆ ಮರುಳುತ್ತಲಿದ್ದವು ಚಂಡಾತಪದ ಹಿಂದಿನಿಂದ ಬಂದ ಶೀತಲ ರಾತ್ರಿಯನ್ನು ಸಕಲ ಸೃಷ್ಟಿ ಸಂತೋಷದಿಂದ ಸ್ವಾಗತಿಸುತ್ತಲಿರುವಂತೆ ತೋರಿತು. ಭೂಮಿಯನ್ನೆಲ್ಲ ಸುತ್ತಿ ಸುತ್ತಿ ದಣಿದ ಸೂರ್ಯದೇವನು ವಿಶ್ರಾಂತಿಗೆಂದು ಪಶ್ಚಿಮಾದ್ರಿಯಲ್ಲಿ ಮರೆಯಾಗಲು, ಭೂಜನಕ್ಕೆ ತೊಂದರೆಯಾಗಕೂಡದೆಂಬ ಸದ್ಬುದ್ಧಿಯಿಂದ ತಾರಕಾಗಣವು ತೋರಿದವು.

ಮೂವರೂ ಅತ್ಯಾನಂದದಿಂದ ವಿದ್ಯಾರಣ್ಯ ಯತಿವರರ ಸಚ್ಚರಿತ್ರ ಸ್ಮರಣೆಯಲ್ಲಿ ಮಗ್ನರಾಗಿ ಸಾಗಿರುವಾಗಲೇ ದಾರಿ ಹೇಗೆ ಕಳೆಯಿತೆಂಬದೇ ತಿಳಿಯದಾಯಿತು. ರಾಮಲಿಂಗನ ಮನಸ್ಸು ಶ್ರೀ ವಿದ್ಯಾರಣ್ಯಸ್ವಾಮಿಗಳ ಪುಣ್ಯಸ್ಮರಣೆಯಿಂದ ಪರಿಪೂರ್ಣವಾಗಿ ಹೋಗಿದ್ದಿತು. ಜಗನ್ಮೋಹಿನಿ ಶಶಿಲೇಖೆಯರಾದರೂ ಆ ಮಹಾ ಪುರುಷನ ಮಹಚ್ಚಾರಿತ್ರದಿಂದ ತಮ್ಮ ಕಿವಿ-ಮನಗಳು ಪವಿತ್ರವಾದುವೆಂದೇ ಭಾವಿಸಿದರು. ಅಂತಹ ಶ್ರೇಷ್ಠ ಪುರುಷನ ಆಗಾಧ ಕೃತಿಯನ್ನು ಕೇಳುತ್ತಲೆ ತಮಗೆ ಅತೀವ ಆನಂದವಾಯಿತು; ಆದರೆ ಆ ಮಹಾಪುರುಷನಡಿಯಾಳಾಗಿ, ಶಿಷ್ಯರಾಗಿ ಅಂತಹ ಸುಮಧುರ ನೋಟವನ್ನು ನೋಡಿದವರೆಷ್ಟು ಧನ್ಯರು! ಆತನ ಪಾದಸೇವೆ ಮಾಡುವ ಸಂಧಿದೊರೆತವರೆಷ್ಟು ಭಾಗ್ಯವಂತರು!! ಆ ಪುಣ್ಯ ಪುರುಷನನ್ನು ಯಾವಾಗಲೂ ಕಣ್ತುಂಬ ನೋಡುವ ಅವಕಾಶ ದೊರೆತವರೆಷ್ಟು ಸುದೈವಿಗಳು!! ಎಂಬ ಪವಿತ್ರತಮವಾದ ವಿಚಾರಪ್ರವಾಹದಲ್ಲಿ ಮುಳುಗಿ ಹೋಗಿದ್ದರು

ಎಲ್ಲರೂ ವಿಚಾರಮಗ್ನರಾಗಿ ಮುಂದೊರೆಯುತ್ತಿರಲು, ಪ್ರೊಟ್ಟನೂರು ಸಮೀಪಿಸಿತು ರಾಮಲಿಂಗನು ಮರುಳಲನುವಾದನು.

'ಸೇನಾಪತಿಗಳೇ, ಇಂದು ನಮ್ಮ ಆತಿಥ್ಯಸ್ವೀಕರಿಸಿ ಪ್ರಾತಃಕಾಲದಲ್ಲಿ ಹೋಗಬೇಕೆಂದು ಬಿನ್ನವಿಸುತ್ತೇನೆ.'

'ರಾಜಪುತ್ರಿಯವರೇ, ಶ್ರೀ ಜಗನ್ನಾಥನ ಕರುಣೆಯಿದ್ದರೆ ನಿಮ್ಮ ಆತಿಥ್ಯಸ್ವೀಕರಿಸುವ ಯೋಗವು ಬೇಗನೇ ಬರಬಹುದು ದಯವಿಟ್ಟು ಇಂದು ಮಾತ್ರ ಬಲವಂತಪಡಿಸಬೇಡಿರಿ'

'ಏಕೆ, ತಂಪೆಯವರಿಂದ ಅಪಮಾನವಾಗಬಹುದೆಂದು ಭಾವಿಸಿದಿರೇನು?'

'ಛೆ! ಅಂತಹ ಯೋಚನೆಗೆ ಅವಕಾಶವೇ ಇಲ್ಲ ಕಲಿಂಗರಾಜರು ಕರ್ನಾಟಕದ ಶತ್ರುಗಳಾದರೇನಾಯಿತು? ಆದರಿಂದ ಅವರು ಹೀನಮನಸ್ಕರೂ ರೀತಿ-ನಡಾವಳಿಗಳನ್ನರಿಯದವರೂ ಇರುವರೆಂದು ಅನ್ನುವರಾರು? ನಾನು ಇಂದು ಇರಲಾಗುವದಿಲ್ಲವೆಂದುದರ ಕಾರಣವು ಅದಲ್ಲ'

'ಹಾಗಾದರಿನ್ನೇನು?'

'ಕಲಿಂಗ-ಕರ್ನಾಟಕಗಳಲ್ಲಿ ಮೈತ್ರಿ ಬೆಳೆಯಿಸುವ ಮಹತ್ವದ ಹೊಣೆ ನಮ್ಮ ಮೇಲಿರುವುದಲ್ಲವೆ? ಆ ದೃಷ್ಟಿಯಿಂದ ನಾವು ಹೇಗೆ ಮುಂದೊರೆಯತಕ್ಕುದೆಂಬ ಬಗ್ಗೆ ಯೋಚಿಸಬೇಕಾಗಿದೆ ಬಹುಶಃ ನಮ್ಮ ದೊರೆಗಳೂ ಮಂತ್ರಿಗಳೂ ನನ್ನಗೋಸುಗ ಕಾಯುತ್ತಲಿರಬಹುದು'

'ಹಾಗಿದ್ದರೆ ನಾನು ಆತಂಕಪಡಿಸುವದಿಲ್ಲ. ಕಲಿಂಗ ಪ್ರಜೆಗಳೊಡನೆ ಇದುವರೆಗೆ ಸಹಾನುಭೂತಿಪೂರ್ವಕವಾಗಿ ವರ್ತಿಸಿದಂತೆ, ಕಲಿಂಗ ರಾಜರ ವಿಷಯವಾಗಿಯೂ ಸಹಾನುಭೂತಿ ತೋರುವಿರೆಂದು ನಾನು ನಂಬಿರುವೆನು.'

ರಾಮಲಿಂಗನು ವೇಳೆಯಾಗುವದೆಂದು ಸೂಚಿಸಿ, ಅವರಿಂದ ಅಪ್ಪಣೆ ತೆಗೆದುಕೊಂಡು ಮರಳಿದನು.



## ೧೦ ಗಜಪತಿ.

ಶಶಿಲೇಖೆ-ಜಗನ್ಮೋಹಿನಿಯರು ಮರಳಿ ಮುಟ್ಟುವ ಸಮಯಕ್ಕೆ ವೊಬ್ಬು ಗತ್ತಲಾಯಿತು. ಅಂದೇ ಅಕಸ್ಮಾತ್ ಗಜಪತಿಯು ಜಗನ್ಮೋಹಿನಿಯನ್ನು ಕಾಣಲಿಕ್ಕೆಂದು ಬಂದಿದ್ದನು; ಆದರೆ ಆಕೆ ಮನೆಯಲ್ಲಿರಲಿಲ್ಲ. ಎಲ್ಲಿಗೆ ಹೋಗಿರುವರೆಂಬದು ತಿಳಿಯಿತು. ಅವರ ಬಗ್ಗೆ ಭೀತನಾಗಲು ಕಾರಣವಿರಲಿಲ್ಲ. ಆದರೂ ಒಂದಿಲ್ಲೊಂದು ದುಷ್ಟ ಯೋಚನೆಗಳು ಅವನ ಮನಸ್ಸಿನಲ್ಲಿ ಬರ ಹತ್ತಿದವು. ಅವರನ್ನು ಶೋಧಿಸುವಂತೆ ಸೇವಕರಿಗೆ ಅಪ್ಪಣೆಯಿತ್ತು ಕಳುಹುವ ಸಮಯಕ್ಕೆ ಅವರು ಮರಳಿ ಬಂದ ವಾರ್ತೆ ತಿಳಿಯಿತು. ಅಲ್ಪಾವಕಾಶದಲ್ಲಿ ಇಬ್ಬರೂ ಒಳಗೆ ಬಂದರು. ಗಜಪತಿ ಆನಂದದಿಂದ 'ಮಗು, ಮೋಹಿನಿ, ಇಷ್ಟು ಸಮಯ ಎಲ್ಲಿ ಹೋಗಿದ್ದೆ? ನಿಮ್ಮ ನಿತ್ಯದ ವೇಳೆಯಾಗಲು ನಾವೆಲ್ಲರೂ ಆತುರತೆಯಿಂದ ನಿರೀಕ್ಷಣೆ ಮಾಡುತ್ತಲಿದ್ದೆವು.' ಎಂದು ಪ್ರಶ್ನೆ ಮಾಡಿದನು.

ತಾವು ಮನೆಗೆ ಮರಳುವ ಸಮಯ ಮೀರಿದ್ದಿತೆಂದು ಅವರೀರ್ವರೂ ತಿಳಿದಿದ್ದರು; ಆದರೆ ರಾಜಕಾರಣದಲ್ಲಿ ಮಗ್ನನಾದ ಗಜಪತಿ ತಮ್ಮ ಸಮಾಚಾರಕ್ಕೆ ಬರಬಹುದೆಂದೆಣಿಸಿರಲಿಲ್ಲ. ಆದುದರಿಂದ ಅವರು ನಿಶ್ಚಿಂತ ಮನಸ್ಕರಾಗಿದ್ದರು; ಆದರೆ ಮನೆಗೆ ಬರುವಷ್ಟರಲ್ಲಿ ತಮ್ಮ ಸಲುವಾಗಿ ಗೊಂದಲವೇ ಎದ್ದುದನ್ನು ನೋಡಿ, ತಂದೆಗೆ ಏನೆಂದು ಉತ್ತರವೀಯಬೇಕೆಂಬದನ್ನು ಮೋಹಿನಿ ಒಂದು ಕ್ಷಣ ಯೋಚಿಸಿದಳು ಸಮಯಸೂಚಕತೆ ಸ್ತ್ರೀಯರ ಹುಟ್ಟು ಗುಣವು ಆ ಆ ಕಾಲಕ್ಕೆ ತಕ್ಕಂತೆ ಮೇಲ್ತುರಗತಿಯ ಚಾತುರ್ಯ ಅವರಲ್ಲಿ ಯಾವಾಗಲೂ ಕಂಡುಬರುತ್ತದೆ 'ಪಿತಾಜಿ, ಇಂದು ಸೋಮವಾರವಾದುದರಿಂದ ಜಗನ್ನಾಥನ ದರುಶನಕ್ಕೆಂದು ಹೋಗಿದ್ದೆವು.' ಮೋಹಿನಿಯೆಂದಳು

ಶಶಿಲೇಖೆಗೆ ನಗು ಬಹಳವಾಯಿತು. ತಾವು ದರುಶನಕ್ಕೆಂದು ಹೋದ ಜಗನ್ನಾಥ ಬೇರೆಯೇ ಇದ್ದನು ಆದರೂ ಅದನ್ನು ಅತ್ಯಲ್ಪವಾದರೂ ತೋರಗೊಡದೆ, ಮೋಹಿನಿಯ ಎಸುಳ್ಳಿಗೆ ತನ್ನದೊಂದು ಸುಳ್ಳು ಸೇರಿಸಬೇಕೆಂದು ಗಾಬರಿಯ ಮುದ್ರೆಯಿಂದ, 'ಮಹಾರಾಜ, ಆದರೆ ನಮಗೆ ಜಗನ್ನಾಥಮಂದಿರದ ವರೆಗೆ ಹೋಗಲಾಗಲಿಲ್ಲ.' ಎಂದಳು.

ಗಜಪತಿ ಗೊಂದಲದಲ್ಲಿ ಬಿದ್ದನು. ಜಗನ್ನಾಥನ ದರುಶನಕ್ಕೆಂದು ಹೋದವರಿಗೆ ಅಲ್ಲಿಯವರೆಗೆ ಏಕೆ ಹೋಗಲಾಗಲಿಲ್ಲ? ಏನಾದರೂ ತೊಂದರೆ ಸಂಭವಿಸಿತೋ? ಎಂಬ ಶಂಕೆ ಅವನಿಗೆ ಬಂದಿತು. ಅವನು ಕೊಂಚ ಉದ್ವೇಗಮಿಶ್ರಿತ ಸ್ವರದಲ್ಲಿ 'ಏಕೆ ಮಗು, ಅಲ್ಲಿಯವರೆಗೆ ಏಕೆ ಹೋಗಲಾಗಲಿಲ್ಲ?' ಎಂದು ಕೇಳಿದನು.

ಜಗನ್ಮೋಹಿನಿ ಗೊಂದಲಕ್ಕೆ ಸಿಲುಕಿದಳು. ಜಗನ್ನಾಥನ ದೇವಾಲಯದತ್ತ ಕೊಂಚ ಕುಳಿತುದರಿಂದ ತಡವಾಯಿತೆಂದು ಹೇಳಿ ಮುಗಿಸಲಿದ್ದಳು; ಆದರೆ ಶಶಿಲೇಖೆ ಒಂದು ಹೊಸ ಪ್ರಕರಣವನ್ನೇ ಹುಟ್ಟಿಸಿದ್ದಳು. ಹಾಗೆ ಏನೊಂದು ಆಶ್ಚರ್ಯಕರ ಪ್ರಕರಣವನ್ನಾರಂಭಿಸಿದ ಶಶಿಲೇಖೆಯೇ ಮುಂದುವರಿಸುವಳೆಂದರೆ, ಆಕೆ ಸುಮ್ಮನೆ ಉಳಿದಳು. ಜಗನ್ಮೋಹಿನಿ ಒಂದು ಸಲ ಶಶಿಲೇಖೆಯನ್ನು ನೋಡಿದಳು. ಆಕೆ ತುಂಟತನದಿಂದ ಒಂದು ಸಲ ನಕ್ಕಳು. ಅನಿವಾರ್ಯವಾಗಿ, 'ಪಿತಾಜಿ, ನಾವು ಹೋಗುವಾಗ್ಗೆ ದಾರಿಯಲ್ಲೊಂದು ಹುಲಿ ಬಂದಿತು' ಎಂದು ಮೋಹಿನಿ ಮುಂದುವರಿದಳು.

ಗಜಪತಿ ಒಮ್ಮೆಲೆ ಏರಿಕೆಯ ಸ್ವರದಲ್ಲಿ, 'ಹುಲಿ ಬಂದಿತೆ! ಏನು ಮಾಡಿತು? ಹುಚ್ಚು ಹುಡಿಗೆಯರು ನೀವು ಯಾರನ್ನಾದರೂ ಸಂಗಡ ಕರೆದೊಯ್ಯದೆ ಹೋಗಬೇಕೆ?' ಎಂದು ಕೇಳಿದನು.

'ಪಿತಾಜಿ, ನಾವು ಆಗಾಗ್ಗೆ ಹೋಗುವುದಿಲ್ಲವೆ? ಈ ಸಲವಾದರೂ ಹಾಗೆಯೇ ಹೋಗಿದ್ದೆವು.' ಜಗನ್ಮೋಹಿನಿಯೆಂದಳು.

'ಒಳ್ಳೇದು. ಮುಂದೇನಾಯಿತು?' ಗಜಪತಿ ಆತುರತೆಯಿಂದ ಪ್ರಶ್ನೆ ಮಾಡಿದನು

'ಒಮ್ಮೆಲೆ ಆರ್ಭಟೆಯಿಂದ ಬಂದುದೇ ರಾಜಪುತ್ರಿಯರ ಮೇಲೆಯೇ ಬಂದಿತು' ಶಶಿಲೇಖೆ ಒಳ್ಳೇ ಹಾವಭಾವದೊಡನೆ ವಿವರಿಸಿದಳು

ಜಗನ್ಮೋಹಿನಿಗೆ ಶಶಿಲೇಖೆಯ ಹಾಸ್ಯ, ಆಕೆ ಮುಂದೆ ಸೂಚಿಸಲಿದ್ದ ಹಂಚಿಕೆ ತಿಳಿಯಿತು ಆಕೆಯ ಜಾಲದಲ್ಲಿ ಆಕೆಯನ್ನೇ ನೂಕಬೇಕೆಂದು ಯೋಚಿಸಿ—'ಪಿತಾಜಿ, ಆ ಹುಲಿಯ ಅಬ್ಬರಕ್ಕೆ ನಾನು ತೀರಾ ಗಾಬರಿಯಾದೆನು. ಇನ್ನು ಅದರಿಂದ ಪಾರುಗಾಣಲಾರೆನೆಂದೇ ತಿಳಿದೆನು ಇನ್ನು ಕೊಂಚ ಅವಧಿಯಲ್ಲಿಯೇ ನಾನು ಹುಲಿಯ ಬಾಯಿಗೆ ತುತ್ತಾಗುವವಳೇ; ಆದರೆ ಕನ್ನಡಿಗರ ವೀರ ಸೇನಾಪತಿ ಅಕಸ್ಮಾತ್ತಾಗಿ ಅಲ್ಲಿಗೆ ಬಂದುದರಿಂದ ಉಳಿದುಕೊಂಡೆನು' ಎಂದು ವಿವರಿಸಿದಳು.

'ಕನ್ನಡಿಗರ ವೀರ ಸೇನಾಪತಿ' ಎಂದು ನುಡಿದು, ಜಗನ್ಮೋಹಿನಿ ಶಶಿಲೇಖೆಯ ಮೊಗ ನೋಡುವಾಗ್ಗೆ ಅದು ಲಜ್ಜೆಯಿಂದ ಕೆಂಪುಕಮಲವಾಗಿದ್ದಿತು. ಜಗನ್ಮೋಹಿನಿ ಕೊನೆಗೆ ತನ್ನ ಜಾಣತನ ತನಗೇ ತಿರುಗಿಸಿದುದು ತಿಳಿಯುತ್ತಲೆ ಆಕೆ ಕೊಂಚವೇ ನಕ್ಕಳು; ಆದರೆ ಇವರೀರ್ವರ ಕಪಟ ಆ ಗಜಪತಿಗೇನು ಅರಿಕೆ? ಇದೆಯೆಲ್ಲವೂ ದಿಟವೇ ಎಂದು ನಂಬಿ, 'ಕನ್ನಡಿಗರ ವೀರ ಸೇನಾಪತಿಯೆ?' ಎಂದು ಕೇಳಿದನು.

ಜಗನ್ಮೋಹಿನಿ ಏನನ್ನೋ ನೋಡುವವಳಂತೆ ಸುಮ್ಮನಿದ್ದಳು. ಶಶಿಲೇಖೆಗೆ ಉತ್ತರ ಕೊಡುವ ಸರತಿ ಬಂದಿತು. ಒಂದು ಸಲ ವಕ್ರದೃಷ್ಟಿಯನ್ನು ಜಗನ್ಮೋಹಿನಿಯ ಮೇಲೆ ಬೀರಿ:—'ಅಹುದು. ಮಹಾರಾಜರೇ, ಅವರು ತಮ್ಮ ಚಾತುರ್ಯದಿಂದ ಹುಲಿಯನ್ನು ಕಡಿದು ಹಾಕಿ, ರಾಜಪುತ್ರಿಯನ್ನು ಳಿಸಿದರು ' ಎಂದಳು.

'ಅವರು ಅಲ್ಲಿ ಹೇಗೆ ಬಂದಿದ್ದರು?' ಮತ್ತೆ ಗಜಪತಿ ಪ್ರಶ್ನೆ ಮಾಡಿದನು.

'ಅವರು ಜಗನ್ನಾಥನ ದರುಶನಕ್ಕೆಂದು ಬಂದಿದ್ದರಂತೆ. ಜಗನ್ನಾಥನ ದೇವಾಲಯದಿಂದ ಅವರು ಮರಳಿ ಬರುತ್ತಲಿದ್ದರು. ಆ ಸಮಯದಲ್ಲಿ ಆಕಸ್ಮಾತ್ತಾಗಿ ನಮ್ಮ ಸಮೀಪಕ್ಕೇನೇ ಬಂದರು. ನಮ್ಮೆಲ್ಲರ ಸುದೈವದಿಂದ ಬಂದ ಸಂಕಟವನ್ನು ಪಾರು ಮಾಡಿದರು.' ಶಶಿಲೇಖೆ ಉಪ್ಪು-ಕಾರ ಹಚ್ಚಿ ಹೇಳಿದಳು

'ಇಲ್ಲಿಯ ವರೆಗೆ ಕರೆದುತರಬೇಕಿದ್ದಿತು? ಅವರಿಗುಚಿತ ಮನ್ನಣೆ ತೋರಬಹುದಿತ್ತಲ್ಲ!' ಗಜಪತಿ ಕೃತಜ್ಞತಾಪೂರ್ಣ ಸ್ವರದಲ್ಲಿ ಕೇಳಿದನು.

' ನಾವು ಅವರಿಗೆ ಬಹಳವಾಗಿ ಒಲುಮೆ ಮಾಡಿದೆವು. 'ನಾನು ನನ್ನ ಕರ್ತವ್ಯವನ್ನಷ್ಟೇ ಕೈಗೂಡಿಸಿದೆನಲ್ಲದೆ, ಇದರಲ್ಲಿ ಇನ್ನೇನೂ ಮಾಡಲಿಲ್ಲ. ಆದುದರಿಂದ ನಾನು ಅಲ್ಲಿಯವರೆಗೆ ಬರುವ ಆವಶ್ಯಕತೆಯಿಲ್ಲ' ಎಂದು ಹೇಳಿದರು ಆದ್ದರಿಂದ ನಿರುಪಾಯರಾಗಿ ಅವರನ್ನು ಬಿಟ್ಟು ಬಂದೆವು'' ಸುಳ್ಳಿಗೆ ಸುಳ್ಳು ಪೋಣಿಸುತ್ತ ಶಶಿಲೇಖೆ ಹೇಳಿದಳು

ಗಜಪತಿ ಈ ಸಂಗತಿ ಕೇಳಿ ರಾಮಲಿಂಗನ ವಿಷಯಕವಾಗಿ ಸಹಾನುಭೂತಿಯನ್ನೂ ಮಗಳು ಉಳಿದುದಕ್ಕಾಗಿ ಜಗನ್ನಾಥನಿಗೆ ಪ್ರಾರ್ಥನೆಯನ್ನೂ ಸಲ್ಲಿಸಿದನು. ಮತ್ತೆ ತನ್ನ ಕಾರ್ಯಕ್ಕೆ ಮರಳಿದನು.

ಗಜಪತಿ ಹೋಗುತ್ತಲೆ, ಶಶಿಲೇಖೆ-ಜಗನ್ಮೋಹಿನಿಯರು ತಮ್ಮ ಕೋಣೆಯಲ್ಲಿ ಹೋಗಿ ಕುಳಿತರು. 'ಏಕೆ ಲೇಖೆ, ಹೇಗಿದೆ ಹುಲಿ?' ಎಂದು ನಗುತ್ತ ಕೇಳಿದಳು.

'ರಾಜಪುತ್ರಿ, ಹುಲಿಯು ಹೇಗಿದ್ದರೂ, ಬಲೆಯು ಮಾತ್ರ ಭದ್ರವಾದುದು' ಎಂದು ಉತ್ತರವಿತ್ತಳು.

ಹೀಗೆ ಅವರು ಒಬ್ಬರೊಬ್ಬರು ಹಾಸ್ಯಮಾಡುತ್ತ ಕುಳಿತಿರಲು, ಗಜಪತಿ ಇಬ್ಬಗೆಯ ವಿಚಾರಗಳಿಗೆ ಸಿಲುಕಿ ವಿಚಾರ ಮೂಢನಾಗಿ ಕುಳಿತಿದ್ದನು. ಗಜಪತಿಯಲ್ಲಿ ಇನ್ನುಳಿದ ಬಲವಾದರೂ ಬಹಳವಾಗಿದ್ದಿತು. ಅದನ್ನೆಲ್ಲ ಕಲೆ ಹಾಕಿ ಯುದ್ಧಮಾಡಲು ನಿರ್ಧರಿಸಿದ್ದನು; ಆದರೆ ಅಷ್ಟರಿಂದ ಅವನಿಗೆ ಗೆಲು

ವಿನ ಆಶೆ ಬಲವಾಗಿರಲಿಲ್ಲ. ಸೋಲು-ಗೆಲುವುಗಳು ಅನಿಶ್ಚಿತವಾದುದರಿಂದ ಅವನೇನೂ ಅದಕ್ಕೆ ಅಷ್ಟು ಭೀತನಾಗಿರಲಿಲ್ಲ; ಆದರೆ ಸೋತರೆ ಮುಂದಿನ ಚಿತ್ರ ಚಿತ್ರಿಸುವುದೇ ಅವನಿಗೆ ಬಹಳ ತೊಂದರೆಯ ಕಾರ್ಯವಾಗಿದ್ದಿತು. ಸಂಧಿಗಾಗಿ ಪ್ರಾರ್ಥಿಸಿದರೆ ನರಪತಿ ಸಮ್ಮತಿಸಬಹುದಿತ್ತು; ಆದರೆ ಅದರಿಂದ ತನ್ನ ಗೌರವಕ್ಕೆ ಧಕ್ಕೆ ಬರುತ್ತಲಿದ್ದಿತು, ಮನ್ನಣೆಗೆ ಕುಂದು ಬರುತ್ತಲಿದ್ದಿತು; ಮೇಲ್ಮೆಗೆ ಕೀಳ್ಮೆ ಬರುತ್ತಲಿದ್ದಿತು. ಈ ವಿಚಾರದಿಂದ ಅವನು ಬಹಳ ಹಣ್ಣಾದನು. ಅಂತಹ ಸ್ಥಿತಿ ಆತನಿಗೆ ಯಾವಜ್ಜೀವವೂ ಬೇಡವೆನ್ನಿಸುತ್ತಲಿದ್ದಿತು. ಇಂದಿಲ್ಲದಿದ್ದರೆ ಮುಂದೆಂದಾದರೂ ಮರಣ ಮರಳುವುದಲ್ಲ? ಅಪಮಾನದಲ್ಲಿ ನೂರುವರುಷದ ಬಾಳಿಗಿಂತಲೂ ಮನ್ನಣೆಯ ಅಲ್ಪಾಯುವೇ ಮೇಲು. ನಾನು ಅನೇಕ ಸಲ ಆಬ್ಬರದಿಂದ ಹೋಗಿ ದಾಳಿಯಿಟ್ಟ ಕರ್ನಾಟಕದರಸಿನ ಪಾದಕ್ಕೆ ಹೋಗಿ ಬಾಯಲ್ಲಿ ಹುಲ್ಲು ಕಚ್ಚಿ ದೈನ್ಯದಿಂದ ಸಂಧಿಗಾಗಿ ಪ್ರಾರ್ಥಿಸುವುದೆಂತು? ಅವನು ಕೇಳಬಹುದಾದ ಹೀನ ಸಂಗತಿಗೆ-ಅಪಮಾನದ ಕರಾರುಗಳಿಗೆ-ನಿರ್ಬಲನಂತೆ ಸಮ್ಮತಿಸಿ, ಆತನ ಗುಲಾಮನಂತೆ ವರ್ತಿಸುವುದು ಹೇಗೆ? ಇದುವರೆಗೆ ಸ್ವತಂತ್ರ ರಾಜನೆಂದು ಹೆಮ್ಮೆಯಿಂದ ಭಾರತದಲ್ಲೆಲ್ಲ ಮೆರೆದ ನಾನು, ಇನ್ನು ನರಪತಿಯ ಮಾಂಡಲಿಕನಾಗಿ, ಸೇವಕನಂತೆ ಕೈಕಟ್ಟಿಕೊಂಡು, ಕರೆದಾಗ ಹೋಗಿ ಕಾಲ ಕೆಳಗೆ ನಿಲ್ಲುವುದು ಹೇಗೆ? ಛೆ! ಅಂತಹ ಹೀನ ಜೀವಿತಕ್ಕಿಂತಲೂ ಮರಣವೇ ಮೇಲು; ಆದರೆ-ಆದರೆ ಯುದ್ಧಾಂತ್ಯದಲ್ಲಿ ನಾವು ಸೋತರೆ-ಕನ್ನಡಿಗರು ನಮ್ಮನ್ನು ಸೆರೆಹಿಡಿದೊಯ್ದರೆ-ಆ ಭೀಕರಾವಸ್ಥೆ ಯಾತಕ್ಕೂ ಬೇಡ. ನಿಜವಾಗಿಯೂ ನಮ್ಮನ್ನು ಬಹಳವಾಗಿ ಪೀಡಿಸಬಹುದು ನಾನು ನನ್ನಷ್ಟಕ್ಕೆ ಏನಾದರೂ ಯೋಚಿಸುವುದಿಲ್ಲ; ಆದರೆ ಇದುವರೆಗೂ ಮಹಾರಾಣಿಯೆಂದು ಮನ್ನಣೆ ಪಡೆದ ನನ್ನ ಪ್ರಿಯ ಪತ್ನಿ, ರಾಜಕುವರಿಯೆಂದು ನಲಿದಾಡಿದ್ದ ನನ್ನ ಪ್ರಿಯ ಸುತೆ ಜಗನ್ಮೋಹಿನಿ ಅವರ ಅವಸ್ಥೆಯೇನು? ಅವರನ್ನು ಕನ್ನಡದರಸು ಏನು ಮಾಡಬಹುದು? ...........' ಇಂತಹ ವಿಚಾರಗಳಿಂದ ಗಜಪತಿ ಕಂಗೆಟ್ಟು ಹೋಗಿದ್ದನು. ಮುಂಗಾಣದೆ ಮೂಢನಾಗಿದ್ದನು. ಯಾವದೂ ತಿಳಿಯದೆ ಬಹಳ ತೊಂದರೆಗೊಳಗಾಗಿದ್ದನು. ನಿಜವಾಗಿ ವಿಚಾರಿಸಿದರೆ, ಅವನಿಗೆ ಇಷ್ಟು ಯೋಚನೆಗೊಳಗಾಗಲು ಕಾರಣವೇ ಇರಲಿಲ್ಲ.

ಸುಖವು ಯಾವ ಮನುಷ್ಯನಿಗೆ ಬೇಡ? ಉಂಡುಟ್ಟು ಸುಖವಾಗಿರಬೇಕೆಂದು ಎಲ್ಲರೂ ಬಯಸುವದು ಸ್ವಾಭಾವಿಕವೇ. ಈ ಸುಖದಾಶೆ ಬಹಳ ವಿಲಕ್ಷಣವಾದುದಿರುತ್ತದೆ. ನಮ್ಮ ನಮ್ಮ ಸುಖದ ಸಾಧನಗಳು ಸಿಕ್ಕುತ್ತ ಹೋದಂತೆ ಸುಖದಾಶೆ ಬೆಳೆಯುತ್ತಲೇ ಹೋಗುತ್ತದೆ. ಮನುಷ್ಯನು ಬರಿಯ ತನ್ನ

ಮಟ್ಟಿಗೇನೇ ಸುಖವನ್ನಿಚ್ಛಿಸಿ ಸುಮ್ಮನಾಗುವುದಿಲ್ಲ. ತನಗೆ ಉಣ್ಣಲು, ಉಡಿಸಲು, ಇಡಲು, ಕೊಡಲು, ಗಳಿಸಲು, ಬೆಳಿಸಲು ಬೇಕು ಹೆಚ್ಚುಬೇಕು. ಇನ್ನೂ ಹೆಚ್ಚುಬೇಕು, ಎಂದು ಬಯಸುವುದಂತೂ ಸರಿಯೆ, ಆದರೆ ಆತನ ಬಯಕೆ ಇಷ್ಟಕ್ಕೇನೇ ನಿಲ್ಲುವುದಿಲ್ಲ. ತನಗೆ ಸಕಲ ಸೌಖ್ಯ ಸಾಧನಗಳು ಸುಲಭವಾಗಿ ಸಿಕ್ಕಬೇಕಲ್ಲದೆ, ಅವೇ ಸುಖಸಾಧನಗಳು ತನ್ನ ಪತ್ನಿ, ಪುತ್ರ ಮುಂತಾದ ಸಮೀಪದ ಆಪ್ತಬಂಧುಗಳಿಗೆ ಆ ಮೇಲೆ ತನ್ನ ದೂರದ ಬಂಧುಗಳಿಗೆ ತವ್ಮು ಜ್ಞಾತಿಗಳಿಗೆ, ಊರವರಿಗೆ, ದೇಶದವರಿಗೆ ಹೀಗೆ ಬೆಳೆಯುತ್ತಲೇ ಹೋಗಿ, **ಸರ್ವೇ ಜನಾಃ ಸುಖಿನೋ ಭವಂತು।** ಎಂದೆನ್ನುವನು. ಕೊನೆಗೆ ಲೋಕಕ್ಕೆಲ್ಲ ಸುಖವಾಗಲಿ, ಅನ್ನುವನು ಇನ್ನೂ ಮುಂದೆ ಹೋಗಿ ಸಕಲ ಜಗತ್ಕಾರಣಕರ್ತಪರಮಾತ್ಮನಿಗೆ ಸುಖವಾಗಲಿ, ಅಂದರೂ ಅನ್ನಬಹುದು, ಆದರೆ ಮನುಷ್ಯನ ಸುಖದಾಶೆ ಅತೀವ ಹಿರಿದೆಂದು ಹೇಳಬಹುದು. ಆ ಸುಖವೆಂದರೇನು? ಅದರ ಸಾಧನಗಳಾವು? ಎಂಬ ವಿಷಯ ಗಹನವಾದುದಿದೆ. ಅದನ್ನು ಮರೆತರೂ ಮಾನವನು ಸುಖಕ್ಕಾಗಿ ಹಗಲಿರಳು ಹಾತೊರೆಯುವುದು, ಯತ್ನಿಸುವುದು, ಹಗಲಿರುಳೆನ್ನದೆ ಅವ್ಯಾಹತವಾಗಿ ನಡೆದೇ ಇದೆಯೆಂಬದು ಸೂರ್ಯಪ್ರಕಾಶದಷ್ಟು ಸ್ಪಷ್ಟವದೆ.

ಎಲ್ಲರಂತೆ ಗಜಪತಿಯಾದರೂ ತನ್ನ ಸುಖಕ್ಕಾಗಿ ಯತ್ನಿಸಿದರೆ ತಪ್ಪಿಲ್ಲವಷ್ಟೆ? ಅವನಾದರೂ ತನ್ನ ಮಗಳ, ಮಡದಿಯ, ತನ್ನ ಭಾವೀಜೀವನವು ಅತ್ಯಂತ ಆನಂದವಾಗಿರತಕ್ಕುದು, ಎಲ್ಲ ಬಗೆಯ ಸುಖಸಾಧನಗಳು ತಮಗೆ ದೊರಕಬೇಕು ....ಮುಂತಾಗಿ ಯೋಚಿಸುತ್ತಲಿದ್ದನು; ಆದರೆ ಅವನು ಈ ಸಂಗತಿಯನ್ನು ಮೊದಲೇ ಯೋಚಿಸಿ ಕೈಕೊಂಡಿದ್ದಾದರೆ ಇನ್ನೂ ಒಳಿತಾಗುತ್ತಲಿದ್ದಿತು. 'ತಮಗೆ ಅನ್ಯರು ದೂಷಣೆಕೊಡಕೂಡದು.' ಎಂದು ನಾವು ಯೋಚಿಸುತ್ತಲಿದ್ದರೆ,'ನಾವು ಅನ್ಯರನ್ನು ದೂಷಿಸಕೂಡದು' ಎಂಬ ತತ್ವ ಅನೇಕರಿಗೆ ಮಾನ್ಯವಿಲ್ಲ ನಾವು ಅನ್ಯರನ್ನು ದೂಷಿಸಬಹುದು, ಹಳಿಯಬಹುದು, ಒಂದು ಸಮಯ ಬಡಿಯಲೂ ಬಹುದು; ಆದರೆ ನಮಗೆ ಮಾತ್ರ ಯಾರೂ ನಿಂದೆ ಮಾಡಕೂಡದು. ಇಷ್ಟೇ ಅಲ್ಲ; ಯಾವಾಗಲೂ ನಾವು ಹೇಳಿದಂತೆ ಕೇಳಬೇಕು, ನಮ್ಮ ಇಚ್ಛೆಯನ್ನು ಪೂರೈಸಬೇಕು ಮುಂತಾಗಿ ಇಚ್ಛಿಸುತ್ತೇವೆ; ಆದರೆ ಈ ತತ್ವವೆಷ್ಟು ದಿನ ನಡೆಯುವದು? ನಮ್ಮಂತೆ ಇತರರಾದರೂ ಯೋಚಿಸುವುದು ಸಹಜವೇ. ಆದುದರಿಂದ ನಾವು ಅನ್ಯರನ್ನು ನಿಂದಿಸಿದರೆ, ಅನ್ಯರು ನಮ್ಮನ್ನಾದರೂ ನಿಂದಿಸುವುದು ಎಲ್ಲೆಲ್ಲಿಯೂ ಕಾಣುತ್ತಲಿದೆ ಗಜಪತಿಯ ಹಾಡಾದರೂ ಇದೇ ಆಯಿತು. ತನ್ನ ಮೇಲೆ ಇನ್ನಾರೂ ಬರ

ಕೂಡದು, ತನ್ನ ರಾಜ್ಯವನ್ನಾಕ್ರಮಿಸಕೂಡದು ಎಂದು ಯೋಚಿಸುತ್ತಲಿದ್ದನು. ತನ್ನ ಆ ಯೋಚನೆಗನುಸಾರವಾಗಿ ಪ್ರಬಲವಾಗುತ್ತಲಿದ್ದ ಕರ್ನಾಟಕ ಸಾಮ್ರಾಜ್ಯವನ್ನು ಸದೆಬಡೆಯಲು ಯತ್ನಿಸಿದನು. ಬಹಳ ದಿನಗಳಿಂದಲೂ ಕರ್ನಾಟಕ ಸಾಮ್ರಾಜ್ಯದ ಮೇಲೆ ದಾಳಿ ಮಾಡುತ್ತಲೆ ಇದ್ದನು, ಆದರೆ ಅವನ ವಿಚಾರ ಅವನಿಗೇ ತಿರುಗುವ ಸಮಯ ಬಂದಿತು. ಕನ್ನಡಿಗರು ಪ್ರಬಲರಾಗಿ ಕಲಿಂಗವನ್ನು ಆಕ್ರಮಿಸಿದುದಲ್ಲದೆ, ಗಜಪತಿಯನ್ನು ಸಂಪೂರ್ಣವಾಗಿ ಸೋಲಿಸಲು ಸಿದ್ಧರಾಗಿದ್ದರು ಅಂತೆಯೇ ಗಜಪತಿಯು ಬಹಳವಾಗಿ ವಿಚಾರಕ್ಕೆ ಒಳಗಾದನು.

ಗಜಪತಿಗೆ ನರಪತಿಯ ಸ್ವಭಾವ-ಗುಣಗಳ ಪರಿಚಯು ಚನ್ನಾಗಿರಲಿಲ್ಲವೆಂಬ ಸಂಗತಿಯೇ ಅವನ ದೀರ್ಘವಿಚಾರಕ್ಕೆ ಕಾರಣವಾಗಿದ್ದಿತೆನ್ನಬಹುದು. ಇಲ್ಲವಾಗಿದ್ದರೆ ಇಷ್ಟು ತೊಂದರೆಗೊಳಗಾಗಲು ಕಾರಣವಿರಲಿಲ್ಲ ಯಾವಾಗಲೂ ಗೆಲ್ಲುವುದೆಂದರೆ ಸೋತವರನ್ನು ಗುಲಾಮರನ್ನಾಗಿ ಮಾಡುವುದು, ಸೋತ ಜನಾಂಗದ ಸಂಪತ್ತು-ಶೀಲಗಳನ್ನೆಲ್ಲ ಕಾಲಲ್ಲಿ ಹಾಕಿ ತುಳಿಯುವುದು, ಸೋತ ಜನಾಂಗವು ನಿರ್ನಾಮವಾಗುವಂತೆ ಮಾಡುವುದು ಎಂದು ಅನೇಕರ ನಂಬುಗೆಯಾಗಿಹೋಗಿರುತ್ತದೆ. ಅದೇಕೆ? ಆ ಸಮಯದಲ್ಲಿ ಹಿಂದುಸ್ಥಾನದಲ್ಲಿಯ ಜೇತೃಗಳ ಸ್ಥಿತಿಯೇ ಹಾಗಿದ್ದಿತೆಂದರೆ ಸಾಕು. ಎಲ್ಲಿ ನೋಡಿದರೂ ಕೊಲೆ-ಸುಲಿಗೆ, ಪಾತಿವ್ರತ್ಯನಾಶ, ಕೌಮಾರ್ಯಭಂಗ, ಬಲುವೆಯ ಮತಾಂತರಗಳೇ ನಡೆದು ಹೋಗಿ, ಎಲ್ಲೆಡೆಯಲ್ಲಿಯೂ ಭೀಕರ ಅವಸ್ಥೆ ಮನೆಮಾಡಿದ್ದಿತು. ಮಾನಿಷ್ಠರು ಮಾನದಿಂದ ಬಾಳುವ ಸಮಯ ಅದಾಗಿರಲಿಲ್ಲ. ಜೀವದ ಮೇಲೆ ಮಮತೆಯಿದ್ದವರು ಮತಾಂತರ ಹೊಂದುತ್ತಲಿದ್ದರು; ಮಾನದ ಮೇಲೆ ಮಮತೆಯಿದ್ದವರು ಜನ್ಮಾಂತರ ಹೊಂದುತ್ತಲಿದ್ದರು ಅಷ್ಟೇ. ಪರಿಸ್ಥಿತಿ ಇಷ್ಟು ಕಷ್ಟಕರವಾದುದರಿಂದ ಮಾನವಂತನು ಮರಣ ಹೊಂದುವುದೇ ಲೇಸೆಂದು ಕೊನೆಯ ಯತ್ನ ಕೈಕೊಳ್ಳುವ ಹವಣಿಕೆಯಲ್ಲಿದ್ದನು; ಆದರೆ ಎಲ್ಲ ಜೇತೃಗಳಂತೆ ನರಪತಿಯಿರಲಿಲ್ಲವೆಂಬದು ಗಜಪತಿಗೆ ತಿಳಿದಿರಲಿಲ್ಲ. ಹಾಗಿದ್ದರೆ ಸೋಲು-ಗೆಲುವುಗಳು ದೈವಾಧೀನವಾದರೂ ಪೌರುಷವು ಪುರುಷಾಧೀನವಷ್ಟೆ? ಅಂತಹ ಪೌರುಷವನ್ನು ತಾನು ವ್ಯಕ್ತಪಡಿಸಿದ್ದರೆ ಆದಕ್ಕೆ ತಕ್ಕ ಮನ್ನಣೆ ದೊರೆಯಲೇ ಬೇಕಾಗಿದ್ದಿತಲ್ಲವೆ? ಅನೇಕರಿಗೆ ಆ ಪೌರುಷದ ಪರಿಚಯವೇ ಇರುವುದಿಲ್ಲ ಗೆಲ್ಲುವುದೇ ಪೌರುಷ, ಸೋಲುವುದೇ ಅಪೌರುಷ ಎಂದು ನಂಬಿರುತ್ತಾರೆ ಇದು ನಿಜವಾಗಿಯೂ ಹೇಡಿಗಳ ಮಾತು. ಹೇಡಿಗಳಿಗೆ ಪುರುಷತ್ವವೆಲ್ಲಿ? ಅಂತಹರು ಆವುದೊಂದು ಕಾರಣದಿಂದ ಗೆಲುವು ಪಡೆದರೆ,

ತಾವು ಪೌರುಷವಂತರೆಂದು ಹೆಮ್ಮೆತಳೆದು, ಸೋತವನು ಎಂತಹ ವೀರನಿರಲಿ, ಶೂರನಿರಲಿ, ಎಷ್ಟೇ ಶ್ರೇಷ್ಠಪುರುಷನಿರಲಿ ಆತನು ಹೇಡಿಯೇ ಎಂದು ನಂಬಿ, ಅವನು ಭೂಮಿಯಲ್ಲಿರಲು ಅನರ್ಹನೆಂದು ನಿರ್ಧರಿಸಿ, ಅವನಿಗೆ ಸಿರಿ-ಸಂಪತ್ತು ಗಳು ಅನುಚಿತವೆಂದು ಭಾವಿಸಿ ನಡೆಯುತ್ತಾರೆ. ಇಂತಹ ಹೀನ ನಡತೆ ಯಿಂದ ತಮ್ಮ ಹೇಡಿತನವನ್ನೇ ಬಯಲಿಗಿಡುತ್ತಾರಲ್ಲದೆ ಇನ್ನೇನಿಲ್ಲ; ಆದರೆ ನರಪತಿ ಆ ವರ್ಗದವನಲ್ಲ. ಆತನಿಗೆ ಜನರ ಮಾನ-ಮನ್ನಣೆಗಳ ಅರಿವು ಚೆನ್ನಾಗಿದ್ದಿತು. ಸೋತವನೂ ಮನುಷ್ಯನು, ಗೆದ್ದವನೂ ಮನುಷ್ಯನು ಆಕ ಸ್ಮಿಕವಾಗಿ ಒಬ್ಬನಿಗೆ ಗೆಲುವು ದೊರೆತಿರಬಹುದು ಇನ್ನೊಬ್ಬನು ಸೋಲು ಪಡೆದಿರಬಹುದು. ಅಷ್ಟರಿಂದ ಪಾಶವೀ ಬಲುಮೆಗೆ, ರಾಕ್ಷಸೀ ತೃಷ್ಣೆಗೆ, ಅಧಮವೃತ್ತಿಗೆ, ಕೀಳ್ತಮ ಕಾರ್ಯಗಳಿಗೆ ಕೈಗೂಡುವುದೇಕೆ? ಒಂದು ಸಲ ಸೋಲು ಪಡೆದವನು ಇನ್ನೊಂದು ಸಲ ಗೆಲುವು ಪಡೆಯಬಹುದು. ಹಾಗೆಯೇ ಗೆದ್ದವನು ಸೋಲುವ ಸಮಯವೂ ಬರಬಹುದು; ಆದುದರಿಂದ ಮನುಷ್ಯತ್ವ ತ್ಯಜಿಸಿ ನಡೆಯುವದು ತೀರ ನೀಚರ ವರ್ತನವು, ಎಂದು ಆತ ನರಿತಿದ್ದನು. ಅನಿವಾರ್ಯವಾಗಿ ಯುದ್ಧಕ್ಕೆ ಪ್ರವೃತ್ತನಾಗಿದ್ದನಲ್ಲದೆ, ಅದ ರಿಂದ ಅಮಾನುಷ, ಅತ್ಯಂತ ಅಧಮ ವರ್ತನೆಗೆ ಅವಕಾಶವೀಯುವವ ಅವನಾಗಿರಲಿಲ್ಲ; ಆದರೂ ಪಾಪ! ಗಜಪತಿಗೆ ಆ ಸಂಗತಿ ಹೇಗೆ ತಿಳಿಯಬೇಕು? ಸುತ್ತಲಿನ ಪರಿಸ್ಥಿತಿಯಂತೆ ಅವನ ವಿಚಾರಶಕ್ತಿ ಮಾರ್ಪಾಟುಹೊಂದಿ, ನರಪತಿ ತನ್ನ ರಾಜ್ಯವನ್ನು ಕಸಿದುಕೊಳ್ಳುವನು, ಸಂಪತ್ತು ಸೂರೆಗೊಳ್ಳು ವನು ಮುಂತಾಗಿ ಭಾವಿಸಿದ್ದನೆನ್ನಬಹುದು. ಅಷ್ಟರಲ್ಲಿಯೇ ನರಪತಿಯ ಉದಾರ ವರ್ತನೆಯ ಅರಿವು ಆತನಿಗಾಗಿದ್ದಿತು ಆದರೂ 'ಕಳ್ಳನ ಜೀವ.' ತಾನು ಕನ್ನಡ ರಾಜ್ಯಕ್ಕೆ ದಾಳಿಯಿಕ್ಕಿದಂತೆ ನರಪತಿಯಾದರೂ ದಾಳಿಯಿಕ್ಕುವ ನೆಂದು ಭಾವಿಸಿ ಬಹು ಯೋಚನೆಗೊಳಗಾಗಿದ್ದನು.

ಗಜಪತಿ ಹೀಗೆ ವಿಚಾರಪರನಾಗಿ ಕುಳಿತಾಗ್ಗೆ ಆತನ ಮುಖ್ಯ ಮಂತ್ರಿ ದಾಮೋದರ ಶರ್ಮನು ಅಲ್ಲಿಗೆ ಬಂದನು. ಒಡನೆಯೇ ರಾಜಕೀಯ ಚರ್ಚೆ ಯಲ್ಲಿ ಮುಳುಗಿದರು.

'ಮಹಾಮಂತ್ರಿಗಳೇ, ಮಹಾಪಾತ್ರರಿಂದ ಉತ್ತರಗಳೆಲ್ಲವೂ ಬಂದಂ ತಾದವೇ?'

'ಇನ್ನೂ ನಾಲ್ಕು ಜನರಿಂದ ಉತ್ತರ ಬಂದಿಲ್ಲ. ಬಹುಶಃ ಇಂದು ಬರ ಬಹುದು.'

'ಆ ಎಲ್ಲರ ಸಭೆಯನ್ನೆಂದು ಏರ್ಪಡಿಸಬೇಕೆನ್ನುವಿರಿ?'

'ಮಹಾರಾಜ, ನಾಡದ್ದು ಏರ್ಪಡಿಸಿ ಬಿಡಬೇಕೆಂದು ನನ್ನ ಯೋಚನೆ ಯಿದೆ, ಏಕೆಂದರೆ, ಈಗಲೇ ಅವಕಾಶ ಬಹಳ ಗತಿಸಿ ಹೋಯಿತು. ಇನ್ನೂ ಕಾಲ ಕಳೆಯುತ್ತ ಕುಳ್ಳಿರುವುದು ತೀರಾ ಅನುಚಿತವು. ನಾವು ಕಾಲಕಳೆದಂತೆ ಕನ್ನಡಿಗರಿಗೆ ಹೆಚ್ಚು ವಿಶ್ರಾಂತಿ ದೊರೆಯುತ್ತದೆ. ವಿಶ್ರಾಂತಿ ಹೆಚ್ಚು ದೊರೆ ದಂತೆ ಅವರು ಹೆಚ್ಚು ಬಲಕಾರಿಯಾಗುತ್ತಾರೆ.'

'ಅಹುದು ಮಂತ್ರಿಗಳೇ, ನಿಮ್ಮ ಸೂಚನೆ ಯೋಗ್ಯವಿದೆ. ವೈರಿಗಳು ನಮ್ಮ ಪಟ್ಟಣವನ್ನಾಕ್ರಮಿಸಿ ಅಲ್ಲಿ ಸ್ವಚ್ಛಂದದಿಂದ ರಾಜ್ಯಸಾಗಿಸುತ್ತಲಿರಲು, ನಾವು ಕೈ ಮುಚ್ಚಿಕೊಂಡು ಇನ್ನೆಷ್ಟು ದಿನ ಕುಳ್ಳಿರುವುದು? ಬೇಗನೆ ಇತ್ಯರ್ಥ ವಾಗಿ ಹೋಗಲಿ. ಮಂತ್ರಿಗಳೇ, ನಿಮಗೆ ಹೇಗೆನಿಸುತ್ತಲಿದೆ?'

'ಮಹಾರಾಜ, ಆ ಸಂಗತಿಯನ್ನು ವಿಚಾರಿಸುವ ಕಾಲ ಹಿಂದಾಯಿತು ನರಪತಿಯನ್ನು ಮೊದಲು ಎದುರಿಸುವ ಸಮಯ ನಮಗೆ ಇಂತಹ ವಿಚಾರಕ್ಕೆ ಅವಕಾಶವಿದ್ದಿತು. ಆಗ್ಗೆ ಸಾಕಷ್ಟು ಆಧಾರವೂ ಇದ್ದಿತು. ಹೊಸ ಹುರುಪಿ ನಿಂದ ಮುಂಬರಿಯುತ್ತಲಿರುವಾಗ್ಗೆ ನಮಗೆ ಏನು ಮಾಡಿದರೂ ಬರುವಂ ತಿದ್ದಿತು; ಆದರೆ ಈಗಿನ ಪರಿಸ್ಥಿತಿ ಹಾಗಿಲ್ಲ ಈಗ ಅದೆಲ್ಲವೂ ಬದಲಾಗಿದೆ. ಸೋಲಿನ ಕಲಂಕದಿಂದ ಬೆಂದ ಹೃದಯದವರು ನಾವು. ಗೆಲುವಿನುಬ್ಬಿನಿಂದ ಉತ್ತೇಜಿತರು ಅವರು. ಆದುದರಿಂದ ನಾವು ಗೆಲ್ಲುವೆವೋ ಸೋಲುವೆವೋ ಎಂಬ ವಿಚಾರಕ್ಕೆಡೆಯೇ ಇಲ್ಲ. ಕೊನೆಯ ಪ್ರಯತ್ನವೆಂದು ನಾವು ಈಗ ನಮ್ಮ ಸಕಲ ಬಲದೊಡನೆ –'

'ಧಾರಾತೀರ್ಥದಲ್ಲಿ ದೇಹವಿಡತಕ್ಕದು.'

'ಅಷ್ಟು ನಿರಾಶರಾಗಲು ಕಾರಣವಿಲ್ಲ ಇನ್ನೂ ನಮ್ಮದು ದುರ್ಬಲ ಪಕ್ಷವಾಗಿಲ್ಲ. ನಮ್ಮ ಹದಿನಾರು ಮಹಾಪಾತ್ರರ ಬಲವನ್ನೆಲ್ಲ ಒಟ್ಟುಗೂಡಿ ಸಿದರೆ ಕನ್ನಡಿಗರನ್ನು ಸರಿಗಟ್ಟುವಷ್ಟಾಗಬಹುದು. ಆದುದರಿಂದ ತೀರಾ ನಿರಾಶೆಗೆ ಕಾರಣವಿಲ್ಲ. ಆದರೂ ಗೆದ್ದೇ ತೀರುವೆವೆಂಬ ಹೆಮ್ಮೆಗೆ ಮಾತ್ರ ಸ್ಥಳ ವಿಲ್ಲ. ಇದಕ್ಕಿಂತಲೂ ಹೆಚ್ಚಿನ ಬಲವಿದ್ದರೂ ನಾವು ಹಿಂದೆ ಸೋಲಬೇಕಾ ಯಿತು. ಆದುದರಿಂದ ನಾವು ಯಾವ ಯೋಚನೆಗೂ ಒಳಗಾಗದೆ ಶಕ್ತಿ ಮೀರಿ, ಇದು ನಮ್ಮ ಕೊನೆಯ ಪ್ರಯತ್ನವು, ನಮ್ಮ ಮಾತೃಭೂಮಿಗೆ ನಾವು ಸಲ್ಲಿಸಲುಳಿದ ಕೊನೆಯ ಕರ್ತವ್ಯವು, ಎಂದು ನಂಬಿದರಾಯಿತು'

'ನಾವು ಸಿಂಹಾಚಲಕ್ಕೆ ಲಗ್ಗೆ ಹತ್ತಬೇಕೆನ್ನುವಿರಾ?'

'ಅದು ಬಹಳ ವಿಚಾರಾರ್ಹವಾದ ಸಂಗತಿಯಿದೆ. ದುರ್ಗವು ಪ್ರಚಂಡ ವಾದುದು. ದುರ್ಗದೊಡೆಯರಾದ ನಾವೇ ಅಲ್ಲಿರುವಾಗ್ಗೆ ವೈರಿಗಳು ದುರ್ಗ

ವನ್ನಾಕ್ರಮಿಸಿದರು; ಆದರೆ ಅವರು ದುರ್ಗದಲ್ಲಿರುವಾಗ್ಗೆ ನಾವು ಗೆಲ್ಲುವೆವೆಂದು ಊಹಿಸಲವಕಾಶವಿಲ್ಲ. ಕನ್ನಡಿಗರ ಸೇನಾಪತಿಯಂತಹ ಚತುರ ವೀರವರ ನಮ್ಮಲ್ಲಿಲ್ಲ. ಒಂದುವೇಳೆ ಅಂತಹ ಕುಶಲ ಸೈನಿಕ ನಮ್ಮಲ್ಲಿದ್ದರೂ ದುರ್ಗವನ್ನು ಮರಳ ಕೈವಶ ಮಾಡಿಕೊಳ್ಳುವುದು ಸುಲಭವಿಲ್ಲ. ಏಕೆಂದರ, ಶತ್ರುಗಳು ಸಾವಧರಾಗಿ ಸರ್ವಕಾಲವೂ ದಕ್ಷತೆಯಿಂದಿರುವರು.'

'ಹಾಗಾದರೆ ನಿಮ್ಮ ಯೋಚನೆಯಾದರೂ ಯಾವ ಬಗೆಯದಿದೆ?'

'ಸಿಂಹಾಚಲಕ್ಕೆ ಲಗ್ಗೆ ಹತ್ತದೆ ಬೇರೆ ಗತಿಯೇ ಇಲ್ಲ; ಆದರೂ ಬಹಳ ವಿಚಾರಿಸಿ ಕಾರ್ಯಕ್ಕೆಕೊಳ್ಳಬೇಕಾಗಿದೆ ಮಹಾಪಾತ್ರರನ್ನೂ ವಿಚಾರಿಸುವಾ; ಏಕೆಂದರೆ, ಸದ್ಯ ಅವರ ಬಲವೇ ನಮ್ಮ ಯುದ್ಧೋತ್ಸಾಹಕ್ಕೆ ಕಾರಣವಾಗತಕ್ಕುದು. ಆದುದರಿಂದ ಅವರ ಮನಸ್ಸಿಗೆ ಸರಿಯಾಗುವಂತೆ ನಮ್ಮ ವರ್ತನೆಯಿಡಬೇಕಾಗಿದೆ.'

'ಅಹುದು ಮಂತ್ರಿಗಳೇ, ನಿಮ್ಮ ಸಲಹೆ ತೀರಾ ಯೋಗ್ಯವಾದುದಿದೆ. ಮಹಾಪಾತ್ರರ ಸಮ್ಮತಿ-ಶೂರತನಗಳ ಅವಶ್ಯಕತೆ ನಮಗೆ ಬಹಳವಾಗಿದೆ. ಬಹಳವೇನು? ಅವರ ಮೇಲೆಯೇ ನಾವು ಸಂಪೂರ್ಣವಾಗಿ ಕೈಯೂರುತ್ತೇವೆಂದರೂ ತಪ್ಪಾಗಲಿಕ್ಕಿಲ್ಲ. ಆಗಲಿ ಆ ಎಲ್ಲರ ಸ್ವಾಗತದ ವ್ಯವಸ್ಥೆ, ಅವರವರ ಇರುವಿಕೆಯ ವ್ಯವಸ್ಥೆಗಳ ಬಗ್ಗೆ ಚನ್ನಾಗಿ ದಕ್ಷತೆ ವಹಿಸಿರುವಿರಲ್ಲವೆ?'

'ಅಹುದು. ಮಹಾರಾಜ, ನಾವು ನಾಕಷ್ಟು ದಕ್ಷತೆಯಿಂದಲೇ ಮುಂದೊರೆಯುತ್ತಲಿರುವೆವು ಎಲ್ಲ ಬಗೆಯಿಂದಲೂ ಯೋಗ್ಯವಾದ ವ್ಯವಸ್ಥೆಯಾಗುವ ಬಗ್ಗೆ ಸಂದೇಹವೇನೂ ಇಲ್ಲ.'

ಹೀಗೆ ಅರಸು-ಮಂತ್ರಿಗಳಲ್ಲಿ ಸಂಭಾಷಣೆಯಾಗಿ ಭಾವೀ ಕಾರ್ಯಕ್ರಮದ ಸಲುವಾಗಿ ಮಂತ್ರಿ ಹೊರಟು ಹೋದನು ಆಗಲೂ ಗಜಪತಿಯೋರ್ವನೇ ಮತ್ತೆ ಅಂತರ್ಮುಖನಾಗಿ ಕಲಿಂಗರಾಜ್ಯವನ್ನೀಕ್ಷಿಸಹತ್ತಿದನು. ಸಂಧಿಯೋ ಯುದ್ಧವೋ ಎಂಬ ಬಗ್ಗೆ ಆತನಲ್ಲಿ ಇಬ್ಬಗೆಯಿರಲಿಲ್ಲ ಯುದ್ಧವೇ ಎಂದು ನಿಶ್ಚಯವಾಗಿದ್ದಿತು; ಆದರೆ ಯುದ್ಧದ ಪರಿಣಾಮವು ಅನಿಶ್ಚಿತವಲ್ಲವೆ? ಆ ಅನಿಶ್ಚಿತ ಪರಿಣಾಮದ ವಿಷಯಕವಾಗಿಯೇ ಅವನು ಅಷ್ಟು ಯೋಚನೆಯಲ್ಲಿ ಮುಳುಗಿದ್ದನು.

ಮನುಷ್ಯನಿಗೆ ಇಬ್ಬಗೆಯ ಕಾರ್ಯಗಳಿರುವಾಗ್ಗೆ 'ಇದನ್ನು ಮಾಡಬೇಕೋ-ಅದನ್ನು ಮಾಡಬೇಕೋ?' ಎಂದು ಸಂದೇಹ ಸಂಧಿಸುವದು ಸ್ವಾಭಾವಿಕ. ಅರ್ಜುನನಂತಹನಿಗೂ ಇಂತಹ ವೃತ್ತಿ ಭಾರತಯುದ್ಧಾರಂಭದಲ್ಲಿ ಬಂದು ಸಂಧಿಸಿತು; ಆದರೆ ಒಮ್ಮೆ ಒಂದು ಕಾರ್ಯದಿನೆ ನಿಶ್ಚಿತವಾಗಿ

ರಲು, ತನಗೆ ಏನೂ ಸಂಬಂಧಿಸಿಲ್ಲದ, ತನ್ನ ಸಾಮರ್ಥ್ಯದ ಅಳವಿನಲ್ಲಿ ಕಿಂಚಿತ್ತಾದರೂ ಕಾಣಿಸದ ಕಾರ್ಯದ ಕೊನೆಗೆ ಆಗಬಹುದಾದ ಪರಿಣಾಮದ ವಿಷಯಕವಾಗಿ ವಿಚಾರಮಗ್ನನಾಗಬೇಕೆಂದರೆ, ಎಷ್ಟು ವಿಚಿತ್ರ? ಗಜಪತಿ ಯುದ್ಧ ಮಾಡುವುದೆಂದು ನಿರ್ಧರಿಸಿಬಿಟ್ಟಿದ್ದನು. ಯುದ್ಧದ ಪರಿಣಾಮವೂ ತಕ್ಕಮಟ್ಟಿಗೆ ನಿಶ್ಚಿತವೇ ಆಗಿದ್ದಿತು. ಅದರ ಮುಂದೆ ತನ್ನ, ತನ್ನ ದೇಶದ, ತನ್ನ ಬಂಧು-ಬಳಗದವರ ಸ್ಥಿತಿಗತಿಗಳ ವಿಷಯಕವಾಗಿ ಬಹಳ ವಿಚಾರಕ್ಕೊಳಗಾಗಿದ್ದನು. ಮುಂದಿನ ಭೀಕರ ಅವಸ್ಥೆ ನೆನೆನೆನೆದು ಗೋಳಿಡುತ್ತಿದ್ದನು. ತನ್ನ ಪ್ರಿತಿಯ ಪ್ರಜೆಗಳಿಗೊದಗಲಿದ್ದ ವಿಪರೀತಾವಸ್ಥೆಯ ಸ್ಮರಣೆಯಿಂದ ಅವನ ಹೃದಯ ಪರಿತಪಿಸುತ್ತಲಿದ್ದಿತು. ಹೀಗೆ ಅವನು ವಿಚಾರಮೂಢನಾಗಿ ಕುಳಿತಿರಲು, ಜಗನ್ಮೋಹಿನಿ ಅಲ್ಲಿಗೆ ಬಂದಳು.

ಕಣ್ಣುಗಳನ್ನು ಮುಚ್ಚಿ ಗಜಪತಿಯು ಅಂತರ್ಮುಖನಾಗಿದ್ದನು. ದೇಶದ ಜನರ, ಬಂಧುಗಳ ಭಾವೀ ಅವಸ್ಥೆಯ ಭೀಕರ ಸ್ಮರಣೆಯಿಂದ ಭಯಗೊಂಡ ಅವನ ಕಣ್ಣು ಒಳಸೇರಿದ್ದುವು ಗಲ್ಲಗಳು ಪಚ್ಚೆ ಬಡೆದಿದ್ದುವು. ಚಿಂತೆ ಮನೆ ಮಾಡಿದುದು ಸ್ಪಷ್ಟವಾಗಿ ಕಾಣುತ್ತಲಿದ್ದಿತು. ತಪೋಮಗ್ನನಾದ ಯೋಗಿಯಂತೆ ಬಾಹ್ಯಾವಸ್ಥೆಯ ಜ್ಞಾನವಿಲ್ಲದೆ ಕುಳಿತಿದ್ದನು.

ತಂದೆಯ ಕರುಣಾಜನಕ ಅವಸ್ಥೆಯನ್ನು ನೋಡಿ, ಜಗನ್ಮೋಹಿನಿಗೆ ಬಹಳ ತಳಮಳವಾಯಿತು. ರಾಜನ ಜೀವವು ಅದೆಷ್ಟು ಕಂಟಕಮಯವೆಂಬದು ಊಹೆಗೆ ನಿಲುಕದಿದೆ ರಾಜ್ಯಗಳಿಸುವ ಚಿಂತೆ, ಗಳಿಸಿದ್ದನ್ನು ಉಳಿಸುವ ಚಿಂತೆ, ಉಳಿದುದನ್ನು ಬೆಳೆಸುವ ಚಿಂತೆ, ಬೆಳದುದು ಅಳಿಯದಂತೆ ಕಾಯುವ ಚಿಂತೆ. ಚಿಂತಾಮಯವೇ ರಾಜ್ಯವೆಂಬದು ಸ್ಪಷ್ಟವಿದೆ. ಜಗನ್ಮೋಹಿನಿ ತಂದೆಯ ಬಳಿಯಲ್ಲಿ ಹೋಗಿ ಅವನ ಭುಜದಲ್ಲಿ ಕೈಯಿಕ್ಕುತ್ತ ಒಂದು ಸಲ 'ಪಿತಾಜಿ' ಎಂದು ಮೃದುವಾಗಿ ನುಡಿದಳು.

ಮಮತೆಯ ಮಗಳ ಮೃದು ಮಧುರವಾದ ಇನಿದನಿಗೆ ಗಜಪತಿ ಎಚ್ಚತ್ತನು. ಅವನು ಸ್ನೇಹಮಯ ದೃಷ್ಟಿಯನ್ನು ಬೀರುತ್ತ 'ಮಗೂ' ಎಂದು ನುಡಿದು, ಆಕೆಯನ್ನು ತನ್ನ ಬಳಿಯಲ್ಲಿ ಕೂರಿಸಿಕೊಂಡನು.

'ಪಿತಾಜಿ, ಹೀಗೆ ಒಂದೇ ಸಮನೆ ಚಿಂತಾಮಗ್ನರಾಗಿ ಕುಳ್ಳಿರುವುದರಿಂದ ಯಾವ ಲಾಭವಿದೆ? ಈ ಎರಡು-ಮೂರು ಮಾಸಗಳಲ್ಲಿ ನಿಮ್ಮ ಶರೀರದಲ್ಲಿ ಅದೆಷ್ಟು ಮಾರ್ಪಾಟಾಗಿದೆ ನೋಡಿದಿರಾ?' ಜಗನ್ಮೋಹಿನಿ ಕರುಣಾಜನಕ ಧ್ವನಿಯಲ್ಲಿ ನುಡಿದಳು.

'ಮಗು, ಮೋಹಿನಿ, ಕರ್ಮಾನುಸಾರವಾಗಿ ಸಂಭವಿಸುವ ಆ ಆ ಅವಸ್ಥೆ

ಗಳಿಗೆ ನಾವು ಬೇಡವೆಂದರೆ ಕೂಡದು ನಡೆಯುವುದು ನಡೆಯಲೇಬೇಕು. ಒಂದು ಸಲ ಸ್ವತಂತ್ರರಾಜನಾಗಿ ಮೆರೆದೆ. ನನಗೆ ಇಂದು ಸಾಮಾನ್ಯ ಭಿಕ್ಷುಕನ ಅವಸ್ಥೆ ಕೂಡ ಉಳಿದಿಲ್ಲ.' ಗಜಪತಿ ನಿರಾಶೆಯ ಧ್ವನಿಯಲ್ಲಿ ಮಾತನಾಡಿದನು.

'ಪಿತಾಜಿ, ಕರ್ಮಾನುಸಾರ ಸಂಭವಿಸಿದ ಸಂಗತಿಗಳಿಗೆ ನಾವು ಇಷ್ಟೇಕೆ ಯೋಚಿಸಬೇಕು?' ಜಗನ್ಮೋಹಿನಿ ತಂದೆಯ ಮನವನ್ನು ಸಂತೈಸಬೇಕೆಂದು ಆತನಿಗೆ ಪ್ರಶ್ನೆ ಮಾಡಿದಳು.

'ಮೋಹಿನಿ, ನೀನೇನರಿಯೆಯಾ? ಅದು ಮನಸ್ಸಿನ ಸ್ವಭಾವವು. ಆ ಮನಸ್ಸನ್ನು ಅಂಕಿತದಲ್ಲಿಟ್ಟ ಹೊರತು ಬೇರೆ ಮಾರ್ಗವಿಲ್ಲ. ಸುಖದ ಸಮಯದಲ್ಲಿ ಸಂಭವಿಸಿದ ಸಂಕಟಗಳ ಸ್ಮರಣೆಯಿಂದ ಸಂತ್ರಸ್ತವಾಗುತ್ತದೆ. ಕಷ್ಟಕಾಲದಲ್ಲಿ ಕಳೆದು ಹೋದ ಕಾಲಗಳನ್ನು, ಅನುಬವಿಸಿದ ಸುಖದ ಸಮಯಗಳನ್ನು ನೆನೆ ನೆನೆದು ಚಿಂತೆಗೊಳ್ಳುತ್ತದೆ -' 'ಸಂಕಟಕಾಲಕ್ಕೆ ವೆಂಕಟರಮಣ' ಎಂಬ ತತ್ವದಂತೆ ಗಜಪತಿ ಅಭಾವ ವೈರಾಗ್ಯ ತಳೆದು ಮಾತನಾಡಿದನು.

'ಪಿತಾಜಿ, ಹಾಗಿದ್ದರೆ ನೀವು ಇಷ್ಟು ಕಷ್ಟಪಡುತ್ತಲಿರುವುದೇಕೆ? ಆಗುವುದು ಆಗಲೇಬೇಕಾಗಿದ್ದರೆ, ಅದರ ಬಗ್ಗೆ ಅನವಶ್ಯಕವಾಗಿ ಆಲೋಚಿಸುವುದೇಕೆ?' ಜಗನ್ಮೋಹಿನಿ ಕಳಕಳಿಯಿಂದ ಕೇಳಿದಳು.

'ಮಗು ಮೋಹಿನಿ, ನಾನು ಮನೋವಶನಾಗಿರುವೆನಲ್ಲದೆ ಮನಸ್ಸು ನನ್ನ ಕಯ್ಯಲ್ಲಿಲ್ಲ. ಮನಸಿನಾಟವೆದುರು ನಾನು ತೀರಾ ನಿರ್ಬಲನಾಗಿರುತ್ತೇನೆ. ಅದು ತಂದೀಯುವ ಹಿಂದಿನ ಸುಂದರ, ಭಾವೀ ಭೀಕರ ನೋಟಗಳಿರುಕಿನಲ್ಲಿ ಸಿಲುಕಿ ಸಂಕಟ ಪಡುತ್ತಲಿರುವೆನು' ಗಜಪತಿ ಕೊಂಚವೂ ಮರೆಮಾಚಿಲ್ಲದೆ ಮಾತನಾಡಿದನು.

ತಂದೆಯ ಅವಸ್ಥೆಗೆ ಜಗನ್ಮೋಹಿನಿ ಕನಿಕರಗೊಂಡಳು. ಕರುಣಾದೃಷ್ಟಿಯಿಂದ ತಂದೆಯನ್ನು ನೋಡುತ್ತ. -'ಪಿತಾಜಿ, ಸಂಧಿಮಾಡಿಕೊಳ್ಳುವುದೊಳಿತಲ್ಲವೆ?' ಎಂದು ಕೇಳಿದಳು

'ಮೋಹಿನಿ, ಸಂಧಿಯ ಸಮಯ ಸಂದು ಹೋಯಿತು. ನರಪತಿಯನ್ನು ನಾವು ಬಹಳವಾಗಿ ಕೆರಳಿಸಿರುವೆವು ಮೊದಲು ಕರ್ನಾಟಕ ರಾಜ್ಯದಲ್ಲಿ ದಾಳಿಯಿಕ್ಕಿದುದೇ ಮೂರ್ಖತನವಾಯಿತು. ಆ ಮೇಲೆ ಮುಹಮ್ಮದೀಯರೊಡನೆ ಕೂಡಿದುದು ಹೆಚ್ಚಿನ ಮೂರ್ಖತನವಾಯಿತು. ಆತ ಮುಹಮ್ಮದೀಯರನ್ನು ಸೋಲಿಸಿ ನಮ್ಮ ಗಡಿಗೆ ಬಂದಾಗ್ಗೇನೇ ನಾವು ಸಂಧಿ ಸೂಚಿಸಿದ್ದರೆ ಅವನು ಸಮ್ಮತಿಸಬಹುದಿತ್ತು. ನಮ್ಮ ದುರ್ದೈವದ ಮೂಲಕವಾಗಿ

ಅದೂ ಆಗಲಿಲ್ಲ. ಆತನ ಕೈಯಲ್ಲಿ ಸಿಲುಕಿ ಸಂಪೂರ್ಣವಾಗಿ ಸೋತು ಹೋದರೂ ಅವನೊಡನೆ ಒಂದು ಸಲವಾದರೂ ಉದಾರತನದಿಂದ ವರ್ತಿಸದೆ, ನಮ್ಮ ಹೆಮ್ಮೆಯಲ್ಲಿಯೇ ನಾವಿರುವೆವು. ಇಂತಹ ಸಮಯದಲ್ಲಿ ಸಂಧಿಗವ ಕಾಶವೆಲ್ಲಿ? ಒಂದುವೇಳೆ ನಾವೇ ಮುಂದಾಗಿ ಹೋದರೂ, ನಮಗೆ ಅಪಮಾನ ಕಾರಕವಾದ ಹೀನ ಕರಾರು ಹಾಕದಿರುವುದು ಶಕ್ಯವೇ ಇಲ್ಲ. ಅಂತಹ ಹೀನ ಕರಾರುಗಳಿಗೆ ಸಮ್ಮತಿಸಿ ಬಾಳುವುದಕ್ಕಿಂತಲೂ ಮರಣವೇ ಲೇಸಲ್ಲವೆ?' ಗಜಪತಿಯೆಂದನು.

'ಒಂದುಸಲ ಯತ್ನಿಸಿ ನೋಡಿದರೆ ತಪ್ಪೇನು?' ಜಗನ್ಮೋಹಿನಿ ಅಂದಳು.

'ಈಗಲೆ ಇನ್ನೂ ಆ ಸಮಯ ಬಂದಿಲ್ಲ. ನಮ್ಮ ಹದಿನಾರು ಮಹಾ ಪಾತ್ರರ ಸೈನ್ಯಬಲವು ಬಹಳವಾಗಿದೆ. ಆ ಬಲದ ಸಹಾಯದಿಂದ ನಾವು ಇನ್ನೊಂದು ಸಲ ಸ್ವಾತಂತ್ರ್ಯಗಳಿಸುವ ಯತ್ನಮಾಡಬಹುದು.' ಗಜಪತಿ ಯೆಂದನು.

'ಪಿತಾಜಿ-ಪಿತಾಜಿ! ನನಗೆ ಈ ಯುದ್ಧವಾರ್ತೆ ಕೇಳಿ ಕಳವಳವಾಗುತ್ತ ಲಿದೆ ಎಲ್ಲಿ ನೋಡಿದರೂ ಕಷ್ಟಕರ ದುಷ್ಟ ನೋಟಗಳನ್ನೇ ತೋರುತ್ತ ಲಿರುವ ಈ ಯುದ್ಧವು ನಿಲ್ಲಲು ಅಲ್ಪವಾದರೂ ಅವಕಾಶವಿಲ್ಲವೆ? ಈ ಭೀಕರ ಯುದ್ಧದಿಂದ ಯಾವ ಲಾಭವಿದೆ? ಎಲ್ಲಿ ನೋಡಿದಲ್ಲಿ ರಾಜ್ಯದಲ್ಲೆಲ್ಲ ಶೋಕವೇ ತುಂಬಿಹೋಗಿದೆ. ಮಗನನ್ನು ಕಳೆದುಕೊಂಡ ಮಾತೆಯ ಶೋಕ, ಪತಿ ಯನ್ನು ಅರ್ಪಿಸಿದ ಪತ್ನಿಯ ವಿಲಾಪ, ಬಂಧುಗಳನ್ನು ನೀಗಿದ ಅಕ್ಕ-ತಂಗಿ ಯರ ದುಃಖ........ಎಲ್ಲಿ ನೋಡಿದರೂ ಶೋಕವೇ ಮನೆಮಾಡಿರುವ ಹೃದಯ ವಿದಾರುಣವಾಗುವ ನೋಟ ನೋಡಿ ನೋಡಿ ನನ್ನ ಕಣ್ಣು ಕಳೆಗಟ್ಟಿ ಹೋಗಿವೆ. ಪಿತಾಜಿ, ಸುಶಿಕ್ಷಿತರು, ತತ್ವಜ್ಞಾನಿಗಳು, ರಾಜಕಾರಣಪಟುಗಳು, ದೇಶಹಿತಚಿಂತನೆಗೆ ತನುಮನಧನಗಳನ್ನರ್ಪಿಸಿದ ಮಹಾಪುರುಷರು, ದೇಶದ ಸಿರಿ ಸಂಪತ್ತು ಹಾಳುಮಾಡುವ, ಜನತೆಯ ಪ್ರಾಣಹರಣಕ್ಕೆ ಕಾರಣವಾಗುವ, ರಾಷ್ಟ್ರದ ನೆಮ್ಮದಿಗೆ ಭಂಗವೀಯುವ ಈ ಭೀಕರ ಯುದ್ಧಕ್ಕೇಕೆ ಕೈಗೊಡ ಬೇಕು? ಯುದ್ಧ ಮಾಡಿ ಮಾಡಿ ದೇಶವನ್ನು ನಿರ್ಜನವಾಗಿ ಮಾಡುವ ಇವರ ಈ ಮನೋವೃತ್ತಿ ಹೇಗೆ ಬದಲಿಸುವುದು? ಪಿತಾಜಿ, ಉತ್ಕೃಷ್ಟ ಕಲಾ ವಿದರೂ, ತಮ್ಮ ರಾಷ್ಟ್ರದ ಹೆಸರು ಅಜರಾಮರವಾಗುಳಿಯುವಂತೆ ಮಾಡುವ ಶ್ರೇಷ್ಠ ಕವಿಗಳು, ಉತ್ತಮ ಲೇಖಕರು, ಮೇಲ್ತರಗತಿಯ ಚಿತ್ರಗಾರರು, ರಾಷ್ಟ್ರಕ್ಕೆ ರತ್ನಗಳೋಪಾದಿಯಲ್ಲಿದ್ದ ಪುರುಷಮಣಿಗಳನ್ನೆತ್ತಿ ಅಗ್ನಿಗೆಸೆಯುವ ಈ ಯುದ್ಧವು ತಪ್ಪದೆ?.....' ಜಗನ್ಮೋಹಿನಿ ಕಳವಳದಿಂದ ಮಾತನಾಡಿದಳು.

ಮಗಳ ಕರುಳು ಕಿತ್ತು ಬರುವಂತಹ ಧ್ವನಿಯಿಂದಲೂ, ಹೃದಯದ ತಳಮಳವನ್ನು ಚನ್ನಾಗಿ ಪ್ರತಿಬಿಂಬಿಸಿದ ಮೊಗ ಮುದ್ರೆಯಿಂದಲೂ ಗಜಪತಿಗೆ ಬಹಳ ದುಃಖವಾಯಿತು. ನಿಜವಾಗಿಯೂ ಯುದ್ಧವು ದುಷ್ಪರಿಣಾಮಕಾರಕ ವೆಂದು ಯಾರು ಅರಿತಿಲ್ಲ! ಆದರೂ ಪುನಃ ಪುನಃ ಪ್ರವೃತ್ತರಾಗುತ್ತಿರಲು ಕಾರಣವಾದರೂ ಏನು? ಆಧುನಿಕ ಕಾಲದಲ್ಲಂತೂ ಈ ಯುದ್ಧದಿಂದಾಗುವ ನಷ್ಟ ಅಷ್ಟಿಷ್ಟಲ್ಲ. ವೈಜ್ಞಾನಿಕ ಶೋಧ ಬೆಳೆಯುತ್ತ ನಡೆದಂತೆ, ಮಾನವ ಪ್ರಾಣಹಾರಕ ನವಯಂತ್ರಗಳು ಬೆಳೆಯುತ್ತಲೇ ನಡೆಯುತ್ತಲಿವೆ. ಈಗ ಇಪ್ಪತ್ತು ಇಪ್ಪತ್ತೆರಡು ವರ್ಷಗಳಿಗೆ ಮೊದಲಾದ ಮಹಾಯುದ್ಧವು ಅತೀವ ಭಯಂಕರವಾಯಿತು. ಹಿಂದೆ ಆಗಿಲ್ಲ, ಮುಂದೆ ಆಗಲಿಕ್ಕಿಲ್ಲವೆಂದು ಆ ವೇಳೆ ಯಲ್ಲಿ ಜನರು ಭಾವಿಸಿದ್ದರು. ಆ ಯುದ್ಧದ ಪರಿಣಾಮವಾಗಿ ಅನೇಕ ರಾಷ್ಟ್ರ ಗಳು ಎಂದೂ ತಲೆಯೆತ್ತಲಾರವೆಂದು ಅನೇಕ ರಾಜಕಾರಣಪಟುಗಳು ಊಹಿಸಿದ್ದರು. ಬಹುಶಃ ಅದೇ ಕೊನೆಯ ಯುದ್ಧವೆಂದೂ, ಮುಂದೆ ಯುದ್ಧ ವೆಂಬ ಸೊಲ್ಲೇ ಕೇಳದೆಂದೂ ಅನೇಕರು ತಿಳಿದಿದ್ದರು. ಅಂತೆಯೇ ರಾಷ್ಟ್ರ ರಾಷ್ಟ್ರಗಳ ಕಲಹಗಳನ್ನು ತೀರಿಸಲು ರಾಷ್ಟ್ರಸಂಘವನ್ನು ಸ್ಥಾಪಿಸಿದ್ದರು. ನೆಮ್ಮದಿ ಕಾಲವೇ ಬಂತೆಂದು ಬಲಹೀನ ರಾಷ್ಟ್ರಗಳು ಭಾವಿಸಿದ್ದುವು; ಆದರೆ ಈಗೇನು? ಮಹಾಯುದ್ಧವನ್ನು ಮರೆಯಿಸುವ ಬೇರೊಂದು ಮಹಾಯುದ್ಧ ವ್ಯದೋರಲಿದೆ. ಆಧುನಿಕ ಯುದ್ಧದ ಪರಿಣಾಮವನ್ನು ಯುದ್ಧಾಂತ್ಯ ವಾದರೂ ಅನೇಕ ವರುಷ ಯುದ್ಧಕ್ಕೆ ಸಂಬಂಧಿಸದಿದ್ದವರೂ ಅನುಭವಿಸ ಬೇಕಾಗಿದೆ. 'ವಿಷವಾಯು' ವೈಜ್ಞಾನಿಕರ ಶೋಧದ ಮಹತ್ಕಾರ್ಯವಿದು. ಯುದ್ಧದಲ್ಲಿ ಪ್ರಾಣಹರಣಕ್ಕೂ, ಯುದ್ಧ ಮುಗಿದ ಮೇಲೆ ಅನೇಕ ರೋಗ ಗಳಿಗೆ ಜನುಮವಿತ್ತು ಅದರ ಮೂಲಕವಾಗಿ ಶಾಂತ ಸಮಯದಲ್ಲಿ ಕೂಡ ಪ್ರಾಣಹರಣಕ್ಕೂ ಕಾರಣವಾಗುತ್ತಲಿವೆ. ಕೊನೆಗೊಮ್ಮೆ ಈ ವೈಜ್ಞಾನಿಕರೇ ಇಂತಹ ತೀಕ್ಷ್ಣವಾಯು-ದ್ರಾವಕಗಳ ಶೋಧದಿಂದ ಪ್ರಳಯವನ್ನು ತರುವ ರೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ಇರಲಿ.

ಜಗನ್ಮೋಹಿನಿ ಸಂಧಿಯಾಗುವಂತೆ ಬಹಳವಾಗಿ ಯತ್ನಿಸಿದಳು; ಆದರೆ ಅದರಿಂದ ಉಪಯೋಗವಾಗಲಿಲ್ಲ. ಭೂಭಾರ ಬೆಳೆದಾಗ್ಗೆ ಅದನ್ನು ಕಡಿಮೆ ಮಾಡಲು ಪರಮಾತ್ಮನೇ ನಿರ್ಮಿಸಿರಬಹುದಾದ ಈ ಯುದ್ಧವನ್ನು ನಿಲ್ಲಿಸು ವುದು ಆರಿಂದ ಶಕ್ಯವಿದೆ? ತನ್ನ ಕಾರ್ಯ ತಾ ಮಾಡಿದಲ್ಲದೆ ಅದೆಂದೂ ನಿಲ್ಲದು.

———

## ೧೧ ಸಿದ್ಧತೆ.

ಗಜಪತಿಯ ಸಭಾಮಂದಿರವು ಬಹಳವಾಗಿ ಶೃಂಗರಿಸಲ್ಪಟ್ಟಿದ್ದಿತು. ಕಲಿಂಗ ರಾಜ್ಯದ ಮುಖ್ಯ ಪಟ್ಟಣವು ಸಿಂಹಾದ್ರಿಯಿದ್ದರೂ, ಪ್ರೋಟ್ಟನೂರಲ್ಲೊಂದು ಅರಮನೆಯೂ ಇನ್ನಿತರ ವ್ಯವಸ್ಥೆಯೂ ಇದ್ದಿತು. ಅಂದು ಗಜಪತಿಯ ಹದಿನಾರು ಮಹಾಪಾತ್ರರು ಆಗಮಿಸಲಿದ್ದರು. ಅವರು ಕಲಿಂಗರಾಜ್ಯದ ಸಾಮಂತರಿದ್ದರೂ ಗಜಪತಿಯು ಅವರನ್ನು ಬಹಳವಾಗಿ ಆದರಿಸಲಿದ್ದನು ಆ ಸಾಮಂತ ಅರಸರ ಬಲದ ಮೇಲೆಯೇ ಕಲಿಂಗರಾಜ್ಯದ ಬಲವು ಬಹಳವಾಗಿ ಅವಲಂಬಿಸಿದ್ದಿತು. ಅವರ ಬಲವೂ ಬಹಳವಾಗಿದ್ದಿತು. ಅವರ ಹೊರತು ಸ್ವತಃ ಕಲಿಂಗ ರಾಜನದೇ ಆದ ಸೈನ್ಯವಿದ್ದಿತು. ಆ ಸೈನ್ಯದ ಮೂಲಕ ನರಪತಿಯನ್ನು ಹಿಂದಕ್ಕಟ್ಟಲು ಮಾಡಿದ ಯತ್ನವು ವಿಫಲವಾಯಿತು. ಕೊನೆಯ ಯತ್ನವೆಂದು ಸಾಮಂತ ರಾಜರನ್ನೆಲ್ಲ ಕಲೆಹಾಕಿದ್ದನು

ಸಭಾಮಂದಿರದಲ್ಲಿ ಎರಡು ಸಾಲುಗಳಲ್ಲಿ ಎಂಟು ಎಂಟು ಆಸನಗಳನ್ನು ಮಂಡಿಸಿದ್ದರು. ಒಂದು ತುದಿಗೆ ಕೊಂಚ ಎತ್ತರದಲ್ಲಿ ಗಜಪತಿಯ ಸಿಂಹಾಸನವಿದ್ದು ಅದಕ್ಕೆ ಕೊಂಚ ಕೆಳಗೆ, ಆದರೆ ಸಾಮಂತರಾಜರ ಆಸನಗಳಿಗೆ ಕೊಂಚವೇ ಎತ್ತರದಲ್ಲಿ ಕಲಿಂಗ ಮಂತ್ರಿ ದಾಮೋದರ ಶರ್ಮನ ಆಸನವಿದ್ದಿತು. ಆ ಕಾಲದಲ್ಲಿ ಭಾರತೀಯರ ವೈಭವವು ಬಣ್ಣನೆಯ ಅಳವಿನೊಳಗಿರಲಿಲ್ಲ. ಮಹಮ್ಮದೀಯರ ದಾಳಿಯಿಂದ ಅಗಣಿತ ಸಂಪತ್ತು ಹಿಂದುಸ್ಥಾನದಿಂದ ಹೊರಗೆ ಹೋಗಿದ್ದಿತು. ಆದರೂ ಇನ್ನೂ ಅಗಣಿತವೇ ಉಳಿದಿದ್ದಿತು. ಸಭಾಸ್ಥಾನವು ಒಳ್ಳೇ ವೈಭವಪೂರ್ಣವಾಗಿ ಶೃಂಗರಿಸಲ್ಪಟ್ಟಿದ್ದಿತು.

ಸಾಮಂತರಾಜರು ಒಬ್ಬೊಬ್ಬರೇ ಆಗಮಿಸಲಾರಂಭಿಸಿದರು. ಬಾಗಿಲಲ್ಲಿಯೇ ನಿಂತ ದಾಮೋದರ ಶರ್ಮನು ಅವರನ್ನು ಸ್ವಾಗತಿಸಿ ಕರೆತಂದು ಕೂರಿಸುತ್ತಲಿದ್ದನು. ಅಲ್ಪಾವಕಾಶದಲ್ಲಿಯೇ ಹದಿನಾರೂ ಜನರು ಬಂದು ಕುಳಿತರು. ಮುಂದೆ ಅಲ್ಪಾವಕಾಶದಲ್ಲಿ ಗಜಪತಿ ರಾಜವಸ್ತ್ರಾಭರಣಗಳಿಂದ ಭೂಷಿತನಾಗಿ ಬಂದನು. ಸಾಮಂತರೆಲ್ಲರೂ ಎದ್ದುನಿಂತು ನಮಸ್ಕರಿಸಿ, ಆದರಪೂರ್ವಕವಾಗಿ ಸ್ವಾಗತಿಸಿದರು. ಸಭೆಯು ಗುಪ್ತವಿಚಾರಕ್ಕಾಗಿ ಏರ್ಪಡಿಸಲ್ಪಟ್ಟುದರಿಂದ ಇನ್ನಾರೂ ಅಲ್ಲಿ ಪ್ರವೇಶಿಸುವಂತಿರಲಿಲ್ಲ. ಸಭೆಯಲ್ಲಿ ಗಾಂಭೀರ್ಯ-ಮೂರ್ತಿಮತ್ತಾಗಿದ್ದಂತೆ ಕಾಣುತ್ತಲಿದ್ದಿತು.

ದಾಮೋದರ ಶರ್ಮನೇ ಎದ್ದು ನಿಂತು ಸಭಾಕಾರ್ಯವನ್ನಾರಂಭಿ

ರಾಗಿರುವ ಮಹಾಪಾತ್ರರೆ, ನಾನು ಇಂದು ಈ ಸಭಾಕಾರ್ಯ ಸಾಂಗಗೊಳಿಸಲು ಆನಂದದಿಂದ ತಮ್ಮನ್ನು ಸ್ವಾಗತಿಸುತ್ತೇನೆ.

ನನ್ನ ಪ್ರಿಯ ಮಹಾವೀರರಾದ ಮಹಾಪಾತ್ರರೇ, ಇಂದು ನಾವೊಂದು ವಿಚಿತ್ರ ಸನ್ನಿವೇಶದಲ್ಲಿ ಕೂಡಿರುತ್ತೇವೆ. ಇನ್ನಾವುದೇ ಸಮಯವಾಗಿದ್ದಲ್ಲಿ ನಾವು ಅದೆಷ್ಟೋ ವಿಧವಾಗಿ ಮನರಂಜನೆ ಮಾಡಿಕೊಳ್ಳಬಹುದಿತ್ತು; ಉಪಾಹಾರವೇರ್ಪಡಿಸಬಹುದಿತ್ತು, ಆದರೆ ಇಂದು ಆ ಎಲ್ಲ ಸಂಗತಿಗಳಿಗೆ ಸಮಯವಿಲ್ಲ ಇಂದು ನಮ್ಮೆಲ್ಲರ ಮುಂದಿರುವ ಪ್ರಶ್ನೆಯೆಂದರೆ ಒಂದೇ ಒಂದು ಅದು ಅತ್ಯಂತ ಮಹತ್ವದ ಪ್ರಶ್ನೆಯಾಗಿರುತ್ತದೆ. ಅದೊಂದೇ ಸದ್ಯದ ಮುಖ್ಯ ವಿಷಯ ವಾಗಿದ್ದು, ಅದನ್ನೇ ನಾವೆಲ್ಲರೂ ಚನ್ನಾಗಿ ಪರಿಶೀಲನೆ ಮಾಡಬೇಕಾಗಿದೆ. ಅದಾವುದೆಂದರೆ, ಕಲಿಂಗದ ಸ್ವಾತಂತ್ರ್ಯ.

ನನ್ನ ಪ್ರಿಯ ಮಹಾಪಾತ್ರರೇ ಸ್ವಾತಂತ್ರ್ಯವು ಎಂತಹ ಶ್ರೇಷ್ಠವಸ್ತುವಿರುತ್ತದೆಂಬದನ್ನು ಅದನ್ನನುಭವಿಸುತ್ತಲಿರುವ ನಾವಲ್ಲದೆ ಅನ್ಯರು ತಿಳಿಯಲಾರರು. ನವ ಗೀಗ ಸ್ವಾತಂತ್ರ್ಯವಿರುತ್ತದೆಂದು ನಾವು ಬೇಕಾದ ಸಂಗತಿಗಳನ್ನು ಸಮಾಲೋಚಿಸಬಲ್ಲೆವು. ನಮಗೆ ಯೋಗ್ಯವೆನಿಸುವಂತೆ ವಿಹರಿಸಬಲ್ಲೆವು. ಆ ಒಂದು ಸ್ವಾತಂತ್ರ್ಯವಿರುವದರ ಮೂಲಕವೇ ನಮ್ಮ ಪ್ರಜೆಗಳು ಸುಖ ಸಮಾಧಾನಗಳಲ್ಲಿ ಜೀವನ ಸಾಗಿಸುತ್ತಲಿರುವರು.

ಆದರೆ ಮಹನೀಯರೇ, ಇಂದು ನಾನು ಬಹಳ ದುಃಖದಿಂದ ಹೇಳಬೇಕೆನ್ನುವ ವಿಷಯವೆಂದರೆ, ಈಗ ನಮ್ಮ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವ ಸಮಯ ಪ್ರಾಪ್ತವಾಗಿದೆ. ಇಂತಹ ಸಂಗತಿಯನ್ನು ವಿಚಾರಿಸಲು ಕೂಡ ಬೇಕಾದುದು ದುರ್ದೈವದ ಸಂಗತಿಯು. ಉಪಾಯವಿಲ್ಲ ಸಮಯ ಬಂದೊದಗಿದರೆ ಇಂದು ನಮ್ಮಗಳ ಪ್ರಯತ್ನದ ಮೇಲೆ ಕಲಿಂಗ ಮಾತೆಯ ಸ್ವಾತಂತ್ರ್ಯವು ಅವಲಂಬಿಸಿದೆ. ನಾವು ನಮ್ಮ ಸರ್ವಸ್ವದಿಂದ ನಮ್ಮ ಸ್ವಾತಂತ್ರ್ಯ ಕಾಯ್ದುಕೊಳ್ಳಬೇಕಾಗಿ ಬಂದಿದೆ. ಈ ವೇಳೆಯಲ್ಲಿ ನಾವು ಕೊಂಚ ಹಿಂದೆ ಬಿದ್ದಲ್ಲಿ ಕಲಿಂಗಮಾತೆಯ ಸ್ವಾತಂತ್ರ್ಯ ನಷ್ಟವಾಗಿ, ಕಲಿಂಗದೇವಿ ಪಾರತಂತ್ರ್ಯಕ್ಕೆ ಸಿಲುಕುವಳು. ತತ್ಪರಿಣಾಮವಾಗಿ ನಮ್ಮ ಜೀವನಗಳು ಬಹಳ ದುಃಖಮಯವಾಗುವವಲ್ಲದೆ, ನಮ್ಮ ಪೀಳಿಗೆ ತುತ್ತು ಕೂಳು ಕೂಡಾ ಕಾಣದಿರುವ ಪ್ರಸಂಗ ಬರಬಹುದು.

ಬಂಧುಗಳೇ, ಎಂತಹ ದುರ್ಧರ ಸಂಕಟವಿದ್ದರೂ ತಡೆಯಬಹುದು; ಆದರೆ ಪಾರತಂತ್ರ್ಯ,—ಛೀ! ಆ ಪಾರತಂತ್ರ್ಯದ ಹೆಸರನ್ನುಚ್ಚರಿಸುತ್ತಲೇ ಮೈಮೇಲೆ ಮುಳ್ಳುಗಳೇಳುತ್ತವೆ ಪಾರತಂತ್ರ್ಯ ಬಂಧನದಲ್ಲಿ ಸಿಲುಕಿದವನು

ಸಕಲ ಸುಖಕ್ಕೂ ಎರವಾಗುತ್ತಾನೆ. ಮನುಷ್ಯನೆಂಬ ಹೆಸರನ್ನು ಕೂಡಾ ಮರೆಯಬೇಕಾಗುತ್ತದೆ. ಭಾಷಣ, ಲೇಖನ, ವಿಚಾರ, ಕಾರ್ಯ ಮುಂತಾದ ನಮ್ಮ ಯಾವ ಸಂಗತಿಗೂ ಸ್ವಾತಂತ್ರ್ಯವಿರುವದಿಲ್ಲ. ಬಹಳವೇನು? ಒಂದು ತುತ್ತು ಕೂಳು ತಿನ್ನಬೇಕಾದರೂ ಪರಾವಲಂಬನವೇ.

ಮಿತ್ರರೇ, ಚನ್ನಾಗಿ ವಿಚಾರಿಸಿರಿ. ಇಂದು ನಾವು ಬಲು ಬಿಕ್ಕಟ್ಟಿನ ಸಂದಿನಲ್ಲಿರುತ್ತೇವೆ. ನಾವು ನಮ್ಮ ಸಕಲ ಪ್ರಯತ್ನಗಳಿಂದ ಸ್ವಾತಂತ್ರ್ಯ ಕಾಯ್ದುಕೊಂಡರೆ, ನಾವು ನಮ್ಮ ಕರ್ತವ್ಯ ಕೈಗೂಡಿಸಿದಂತಾಗುವುದು ಆದ ರಿಂದ ನಮಗೆ ಅಂತಹ ಸ್ತುತಿಗಳೇನೂ ದೊರೆಯಲಿಕ್ಕಿಲ್ಲ, ಆದರೆ ಈಗ ನಾವು ಕೊಂಚ ದುರ್ಲಕ್ಷ್ಯ ಮಾಡಿದಲ್ಲಿ ಕಲಿಂಗರಾಜ್ಯದ ಸ್ವಾತಂತ್ರ್ಯ ನಾಶಕ್ಕೆ ನಾವೇ ಕಾರಣರಾದಂತಾಗಿ, ನಮ್ಮ ನಿಂದೆ ಕೊನೆಯವರೆಗೂ ಉಳಿಯುವುದು.

ಕಲಿಂಗರಾಜ್ಯಕ್ಕೆ ಮೂಲಾಧಾರರಾದ ಮಹಾಪಾತ್ರರೇ, ನಾನು ಬಹಳ ಹೇಳುವುದಿಲ್ಲ; ತಾವೆಲ್ಲರೂ ಸೂಜ್ಞರೇ ಇರುವಿರಿ ಕಲಿಂಗಕ್ಕೆ ಮಹಾ ವಿಪತ್ಕಾಲವೊದಗಿದ ಮೂಲಕ ಮಾತೃಪ್ರೇಮವು ನನಗೆ ನಾಲ್ಕು ಮಾತುಗ ಳಾಡಹಚ್ಚಿತು. ಸದ್ಯ ಕಲಿಂಗದ ಸ್ವಾತಂತ್ರ್ಯ ಸಂಪೂರ್ಣವಾಗಿ ತಮ್ಮ ಮೇಲೆಯೇ ಅವಲಂಬಿಸಿದೆಯೆಂದು ನಾನು ನಿಮಗೆ ಮತ್ತೆ ಮತ್ತೆ ಹೇಳು ತ್ತೇನೆ ಮಾತೆ ಕರುಣಾಸ್ವರದಿಂದ ಕರೆಯುತ್ತಲಿರುವಳು ನಿಮ್ಮ ವಿವೇಕಕ್ಕೆ ಹೊಳೆದಂತೆ ಮಾಡಬೇಕು.

ದಾಮೋದರ ಶರ್ಮನ ಭಾಷಣವು ಆವೇಶಯುಕ್ತವೂ, ದೇಶಪ್ರೇ ಮೈಕ ಕಳಕಳಿಯಿಂದ ಕೂಡಿದುದೂ ಆಯಿತು. ಎಲ್ಲರ ಮನಸ್ಸಿನ ಮೇಲೆ ಸಾಕಷ್ಟು ಪರಿಣಾಮವನ್ನುಂಟು ಮಾಡಿತು ಎಲ್ಲರೂ ಕಲಿಂಗದ ಸ್ವಾತಂ ತ್ರ್ಯದ ಸಲುವಾಗಿ ಕೊನೆಯುವರೆಗೆ ಕಾದಾಡಲು ಸಿದ್ಧರಾದರು. ಅವರಲ್ಲಿ ಎಲ್ಲಕ್ಕೂ ವಯೋವೃದ್ಧನೂ ಶೂರನೆಂದು ಹೆಸರು ಹೊಂದಿದವನೂ ಆದ ಭೀಮದೇವನೆಂಬ ಸಾಮಂತರಾಜನು ಎದ್ದು ನಿಂತನು.

'ಕಲಿಂಗ ಸಾರ್ವಭೌಮರೇ, ಮತ್ತು ಕಲಿಂಗರಾಜ್ಯದ ಚತುರ ಮಂತ್ರಿ ವರರೇ, ನಾನು ಈ ಹದಿನಾರು ಮಹಾಪಾತ್ರರ ವತಿಯಿಂದ ಕಲಿಂಗ ಸಿಂಹಾ ಸನಕ್ಕೆ ಏಕನಿಷ್ಠರಾಗಿರುವ ಆಶ್ವಾಸನವೀಯುತ್ತೇನೆ. ಇಂದು ಎಲ್ಲರ ಮನ ಸ್ಸಿನ ಮೇಲೆ ಚನ್ನಾಗಿ ಪರಿಣಾಮವಾಗುವಂತೆ ಉತ್ಕೃಷ್ಟವಾಗಿ ಸದ್ಯ ಸ್ಥಿತಿಯ ಚಿತ್ರವನ್ನೂ, ಸ್ವಾತಂತ್ರ್ಯದ ಮಹತಿಯನ್ನೂ, ಪಾರತಂತ್ರ್ಯದ ಹೀನತನ ವನ್ನೂ ಚನ್ನಾಗಿಟ್ಟುದಕ್ಕೆ ನಾನು ಕಲಿಂಗರಾಜ್ಯದ ಮಹಾಮಂತ್ರಿಗಳನ್ನಭಿ ನಂದಿಸುತ್ತೇನೆ.'

ಸಾರ್ವಭೌಮರೇ, ಸ್ವಾತಂತ್ರ್ಯವು ಬಹಳ ಬೆಲೆಯುಳ್ಳ ವಸ್ತುವು. ಒಂದುಸಲ ಕಳೆದುಕೊಂಡರೆ, ಮರಳಿ ಪಡೆಯಲು ಬಹಳ ಕಷ್ಟಪಡಬೇಕಾಗುವುದು. ನಮ್ಮ ಆಯುವು ಮುಗಿದಿರಬಹುದು. ನಾವು ಪಾರತಂತ್ರ್ಯ ಕಷ್ಟವನ್ನು ಬಹಳ ದಿವಸ ಭೋಗಿಸಲಿಕ್ಕಿಲ್ಲ; ಆದರೆ ಈ ವಿಷಮಿಶ್ರಿತ ಪಕ್ವಾನ್ನವನ್ನು ನಮ್ಮ ಮುಂದಿನವರು ಉಣ್ಣುವ ಸಮಯ ಬಂದಾಗ್ಗೆ ಅವರು ನಮ್ಮನ್ನು ಬಹಳವಾಗಿ ನಿಂದಿಸದಿರಲಿಕ್ಕಿಲ್ಲ. ಕಲಿಂಗ ಸ್ವಾತಂತ್ರ್ಯ ನಾಶದ ಪರಿಣಾಮವಾಗಿ ನಮ್ಮ ಅಪಕೀರ್ತಿ ಭಾರತದಿತಿಹಾಸಿನಲ್ಲಿ ಆಚಂದ್ರಾರ್ಕವಾಗುಳಿಯಬಹುದು.

ಮಹಾರಾಜರೇ, ಮಾತುಗಳಿಂದ ಪ್ರಯೋಜನವಿಲ್ಲ. ಹೇಳತಕ್ಕುದನ್ನು ಮಹಾಮಂತ್ರಿಗಳು ಚನ್ನಾಗಿಯೇ ಹೇಳಿರುತ್ತಾರೆ ನಾನು ಕಲಿಂಗರಾಜ್ಯದ ಮಹಾಪಾತ್ರರೆಲ್ಲರ ಪತಿಯಿಂದ ಕಲಿಂಗ ಸಿಂಹಾಸನಕ್ಕೆ ಏಕನಿಷ್ಠೆಯಬಗ್ಗೆ ಮತ್ತೊಮ್ಮೆ ಆಶ್ವಾಸನವಿತ್ತು ನನ್ನ ಭಾಷಣ ಮುಗಿಸುತ್ತೇನೆ.

ಆ ಮೇಲೆ ಅವರಲ್ಲಿ ಅವರ ಮತ್ತು ಕರ್ನಾಟಕದ ಬಲಗಳ ಬಗ್ಗೆ ಚರ್ಚೆಯಾಯಿತು. ಯಾರ ಯಾರ ಬಲವು ಎಷ್ಟು ಮತ್ತು ಕರ್ನಾಟಕ ರಾಜನಲ್ಲಿದ್ದ ಬಲವು ಎಷ್ಟು ಎಂಬ ವಿಷಯಕ್ಕೆ ಚರ್ಚೆ ನಡೆಯಿತು. ಆ ಮೇಲೆ ಯುದ್ಧವನ್ನು ಹೇಗ ಮುಂದೆ ಸಾಗಿಸತಕ್ಕುದು, ಯಾರು ತಮ್ಮ ಸೈನ್ಯ ತೆಗೆದುಕೊಂಡು ಮುಂದೊರೆಯುವದು? ಮುಂತಾದ ಸಂಗತಿಗಳ ಬಗ್ಗೆ ಚರ್ಚೆನಡೆಯಿತು.

1ನೇ ಮಹಾಪಾತ್ರ - ನಾವು ನಮ್ಮ ಸೈನ್ಯದೊಂದಿಗೆ ಸಿಂಹಾದ್ರಿಯಲಗ್ಗೆ ಹತ್ತುವದೇ ಯೋಗ್ಯವೆಂದು ನನ್ನ ಅಭಿಪ್ರಾಯವಿರುತ್ತದೆ.

2ನೇ ಮ ಪಾ:—ಮಿತ್ರವರ್ಯರೇ, ನಿಮ್ಮ ಸೂಚನೆ ನನಗೆ ಮಾನ್ಯವಿದೆ, ಆದರೆ ಸಿಂಹಾಚಲವು ಬಹು ಭದ್ರವಾದ ಕೋಟೆಯಿರುತ್ತದೆಂಬ ಸಂಗತಿಯನ್ನು ಮರೆಯುವಂತಿಲ್ಲ,

1ನೇ ಮ ಪಾ:—ಅಹುದು, ಅದಕ್ಕೆ ನಾನು ಸಮ್ಮತಿಸುತ್ತೇನೆ. ನನ್ನ ಸೂಚನೆ ಆ ದೃಷ್ಟಿಯಿಂದ ಉಪಯೋಗವಿಲ್ಲದ್ದಾಗಬಹುದು. ಅಂತಹ ಸಮಯದಲ್ಲಿ ನನ್ನ ಮಿತ್ರರು ಯಾವ ಉಪಾಯವನ್ನು ಸೂಚಿಸುವರು?

2ನೇ ಮ. ಪಾ:—ಸ್ವಾಭಾವಿಕವಾಗಿ ನಾವು ಯುದ್ಧದಾಹ್ವಾನವನ್ನು ಕಳುಹಿದರೆ ಅದನ್ನು ನರಪತಿಯು ಸ್ವೀಕರಿಸಬಹುದಲ್ಲವೆ?

3ನೇ ಮ. ಪಾ.—ಅಹುದು, ಅಹುದು, ಇದೇ ಯೋಗ್ಯವಿದೆ. ನರಪತಿಯು ಯುದ್ಧದಲ್ಲಿ ನುರಿತವನು. ಇದಲ್ಲದೆ ವಿಜಯದಿಂದ ಮತ್ತನಾದವನು.

ನಮ್ಮ ಯುದ್ಧದಾಹ್ವಾನವನ್ನು ಕೇಳುತ್ತಲೇ ಕೋಟೆ ಬಿಟ್ಟು ಹೊರಗೆ ಬರಬಹುದು.

2ನೇ ಮ. ಪಾ:— ನಿಜ. ನಿಜ, ಮತ್ತು ಆತನು ಕೋಟೆಯಲ್ಲಿಯೇ ಅದೆಷ್ಟು ದಿನ ಕುಳ್ಳಿರುವನು? ತನ್ನ ದೇಶಕ್ಕೆ ಮರಳಿ ಹೋಗಲೇಬೇಕಲ್ಲವೆ? ಆದುದರಿಂದ ವಿಜಯ ನಿರ್ಣಯಕ್ಕೆ ಆತನೂ ಉತ್ಸುಕನಾಗಿರುವುದು ಸ್ವಾಭಾವಿಕವಿದೆ.

ಆ ಮೇಲೆ ಅವರೆಲ್ಲರಲ್ಲಿಯೂ ಆ ಬಗ್ಗೆ ಚರ್ಚೆ ನಡೆಯಿತು. ಬಹುತರವಾಗಿ ಎಲ್ಲರೂ ಕೋಟೆಗೆ ಮುತ್ತಿಗೆ ಹಾಕುವದಕ್ಕಿಂತ ಬಯಲಲ್ಲಿ ತಮ್ಮ ಸೈನ್ಯವನ್ನು ಚನ್ನಾಗಿ ರಚಿಸಿ, ಯುದ್ಧದಾಹ್ವಾನ ಕಳುಹತಕ್ಕುದು ಆತನು ಬಾರದಿದ್ದ ಸಮಯ ಚತುರರಾರಾದರೂ ಆತನನ್ನು ಕೋಟೆಯಿಂದ ಹೊರಗೆ ಹಾಕುವ ಕಾರ್ಯ ಸಾಧಿಸಬೇಕು, ಎಂವೇ ಎಲ್ಲರೂ ಸಮ್ಮತಿಸಿದರು.

ಈ ಎಲ್ಲ ಕಾರ್ಯಕ್ರಮ ಕೊನೆಗೊಳ್ಳುತ್ತಲೆ ಗಜಪತಿ ಎಲ್ಲರ ಉಪಕಾರ ಮನ್ನಿಸಲೆದ್ದನು.

'ನಮ್ಮ ಸಿಂಹಾಸನದ ಏಕನಿಷ್ಠ ಭಕ್ತರೇ, ನಿಜವಾಗಿಯೂ ಇಂದು ನನಗೆ ನಿಮ್ಮೆಲ್ಲರ ಐಕಮತ್ಯವಾದ ಸಹಾಯವನ್ನು ನೋಡಿ ನನಗೆ ಅತ್ಯಾನಂದವಾಗುತ್ತದೆ ಇಂದು ನಾವೆಲ್ಲರೂ ಮಹಾ ವಿಪತ್ತಿನಲ್ಲಿರುವ ಮೂಲಕ ನಾವೆಲ್ಲರೂ ಒಬ್ಬರೊಬ್ಬರ ವಿಚಾರದಂತೆ ಶಕ್ಯವಿದ್ದಮಟ್ಟಿಗೆ ಐಕ್ಯದಿಂದಲೆ ವರ್ತಿಸಬೇಕು; ಮತ್ತು ಕಲಿಂಗದ ಸ್ವಾತಂತ್ರ್ಯ ನಷ್ಟವಾಗದೆ, ಉಜ್ವಲವಾಗುಳಿಯುವಂತೆ ಮಾಡಲೆತ್ನಿಸಬೇಕು

ನಮ್ಮ ಪ್ರಿಯ ಮಿತ್ರರೇ, ನಾನು ಹೆಚ್ಚು ಮಾತನಾಡದೆ ಈ ಮಹಾ ವಿಪತ್ಕಾಲದಲ್ಲಿ ಕಲಿಂಗರಾಜ್ಯಕ್ಕೆ ಏಕನಿಷ್ಠ ಭಕ್ತಿಯನ್ನು ತೋರಿಸುದುದಕ್ಕಾಗಿ ನಾನು ನಿಮ್ಮ ಉಪಕಾರವನ್ನು ಬಹಳವಾಗಿ ಮನ್ನಿಸುತ್ತೇನೆ. ಹೀಗೆಯೇ ಸರ್ವಕಾಲದಲ್ಲಿಯೂ ಕಲಿಂಗನಾಡಿನ ಸ್ವಾತಂತ್ರ್ಯ ರಕ್ಷಣೆಗಾಗಿ ಹೆಣಗಾಡುವಿರೆಂದು ಆಶಿಸಿ, ನನ್ನ ಭಾಷಣವನ್ನು ಕೊನೆಗಾಣಿಸುತ್ತೇನೆ'

ಅಂದು ಸಭೆ ಮುಗಿಯಿತು.

ಮರುದಿವಸವೇ ಪೊಟ್ಟನೂರಿನ ದುರ್ಗದ ವಿಸ್ತಾರವಾದ ಬಯಲಲ್ಲಿ ಬೇರೆ ಬೇರೆ ದಂಡುಗಳು ಕಲೆಯುಹತ್ತಿದುವು. ನಾಲ್ಕಾರು ದಿವಸಗಳಲ್ಲಿ ಎಲ್ಲ ಮಹಾಪಾತ್ರರ ಸೈನ್ಯವೂ ಬಂದು ಜಮೆಯಾಯಿತು. ಎಲ್ಲೆಡೆಯಲ್ಲೂ ಯುದ್ಧದ ವಾತಾವರಣವೇ ಹರಡಿತು. ಎಲ್ಲಿ ನೋಡಿದರೂ ಯುದ್ಧವನ್ನೇ ಚರ್ಚಿಸುವುದು. ಯಾರನ್ನು ಕೇಳಿದರೂ ಯುದ್ಧದ ವಾರ್ತೆಯನ್ನೇ ವಿವರಿಸು

ವವರು. ಮನೆಯಲ್ಲಿ, ಬಯಲಲ್ಲಿ, ಹೊಲಗಳಲ್ಲಿ, ತೋಟಗಳಲ್ಲಿ ಎಲ್ಲೆಲ್ಲಿಯೂ ಯುದ್ಧವು ತಾನೇ ತಾನಾಗಿ ವ್ಯಾಪಿಸಿದ್ದಿತು ಪ್ರತಿಯೊಬ್ಬನೂ ಭಾವೀಯುದ್ಧದ ಭೀಕರತೆಯನ್ನು ಚರ್ಚಿಸುವವನೇ.

'ಯುದ್ಧಸ್ಯ ವಾರ್ತಾ ರಮ್ಯಾ.' ಆದರದು ಯಾವಾಗ್ಗೆ ಮತ್ತು ಎಲ್ಲಿ? ಯುದ್ಧ ದೂರ ಬೇರೊಂದು ಸ್ಥಳದಲ್ಲಿ, ನಮಗೆ ಸಂಬಂಧಿಸದ ಬೇರೆ ಬೇರೆ ಜನಾಂಗಗಳಲ್ಲಿ ನಡೆದಿರಬೇಕು ಅಂತಹ ಸಮಯದಲ್ಲಿ ಅವರು ಹೊಡೆದರು, ಇವರು ನಾಲ್ಕು ಮೈಲು ಮುಂದೊರೆದರು, ಅವರು ನಾಲ್ಕು ಸಾವಿರ ಜನರನ್ನು ಹೊಡೆದರು ಮುಂತಾಗಿ ಸಂಗತಿಯನ್ನು ಒಳ್ಳೇ ಉತ್ಸುಕತೆಯಿಂದ ಕೇಳುತ್ತೇವೆ. ನವಸುಧಾರಣೆಯ ಕಾಲದಲ್ಲಂತೂ ಯುದ್ಧದ ಸಮಯದಲ್ಲಿ ವೃತ್ತಪತ್ರಗಳಿಗೆ ಬಹಳೇ ಮಹತ್ವ ಬಂದಿರುತ್ತದೆ. ಕುಶಲ ಸಂಪಾದಕನಿದ್ದರಂತೂ ಓದುಗರ ಕಣ್ಣೆದುರು ಪ್ರತ್ಯಕ್ಷ ಯುದ್ಧವನ್ನೇ ತಂದು ನಿಲ್ಲಿಸುತ್ತಾನೆ. ಓದುಗರು ಅಂಥ ವೃತ್ತಪತ್ರವನ್ನೇ ಬಹಳವಾಗಿ ಪ್ರಶಂಸಿಸುತ್ತಾರೆ.

ಆದರೆ ಯುದ್ಧದ ಪ್ರಸಂಗ ನಮ್ಮ ಮೇಲೆಯೇ ಬಂದರೆ? ಆ ಸಮಯದಲ್ಲಿ ನಮ್ಮ ಕನಸು-ಮನಸುಗಳಲ್ಲಿ ಯುದ್ಧವು ಭೀಕರ ಭೂತದಂತೆ ನಾಟ್ಯವಾಡುತ್ತಲಿರುತ್ತದೆ ನಮಗೆ ಯುದ್ಧದ ಭೀಕರ ಪರಿಣಾಮದ ಹೊರತು ಬೇರೊಂದು ವಿಚಾರವೇ ಬರುವುದಿಲ್ಲ. ಆದರೂ ಆಗ್ಗೆ ನಾವು ಯುದ್ಧದ ವಾರ್ತೆ ಕೇಳದರೆ ಕಂಪಿಸುತ್ತೇವೆ; ಏಕೆಂದರೆ, ಈ ಯುದ್ಧದಿಂದ ನಮ್ಮ, ನಮ್ಮ ಬಂಧು-ಬಳಗದ, ನಮ್ಮ ಜನಾಂಗದ, ರಾಷ್ಟ್ರದ, ಮುಂಬಾಳು ತೀರ ಅನಿಶ್ಚಿತವಿರುತ್ತದೆ

ಜೀವನದ ಕ್ಷಣಿಕತ್ವವನ್ನಾದರೂ ಯುದ್ಧವು ಚೆನ್ನಾಗಿ ಕಲಿಸುತ್ತದೆ. ಮುಂಚಿನ ಕಾಲದಲ್ಲಿ ಯುದ್ಧಕ್ಕೆ ಸನ್ನದ್ಧರಾದ ದಂಡಾಳುಗಳಷ್ಟೇ ಯುದ್ಧದ ಭೀತಿಯಿಂದಾವರಿಸಲ್ಪಟ್ಟು, ಉಳಿದವರಿಗೆ ತಮ್ಮ ರಾಷ್ಟ್ರದ ಸ್ವಾತಂತ್ರ್ಯ-ಪಾರತಂತ್ರ್ಯಗಳ ಪ್ರಶ್ನೆಯಲ್ಲದೆ ಬೇರೊಂದಿರಲಿಲ್ಲ; ಆದರೆ ಈಗಿನ ಸಮಯ ಹಾಗಿಲ್ಲ. ಯುದ್ಧಕ್ಕೆ ಸಂಬಂಧಿಸಿದ ರಾಷ್ಟ್ರದ ಪ್ರಜೆಯಿದ್ದರಾಯಿತು; ಯಾವ ಸಮಯಕ್ಕೆ ಬಾಂಬು ಬರುತ್ತೆಂಬದು ತೀರ ಅನಿಶ್ಚಿತವಿರುತ್ತದೆ!

ಕಲಿಂಗದ ಅವಸ್ಥೆ ಹಾಗೆಯೇ ಆಗಿದ್ದಿತು ಯುದ್ಧವು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ಚಿಕ್ಕ ಮಗುಗಳು ಕೂಡ, 'ಏ, ನಾಳೆ ಯುದ್ಧ ಆಗೊದಿಲ್ಲವೆ? ಆಗ್ಗೆ ನಾನು ನನ್ನ ಖಡ್ಗ ಕೊಂಡೊಯ್ಯುವೆನು' ಎಂದೊಬ್ಬನೆಂದರೆ, 'ನನ್ನ ಭಾಲೆಯಿದೆಯಲ್ಲ, ಅದರಿಂದ ಶತ್ರುಗಳನ್ನು ಇರಿದು ಕೊಲ್ಲುವೆನು' ಎಂದಿನ್ನೊಬ್ಬ. 'ನನ್ನ ಚಪ್ಪಗೊಡಲಿ ಬಲು ಹದನವಾಗಿದೆ. ಒಂದೇಟಿಗೆ ಒಬ್ಬ

ನಂತೆ ಹಾರಿಸದಿದ್ದರೆ ನಾನು ಬಂಟನೆ?' ಎಂದು ಮಗುದೊಬ್ಬ. 'ಬಹಳ ಒಳಿತಾಯಿತು. ನೀವು ಯುದ್ಧಕ್ಕೆ ನಿಂತರೆ ಮುಗಿದು ಹೋಯಿತು. ಕನ್ನಡಿಗರು ಪಲಾಯನ ಹೇಳಿಸುವರು.' ಎಂದು ಕುಚೇಷ್ಟೆ ಮಾಡುವವನೂ ಅಲ್ಲಿ ಇಲ್ಲದಿರಲಿಲ್ಲ. ಹೀಗೆ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಯುದ್ಧದ ಭೂತವು ಸೇರಿದ್ದಿತು. ತಂದೆ ತನ್ನ ಮಗುವನ್ನು ಪ್ರೇಮದಿಂದ ಮುದ್ದಿಸುತ್ತಲಿರುವಾಗಲೆ ಯುದ್ಧವು ಸ್ಮರಣೆಗೆ ಬರಲು, 'ನಾಳೆ ಯುದ್ಧದಲ್ಲಿ ಮಡಿದರೆ, ಈ ಈ ಮಗುವನ್ನು ರಕ್ಷಿಸುವವರಾರು? ಮುಂದೆ ಮಗುವಿನ ಗತಿಯೇನು?' ಎಂದು ಭೀತಿಗೊಂಡು, ಮಗುವನ್ನು ಮತ್ತೆ ಮತ್ತೆ ಮುದ್ದಿಸುವನು. ನೂತನ ಪರಿಣಿತ ದಂಪತಿಗಳು ಸರಸವಾಡುತ್ತಲಿರುವಾಗಲೆ 'ನಾಳೆ ನನ್ನ ನಲ್ಲನು ಯುದ್ಧಕ್ಕೆ ಹೊರಟು ಹೋಗುವನು ಆ ಮೇಲೆ . ಮುಂದೇನಾಗುವದೋ ಆರು ಬಲ್ಲರು? ಆಗ್ಗೆ ನನ್ನ ಗತಿಯೇನು? ನಾನು ಯಾರನ್ನು ನೋಡಿ ಆನಂದಿಸಬೇಕು? ಹೇಗೆ ಜೀವಿಸಬೇಕು? ದೇವಾ! ಈ ನರಹತ್ಯೆಯನ್ನೆಂದು ತಡೆಯುವೆ? ನಮ್ಮಂತಹ ಹೊಸದಾಗಿ ಬಾಳುವೆಗಾರಂಭಿಸಿದ ಪ್ರಮದೆಯರ ಗೋಳನ್ನಾದರಗ ಕೇಳಿ ಯುದ್ಧವೆಂಬ ಈ ರಾಕ್ಷಸನನ್ನೇ ನಾಶಮಾಡಬಾರದೆ?" ಎಂದು ಬೇಗುದಿಗೊಂಡು, ಕಂದಿದ ಮೊಗದಿಂದ ನಿಲ್ಲಲು, ಇನಿಯಳ ಮನವರಿತು ನಲ್ಲನು 'ಪ್ರಿಯೆ, ಯುದ್ಧದಲ್ಲಿ ಮಡಿದರೆ ವೀರಸ್ವರ್ಗವೆಂದು ನೀನರಿತಿಲ್ಲವೆ? ನಾನು ಒಂದು ವೇಳೆಮಡಿದರೆ ನಿನ್ನಗೋಸುಗ ಸ್ವರ್ಗದಲ್ಲಿ ದಾರೀ ಕಾಯುತ್ತಲಿರುವೆನು. ನೀನು ಬಂದೊಡನೆ ಆನಂದದಿಂದ ಸುಖಭೋಗಿಸುವ.' ಎಂದು ಉತ್ತೇಜಿಸುವನು ಅದೇ ಸಮಯದಲ್ಲಿ 'ಎಲ್ಲಿಯ ಸ್ವರ್ಗವೋ ಏನೋ? ಇಂತಹ ಐಹಿಕ ಸುಮಧುರ ಸೊಬಗನ್ನು ಸವಿಯುವುದರಲ್ಲಿ ವಿಘ್ನ ಬಂದಿತಲ್ಲವೆ? ಇಂತಹ ನರಯಜ್ಞ ಹೇಗೆ ತಡೆಯುವುದು?' ಎಂದು ಅವನೂ ಖಿನ್ನನಾಗುವನು. ಇವೆಲ್ಲಕ್ಕೂ ಹೆಚ್ಚಿನ ಕ್ಲೇಶಕರ ನೋಟವೆಂದರೆ, ಮಾತೆಯದು. ಹತ್ತು ತಿಂಗಳು ಹೊತ್ತು ಹೆತ್ತು ಜೋಪಾನ ಮಾಡಿದ ತನ್ನ ಮಗುವನ್ನು, ಪ್ರೀತಿಯ ಪುತ್ರನನ್ನು, ಪ್ರೇಮದಣುಗನನ್ನು ತಾನಿನ್ನೂ ಜೀವಿಸಿರುವಾಗಲೆ ಮೃತ್ಯುಭೂಮಿಗೆ ಕಳುಹಬೇಕಾದರೆ, ಆ ಪ್ರೇಮದ ತಾಯಿಯ ಹೃದಯದಲ್ಲಿ ಅದೆಷ್ಟು ಕಷ್ಟಗಳು ಸಂಭವಿಸುತ್ತಲಿರಬಹುದು? ಸಹಸ್ರ ಚೇಳು ಕಚ್ಚಿದುದಕ್ಕಿಂತಲೂ ಹೆಚ್ಚಾಗಿ ವೇದನೆ ಆ ತಾಯಿಯ ಹೃದಯಕ್ಕಾಗುತ್ತಲಿರಬಹುದಲ್ಲವೆ? ಮಗನಿಗೆ ಉಣಬಡಿಸುತ್ತಲಿರುವಾಗ್ಗೆ, ಸ್ನಾನಕ್ಕೆ ನೀರು ಕೊಡುತ್ತಲಿರುವಾಗ್ಗೆ, ಮಗನನ್ನು ಮಲಗಿಸುತ್ತಲಿರುವಾಗ್ಗೆ, 'ನಾಳೆಗೆ ಮಗನು ಸಿಕ್ಕದಿರಬಹುದೆ? ನನ್ನ ಪ್ರೀತಿಯ ಮಗನು ಕಣ್ಮರೆಯಾಗುವನೆ? ಇನ್ನು ನಾನು

ನನ್ನ ಮಗನನ್ನು ಕಾಣದೆ ಈ ಭವಾರಣ್ಯದಲ್ಲಿ, ಕತ್ತಲೆಯಲ್ಲಿ ಕಣ್ಣು ಕಳೆದಂತಾಗುವದೆ? ನನ್ನ ಹೃದಯದಾಶೆ, ಕಣ್ಣೋಟ, ಜೀವನದ ಸೊಬಗು ಎಲ್ಲವೂ ಮರೆಯಾಗಿ ಹೋಗುವದೆ?'' ಮುಂತಾಗಿ ತಳಮಳಿಸುತ್ತ ಪುನಃ ನೋಡಲು ಸಿಕ್ಕದಿರಬಹುದೆಂದು ಮಗನ ಸಿರಿಮೊಗವನು, ಮುದ್ದುಮೊಗವನು, ಇನಿಮೊಗವನು ಮತ್ತೆ ಮತ್ತೆ ನಿರೀಕ್ಷಿಸಿ, ಯುದ್ಧದಲ್ಲಿ ಮರಣ ಹೊಂದಲಿದ್ದ ಮಗನನ್ನು ತನ್ನ ಹೃದಯದಲ್ಲಿ ಭದ್ರವಾಗಿರಿಸುವಂತೆ ಮತ್ತೂ ಮತ್ತೂ ನೋಡುವಳು. 'ದೇವಾ! ತಾಯಿಯರ ಬಾಳಿನ ಬೆಳಕೇ ಆದ ಈ ಮಕ್ಕಳನ್ನು ಆಹುತಿಯಾಗಿ ತೆಗೆದುಕೊಳ್ಳುವ ಮೊದಲು ತಾಯಿಯರನ್ನೆಲ್ಲ ನಾಶಗೊಳಿಸಬಾರದೆ! ಇಲ್ಲವೆ ತಾಯಿಯ ಮಾಯೆಗೆ ಮರೆಹಾಕಬಾರದೆ!! ತಾಯಿಯರ ಕರುಳು ಕರಗಿಸಬಾರದೆ!!!'' ಮುಂತಾಗಿ ಪ್ರಾರ್ಥಿಸುವರು. ಆದರೇನು? ಯುದ್ಧವು ನಿರ್ಘೃಣ ರಾಕ್ಷಸನಂತೆ ಮತ್ತೂ ಮತ್ತೂ ಸಮೀಪಿಸಿ ಜನತೆಯ ಮನವನ್ನು ಅತಿಯಾಗಿ ಆಕ್ರಮಿಸಿ ಭಯಪಡಿಸುತ್ತಲಿದ್ದಿತು. ಹೀಗೆ ಯುದ್ಧದ ಜ್ವಾಲೆಯ ಝಳಕ್ಕೆ ಪ್ರೇಮದ ಭಿನ್ನ ಭಿನ್ನ ಸ್ವರೂಪ ತಳೆದಿದ್ದ ಸ್ತ್ರೀಹೃದಯ ಕಂದಿ-ಕಮರಿ ಹೋಗುತ್ತಲಿದ್ದಿತು. ಅನೇಕರು ಮಾನವ ದೇಹವು ನಶ್ವರವೆಂಬ ವೇದಾಂತಕ್ಕೆ ಎಡೆಗೊಟ್ಟಿದ್ದರು. ಹಲವರು ಕರ್ತವ್ಯದ ಉಚ್ಚಭಾವನೆಯಿಂದ ಪ್ರೇರಿತರಾಗಿದ್ದರು. ಕೆಲವು ಅಂಜುಗುಳಿಗಳು ಯುದ್ಧದ ಭೀತಿಯಿಂದ ಕಂಗೆಟ್ಟು ಮುಂಗಾಣದೆ ಮೂಢರಾಗಿದ್ದರು. ಎಲ್ಲರೂ ತಮ್ಮ ಆಸ್ತಿ-ಪಾಸ್ತಿಗಳ ವಿಷಯಕ್ಕೆ ಔದಾಸೀನ್ಯ ತಳೆದಿದ್ದರು ಪ್ರಪಂಚವು ಅಸಾರವೆಂದು ಅರಿಯುತ್ತಲಿದ್ದರು ಆಲಿಂಗಿಸುವ ಪ್ರಣಯೀ ಜೊತೆ, ಮುದ್ದಿಕ್ಕುವ ದಂಪತಿಗಳು, ಸರಸವಾಡುತ್ತಲಿದ್ದ ಪ್ರೀತಿಯ ಪತಿ-ಪತ್ನಿಯರು ಎಲ್ಲರೂ ತಮ್ಮ ತಮ್ಮ ಪ್ರೇಮದಾಟದಲ್ಲಿ ಯುದ್ಧಸ್ಮರಣೆಯಾಗುತ್ತಲೆ ಖಿನ್ನರಾಗಿ, ಸಾರರಹಿತವಾದ ಸಂಸಾರದ ವಿಷಯಕವಾಗಿ ಖಿನ್ನರಾಗುತ್ತಲಿದ್ದರು.

ಯುದ್ಧವು ಭೀಕರಾಕಾರ ತಾಳಿ ಕ್ರೂರ ರಕ್ಕಸನಂತೆ ಕಲಿಂಗ ನಾಡವರನ್ನೆಲ್ಲ ಭಯಪಡಿಸಿರಲು ಅದರ ಉರಿ ಜಗನ್ಮೋಹಿನಿಗೂ ತಾಕದಿರಬಹುದೆ? ಯುದ್ಧವನ್ನು ತಪ್ಪಿಸಿ ಸಂಧಿಗಾಗಿ ಯತ್ನಿಸುವಂತೆ ಆಕೆ ಇನ್ನೂ ಒಂದೆರಡು ಸಲ ತಂದೆಗೆ ಬಿನ್ನವಿಸಿದಳು. ಯುದ್ಧದ ಭೀಕರತೆಯನ್ನು ಮನ ಕರಗುವಂತೆ ಬಣ್ಣಿಸಿದಳು. ಸ್ತ್ರೀ ಹೃದಯವನ್ನು ಸ್ತ್ರೀಯರಲ್ಲದೇ ಅನ್ಯರು ಅರಿಯಲಾರರು. ಆಕೆಗೆ ಮಾತೃಸುಖದ, ಪತ್ನಿಸುಖದ ಅನುಭವ ಇನ್ನೂ ಆಗಿರದಿದ್ದರೂ ಅವರ ದುಃಖದ ಕಲ್ಪನೆಯಿಂದ ಆಕೆ ಬಳಲಿ ಬೆಂಡಾಗಿದ್ದಳು. ಕಲಿಂಗ ಸ್ತ್ರೀಯರ ಪರಿಯಿಂದ ಅವರ ಎಲ್ಲ ಕಷ್ಟ-ನಷ್ಟಗಳನ್ನು ತೋಡಿಕೊಂಡಳು. ಏನು ಮಾಡಿ

ದರೂ ಪ್ರಯೋಜನವಾಗಲಿಲ್ಲ ಎಲ್ಲವೂ ಸಿದ್ಧವಾದಾಗ್ಗೆ ಹಿಂದೆಗೆದರೆ ಮಹಾಪಾತ್ರರು, ಜನತೆಯು ಎಲ್ಲರೂ ತನ್ನನ್ನು ನಿಂದಿಸಬಹುದೆಂಬ ಭೀತಿಯಿಂದ ಜಗಪತಿ ಸಮ್ಮತಿಸಲಿಲ್ಲ. ಜಗನ್ಮೋಹಿನಿ ಕನ್ನಡ ಶಿಬಿರದತ್ತ ಆಶಾಪೂರ್ಣ ನೋಟ ಬೀರುತ್ತಲಿದ್ದಳು. ಅಪ್ಪಾಜಿಯಂತಹ ಚತುರಮಂತ್ರಿಯೂ, ರಾಯನಂತಹ ಉದಾರನೃಪತಿಯೂ, ರಾಮಲಿಂಗನಂತಹ ನಿಜವಾದ ಶೂರ ಪುರುಷನೂ ಅಲ್ಲಿ ಕೂಡಿದ್ದುದರ ಪರಿಣಾಮವು ಉತ್ಕೃಷ್ಟವಾಗಿ ಪರಿಣಮಿಸಬಹುದೆಂದು ಆಕೆಗೆ ಬಲವಾದ ಆಶೆಯಿದ್ದಿತು. ಒಂದಿಲ್ಲೊಂದು ಉಪಾಯದಿಂದ ಭಯಂಕರ ಪ್ರಾಣಹಾನಿಯನ್ನು ತಪ್ಪಿಸುವರೆಂದು ಆಕೆ ಆಶಿಸುತ್ತಲಿದ್ದಳು. ಕಲಿಂಗ-ಕರ್ನಾಟಕಗಳಲ್ಲಿ ಸುಮಧುರ ಸಖ್ಯ ನೆಲೆಗೊಳ್ಳುವವೆಂಬದೇ ಇಕೆಯ ಆಶೆಯಾಗಿದ್ದಿತು. ಅವರ ವ್ಯೂಹದ ಬಗ್ಗೆ ಆಕೆ ಕೆಲವು ಊಹೆ ಕಟ್ಟಿ, ಅವುಗಳಿಗೆ ಅಸ್ತಿವಾರ ಹಾಕುವ ಯತ್ನ ಮಾಡಿದಳು.

'ಪಿತಾಜಿ, ಕಲಿಂಗನಾಡವರೆಲ್ಲರೂ ನರಪತಿಯ ಶೌರ್ಯೌದಾರ್ಯಗಳಿಗೆ ಮನಸೋತಿರುವರು.'

'ಅಹುದು, ಮೋಹಿನಿ, ನಿನ್ನ ಮಾತು ಸತ್ಯವಿದೆ ನರಪತಿ ಅಂತಹ ಧೀರನಿರುವನು. ಪುರುಷಶ್ರೇಷ್ಠನೇ ಅವನಾಗಿರುವನು.'

'ಅವನಾ ನಿರುಪಮ ಗುಣಗಣಕ್ಕೆ ನಮ್ಮ ಮಹಾಪಾತ್ರರೂ ಮೆಚ್ಚಿಹೋಗಿರುವರೆಂದು ನನಗೆ ತಿಳಿದುಬಂದಿದೆ'

'ಅದು ಹೇಗೆ ಹೇಳುವೆ?

'ಅವರ ಶಿಬಿರದಲ್ಲಿ ನೇನಗಿದ್ದ ದಾಸಿಯೊಬ್ಬಳ ಮುಖದಿಂದ.'

'ಅವಳೇನು ಹೇಳಿದಳು?'

'ಮಹಾಪಾತ್ರರೆಲ್ಲರೂ ಮುಕ್ತಕಂಠದಿಂದ ನರಪತಿಯ ಉದಾರ ವೀರ ಚರಿತೆಯನ್ನು ಸ್ತುತಿಸುತ್ತಲಿದ್ದರು.'

'ಸ್ವಾಭಾವಿಕವಿದೆ ಯಾವ ವಿವೇಕಿಯಾದ ಮನುಷ್ಯನೂ ನರಪತಿಯ ಸದ್ಗುಣ ಸಮೂಹದಿಂದ ಆನಂದಭರಿತವಾಗುವಂತಿರುತ್ತದೆ ನಾನೆಲ್ಲಿ ನರಪತಿ ದುಷ್ಟನೆನ್ನುವೆನು? ಆತನು ಅಂತಹ ಪುರುಷನೇ ಇರುವನು.'

'ಇದೆಲ್ಲವೂ ನಿಜವೆ, ಆದರೆ ... ..' 'ಆದರೆ ಏನು'

'ಇನ್ನೇನಿಲ್ಲ. ಇಂತಹ ಅಪ್ರತಿಮ ಪುರುಷಶ್ರೇಷ್ಠನೊಡನೆ ಮೈತ್ರಿ ಬೆಳೆಯಿಸುವುದರ ಬದಲು ಕಲಹಕ್ಕೆ ಪ್ರವೃತ್ತರಾಗಿರುವಿರಿ? ಈ ವಿಷಯದಲ್ಲಿ ನಿರುಪಾಯರಾಗಿರುವಂತೆ ಹೇಳುತ್ತಲಿರುವಿರಿ .. .. .'

'ಅಹುದು. ಮೋಹಿನಿ, ನಾನೀ ವಿಷಯದಲ್ಲಿ ತೀರ ನಿರುಪಾಯನಾಗಿರುವೆನು. ಏನೇ ಆದರೂ ಯುದ್ಧ ಮಾಡಲೇಬೇಕಾಗಿದೆ.'

'ಆಗಲಿ; ಆದರೆ ... .. ' 'ಆದರೆ ಏನು?'

'ಆಯತ್ತದ ಸಮಯದಲ್ಲಿ . .....' 'ಮುಂದೆ ಏನು?'

'ಘಾತವಾಗುವ ಸಮಯ ಬಂದರೆ?'

'ಅದೇನು ಮೋಹಿನಿ? ಯುದ್ಧಕ್ಕೆ ಸಿದ್ಧನಾದವನು ಘಾತ-ಪಾತಗಳಿಗೆ ಭಯಪಡುವನೆ? ಗೆದ್ದರೆ ಕೀರ್ತಿ, ಸತ್ತರೆ ಸೌಖ್ಯ!'

'ಅಹುದು ಪಿತಾಜಿ; ನಾನದನ್ನು ಬಲ್ಲೆ. ಆ ದೃಷ್ಟಿಯಿಂದ ಮಾತನಾಡಲಿಲ್ಲ'

'ಹಾಗಾದರಿನ್ನೇನು?'

'ಮೋಸ ಸಂಭವಿಸಬಹುದೆಂದು ನನ್ನ ಊಹೆ.'

'ಅಂದರೆ? ಏನೆಂಬದನ್ನು ಸ್ಪಷ್ಟವಾಗಿ ಹೇಳು'

'ಇನ್ನೇನಿಲ್ಲ; ಮಹಾಪಾತ್ರರು ನರಪತಿಯ ಪಕ್ಷವಹಿಸಿದರೂ ವಹಿಸಬಹುದೆಂಬದೇ ನನ್ನ ಸಂದೇಹ'

'ಛೆ! ಇದು ತೀರ ನಿರಾಧಾರವಾದುದು. ಅವರು ನಮ್ಮ ಸಿಂಹಾಸನದ ಏಕನಿಷ್ಠ ಭಕ್ತರು. ಅಂತಹರಲ್ಲಿ ಅವಿಶ್ವಾಸವೆಂದರೆ, ಸ್ವತಃ ನನ್ನಲ್ಲಿಯೇ ನಾನು ಅವಿಶ್ವಾಸ ವ್ಯಕ್ತಮಾಡಿದಂತೆಯೇ ಸರಿ.'

'ನನ್ನ ಕಲ್ಪನೆಯೇನೋ ಹಾಗಾಗಿದೆ.' 'ಆಧಾರವೇನು?'

'ಯುದ್ಧದ ಪರಿಣಾಮವಾಗಿ ನರಪತಿ ಗೆಲ್ಲುವುನೆಂಬದು ಅವರಿಗೆ ನಂಬುಗೆಯಾಗಿ ಹೋಗಿದೆ.'

'ಸ್ವಾಭಾವಿಕವಿದೆ. ನರಪತಿಯೇ ಬಹುಶಃ ಗೆಲ್ಲಬಹುದೆಂದು ನನಗೂ ಭಾವನೆಯಾಗಹತ್ತಿದೆ;- ಆದರೆ ಅಷ್ಟರಿಂದ ಅವಿಶ್ವಾಸಕ್ಕೆ ಕಾರಣವೇನು?'

'ಸೋತು ನರಪತಿಯ ಗುಲಾಮರಾಗುವುದಕ್ಕಿಂತಲೂ ಈಗಲೆ ಅವರ ಮಾಂಡಲಿಕರಾಗುವುದೊಳಿತೆಂಬದು.'

ಗಜಪತಿಯ ಮನದಲ್ಲಿ ಸಂಶಯದ ಮೊಳಿಕೆ ನೆಟ್ಟಂತಾಯಿತು. ತನ್ನ ಮಹಾಪಾತ್ರರೇ ತನಗೆ ಮೋಸ ಮಾಡಬಹುದೆಂಬ ಭೀತಿ ಅವನ ಮನದಲ್ಲಿ ಪ್ರವೇಶಮಾಡಿತು. 'ಮಹಾಪಾತ್ರರ ಸಹಾಯದ ಆಶ್ವಾಸನದ ಮೂಲಕವೇ ನಾನು ಯುದ್ಧಕ್ಕೆ ಸಿದ್ಧನಾಗಿರುವೆನು. ಇಲ್ಲವಾಗಿದ್ದರೆ, ನರಪತಿಯು ಹೇಳಿದಂತೆ ಕೇಳಿ ಸಂಧಿಯನ್ನಾದರೂ ಸಾಧಿಸುತ್ತಲಿದ್ದೆನು; ಇಲ್ಲವೆ ಹಿಮಾಲಯಕ್ಕಾದರೂ ಹೊರಡುತ್ತಲಿದ್ದೆನು. ಕಲಿತನದಿಂದ ಕಾದಿದರ, ಮುಂವೆ ಪರಿ

ಣಾಮವೇನಾದರೂ ಆಗಲಿ, ಆ ಬಗ್ಗೆ ನಾನು ಅಳುಕುವುದಿಲ್ಲ; ಆದರೆ ಮೋಸ! ಅದೂ ನಾನಾರ ಮೇಲೆ ವಿಶ್ವಾಸವಿಟ್ಟಿರುವೆನೋ, ಅವರೇ ಮೋಸ ಮಾಡಿದರೆ. ಗಟ್ಟಿಯೆಂದು ನಂಬಿ ನಿಂತ ಕಲ್ಲೇ ನೀರಲ್ಲಿ ಮುಣುಗಿದರೆ ಆಗ್ಗೆ ನಾನೇನು ಮಾಡಬೇಕು? ಛೆ! ಬಹು ಕಠಿಣವಾದ ಸಮಸ್ಯ . ....' ಇತ್ಯಾದಿಯಾಗಿ ವಿಚಾರಕ್ಕೊಳಗಾದನು. ಒಡನೆಯೇ ಅಲ್ಲಲ್ಲಿ ಗುಪ್ತಚಾರರನ್ನಿಟ್ಟು ಅವರ ಮುಖಾಂತರ ಸಂಗತಿ ತಿಳಿಯಲೆತ್ನಿಸಿದನು. ಒಂದೊಂದು ಸಲ ಏನೊಂದು ಸಂದಿಗ್ಧ ಸುದ್ದಿ ಕಿವಿಗೆ ಬಿದ್ದರೆ, ಅಷ್ಟರಿಂದಲೇ ದೊಡ್ಡ ಮಂದಿರಗಳನ್ನು ರಚಿಸಿ ಮೋಸವಾಗುವುದೇ ದಿಟವೆಂದು ನಂಬಿಬಿಟ್ಟನು.

ಸಂಶಯವು ಬಲು ಕೆಟ್ಟದ್ದು. ಇನ್ನಾವ ಯೋಚನೆಗಳಿಗೆ, ವಿಚಾರಗಳಿಗೆ ಮನಸ್ಸಿನಲ್ಲಿ ಪ್ರವೇಶವಿರದ ಕಾಲಾವಧಿಯಲ್ಲಿ ಅದು ಹೇಗೆ ಬೆಳೆಯಲನುವಾಗುತ್ತದೆ? ಆದರೆ ಮನೋಭೂಮಿಕೆಯಲ್ಲಿ ಸಂಶಯ ಬೀಜಕ್ಕೆ ಅದೆಂತಹ ಬಲಕಾರಿಯಾದ ಗೊಬ್ಬರ ಸಿಕ್ಕುತ್ತಿದೆಯೋ, ಅದು ಅಲ್ಪಾವಕಾಶದಲ್ಲಿಯೇ ಮೊಳೆತು, ಬೆಳೆದು ಫಲಿಸುತ್ತದೆ. ಅಂತೆಯೇ ಪರಮಾತ್ಮ 'ಸಂಶಯಾತ್ಮಾ ವಿನಶ್ಯತಿ' ಎಂದಿರಬೇಕು

ಗಜಪತಿ ಸಂಶಯದಿಂದ ಪೂರಿತನಾದನು. ತನ್ನಷ್ಟಕ್ಕೆ ಈ ವಿಷಯವನ್ನಿರಿಸಿಕೊಂಡರೆ ಒಳಿತಲ್ಲವೆಂದು ತಿಳಿದು ತನ್ನ ಮಂತ್ರಿಗೂ ತಿಳಿಸಿದನು.

'ಮಹಾರಾಜ, ತಮ್ಮ ಈ ಸಂಶಯಕ್ಕೆ ಆಧಾರಗಳಿರುತ್ತವೆಯೋ?'

'ನಾನೂ ಅದೇ ಉದ್ಯೋಗದಲ್ಲಿರುವೆನು.'

'ಹಾಗಾದರೆ ಈ ಸಂದೇಹ ಬಂದುದಾದರೂ ಹೇಗೆ?'

'ಅವರ ಶಿಬಿರದಲ್ಲಿ ನರಪತಿಯ ಗುಣಗಾನ ನಡೆದಿರುತ್ತದೆಂಬ ವಾರ್ತೆ ಆಗಾಗ್ಗೆ ನನಗೆ ಬರುತ್ತದಲ್ಲದೆ, ಈ ಯುದ್ಧದಲ್ಲಿ ನರಪತಿ ಗೆಲ್ಲುವುದೇ ನಿಶ್ಚಯವಾದುದರಿಂದ, ಯುದ್ಧಮಾಡುವುದು ತೀರ ಅಯೋಗ್ಯವೆಂದೂ ಅವರು ಆಗಾಗ್ಗೆ ಉದ್ಗಾರ ತೆಗೆಯುತ್ತಲಿರುವರಂತೆ.'

'ಸಾಧಾರವಾಗಿ ಸಿಕ್ಕದ ಹೊರತು ನಾವು ಯಾವ ನಿರ್ಣಯಕ್ಕೂ ಕೈಗೂಡಲು ಬರಲಿಕ್ಕಿಲ್ಲ.'

'ಅಹುದು. ನಾನಾದರೂ ಅದನ್ನೇ ಯೋಚಿಸುತ್ತಲಿರುವೆನು. ಒಂದು ವೇಳೆ ನಮ್ಮ ಸಂಶಯವು ದಿಟವಾಗಿ ಪರಿಣಮಿಸಿದಲ್ಲಿ, ನಾವು ಯಾವ ಮಾರ್ಗ ಸ್ವೀಕರಿಸತಕ್ಕುದು? ಸಂಶಯ ಬಂದ ಮೇಲೆ ನಾವು ದಕ್ಷರಾಗಿರತಕ್ಕುದು ತೀರ ಯೋಗ್ಯವಾದುದು; ಆದುದರಿಂದ ನಾವು ಈಗಲೇ ಯೋಚನೆ ಮಾಡಿರುವುದೊಳಿತಲ್ಲವೆ?'

'ಮಹಾರಾಜರ ಯೋಚನೆಯೇನಿರುವದು?

'ಉಳಿದ ದಾರಿಗಳೆಂದರೆ ಎರಡೇ. ಊರು ಕೆಲಸಗಳನ್ನು ತೊರೆದು ಕಾಡಿಗೆ ಹೊರಟು ಹೋಗಬೇಕು, ಇಲ್ಲವೆ ಸಂಧಿ ಸಾಧಿಸಿಕೊಳ್ಳಬೇಕು. ಇದರಲ್ಲಿ ನಿಮಗೆ ಯಾವುದು ಒಳಿತೆಂದು ತೋರುತ್ತದೆ?'

'ಈಗಲೇ ನಾನಾವ ಸಂಗತಿಯನ್ನೂ ನಿಶ್ಚಯಿಸುವದಿಲ್ಲವೆಂಬವೇನೋ ನಿಜವೇ. ಆದರೂ ಮಹಾರಾಜರ ಸಂದೇಹ ಸತ್ಯವಾಗಿಯೇ ಪರಿಣಮಿಸಿದಲ್ಲಿ, ನಮ್ಮ ಯಾವದೊಂದು ದಾರಿಯನ್ನು ಅರಿಯಲೇಬೇಕಾಗಿರುತ್ತದೆ.'

'ಅಹುದು, ನಾನಾದರೂ ಅದನ್ನೇ ಕೇಳುತ್ತೇನೆ.'

'ಮಹಾರಾಜರಿಗೆ ನಾನೊಂದು ಸಂಗತಿಯ ಬಗ್ಗೆ ಸೂಚಿಸಬಹುದೆ?'

'ಅದೇನು?

'ಒಂದು ವೇಳೆ ಅಂತಹ ದುರ್ಧರ ಸಮಯ ಪ್ರಾಪ್ತವಾದರೆ, ನಾವು ಸಂಧಿಗಾಗಿ ಏಕೆ ಯತ್ನಿಸಕೂಡದು? ನರಪತಿಯೂ ಸದ್ಗುಣಿಯಿರುವನು. ನಮ್ಮ ಮಾನ-ಮನ್ನಣೆಗಳಿಗೆ ಭಂಗಬಾರದಂತಿದ್ದರೆ ನಾವು ಸಂಧಿಯನ್ನೇಕೆ ಕೈಕೊಳ್ಳಕೂಡದು?'

'ನಮ್ಮ ನಾಡಿಗೆ ಕುಂದುಂಟಾಗದಂತೆ ಸಂಧಿಮಾಡಿಕೊಳ್ಳಲು ನರಪತಿ ಸಮ್ಮತಿಸಬಹುದೆ?'

'ಯತ್ನಿಸಿ ನೋಡಬೇಕು, ಸಮ್ಮತಿಸಿದರೂ ಸಮ್ಮತಿಸಬಹುದು; ಆದರೆ ಇದೆಲ್ಲವೂ ತೀರಾ ಅನವಶ್ಯಕವೆಂದು ತೋರುತ್ತದೆ; ಏಕೆಂದರೆ ನಾವೀಗ ಕನ್ನಡಿಗರಿಗಿಂತ ಬಲದಲ್ಲಿ ಹಿಂದಿಲ್ಲ; ಮತ್ತು ನಮ್ಮ ಸಾಮಂತರಿಂದ ಕಪಟಕ್ಕೆ ಅವಕಾಶವೂ ಇಲ್ಲ.'

'ಹಾಗಾದರೆ ಒಳಿತೇ ಆಯಿತು ಯುದ್ಧ ಮಾಡಿ ಉಳಿದರೆ, ಆ ಮೇಲೆ ಉಳಿದ ಯೋಚನೆ ಮಾಡಲು ಬಂದೇ ಬರುತ್ತವೆ; ಆದರೆ ಅದಕ್ಕೆ ಮೊದಲು ಈ ಭಯಂಕರ ಮೋಸವಾದರೆ ನಾವು ಜಾಗರೂಕರಾಗಿರಲೇಬೇಕಲ್ಲವೆ?'

'ಅಹುದು ಮಹಾರಾಜ, ಮೊದಲು ಈ ಮೋಸವನ್ನು ಬಯಲಿಗೆಳೆಯುಲೆತ್ನಿಸೋಣ'

ಜಗನ್ಮೋಹಿನಿ ನೆಟ್ಟ ಬೀಜವು ವೃಕ್ಷವಾಯಿತು. ಆಗಲೇ ಮೊಗ್ಗೆ ಹೂಗಳಾಗುವ ಸಮಯವೂ ಬಂದಿತು. ಸುಮಧುರ ಫಲಗಳನ್ನು ಬಿಡಬೇಕೆಂದು ಜಗನ್ಮೋಹಿನಿ ಬಯಸುತ್ತಿದ್ದಳು. ಆಕೆಯ ಕಣ್ಣು, ಮನ, ಹೃದಯಗಳೆಲ್ಲವೂ ಕನ್ನಡ ಶಿಬಿರದತ್ತವೇ ಇದ್ದುವು. ಅಲ್ಲಿ ಏನು ನಡೆದಿರಬಹುದೆಂದು ಆಕೆ ಬಹಳವಾಗಿ ಊಹಿಸುತ್ತಲಿದ್ದಳು.

ಅದೇ ಸಮಯದಲ್ಲಿ ಕನ್ನಡದರಸಿಗೆ ಮೇಲೆ ಮೇಲೆ ಪೊಟ್ಟನೂರಿನ ಸಂಗತಿಗಳು ಗುಪ್ತಚಾರರ ಮುಖಾಂತರವಾಗಿ ತಿಳಿಯುತ್ತಲಿದ್ದುವು. ಮುಂದೆ ಕೈಕೊಳ್ಳಲಿರುವ ಯೋಜನೆಯ ವಿಚಾರಣೆಗಾಗಿ ಮೂವರೂ ಕಲೆತಿದ್ದರು.

ಅಪ್ಪಾಜಿ:—ಮಹಾಪ್ರಭು, ಗಜಪತಿಯು ಸಿದ್ಧತೆ ಭರದಿಂದ ನಡೆದಿದೆಯೆಂದು ಆಗಾಗ್ಗೆ ವಾರ್ತೆ ಬರುತ್ತಲಿದೆ.

ರಾಮಲಿಂಗ,—ಮಂತ್ರಿಗಳೇ, ಆ ಹದಿನಾರು ಮಹಾಪಾತ್ರರ ಸೈನ್ಯವೆಲ್ಲವೂ ಒಟ್ಟುಗೂಡಿದರೆ ನಮ್ಮ ಸೈನ್ಯಕ್ಕೆ ಸರಿಯಾಗಬಹುದೆ?

ಅಪ್ಪಾಜಿ:—ಬಹುಶಃ ಸರಿಯಾಗಬಹುದೆಂದು ತಿಳಿಯುತ್ತದೆ.

ನರಪತಿ:—ಆದರೇನು, ಸೋಲಿನ ಭೀತಿ ಬೇರೆಯಿಲ್ಲವಲ್ಲ?

ರಾಮಲಿಂಗ:—ಮಹಾಪ್ರಭುಗಳೇ, ಸೋಲೆಂಬ ನೊಲ್ಲು ಕೂಡ ಕನ್ನಡಿಗರತ್ತ ಸುಳಿಯುವಂತಿಲ್ಲ.

ನರಪತಿ:—ಒಳ್ಳೇದು. ಈಗೇನು ಮಾಡಬೇಕೆನ್ನುವಿರಿ? ಬೇರೆಏನಾದರೂ ಸಾಧಿಸುವದೇನೆಂದು ನೋಡುವಿರಾ?

ಅಪ್ಪಾಜಿ:—ಪ್ರಭುಗಳೇ, ಈಗಲೆ ನಾವು ನಿರ್ಧರಕ್ಕೆ ಳಿಯದೆ, ಇನ್ನೊಂದು ಸಲ ಸೂಕ್ಷ್ಮವಾಗಿ ಪೊಟ್ಟನೂರಿನ ಪರಿಸ್ಥಿತಿಯನ್ನವಲೋಕಿಸಿ ನೋಡುವುದೊಳಿತೆಂದು ನನ್ನ ವಿಚಾರವಿದೆ.

ನರಪತಿ:—ಹಾಗೇ ಮಾಡಬಹುದು; ಆದರೆ ವಿಲಂಬವು ಉಪಯೋಗವಿಲ್ಲ. ಏಕೆಂದರೆ, ಗಜಪತಿ ಪೂರ್ಣ ಸಿದ್ಧತೆಯಿಂದಿರುವನು; ಮತ್ತು ಬೇಗನೆ ಯುದ್ಧದಾಹ್ವಾನವು ಬರುವ ಲಕ್ಷಣ ತೋರುತ್ತದೆ. ಆದುದರಿಂದ ಬೇಗನೆ ನಮ್ಮ ನಿರ್ಧರಕ್ಕೆ ತಲುಪುವುದೊಳಿತು; ಮತ್ತು ತೀವ್ರವೇ ನಮ್ಮ ಮುಂದಿನ ಯೋಜನೆಗೆ ತೊಡಗಬೇಕಾಗುತ್ತದೆ.



## ೧೨ ಭೀತಿಯ ಭೂತ.

ಗಜಪತಿಯು ಸಂಶಯದಿಂದ ಆವೃತನಾಗಿ ಹೋಗಿದ್ದನು. ತನ್ನ ಮಹಾಪ್ರತಾಪರೇ ತನಗೆ ಮೋಸಮಾಡುವರೆಂಬ ಭೀತಿ ಅವನಲ್ಲಿ ನೆಟ್ಟು ಹೋಗಿದ್ದಿತು. ಅವನಿಗೆ ಯುದ್ಧದ ಯೋಚನೆ ಮರೆತು ಈ ಮೋಸದ ವಿಚಾರಗಳೇ ತುಂಬಿ ಹೋಗಿದ್ದುವು, ಅದರ ನಿಜ ಸಂಗತಿಯನ್ನು ಹೇಗೆ ಬಯಲಿಗೆಳೆಯಬೇಕು? ಮೋಸವು ನಿಶ್ಚಿತವೇ ಆದುದಾದರೆ ಮುಂದೆ ಯಾವ ರೀತಿಯಾಗಿ ವ್ಯವಹರಿಸಬೇಕು? ಎಂಬ ವಿಚಾರಗಲ್ಲಿಯೇ ಮಗ್ನನಾಗಿದ್ದನು. ಹಗಲು, ಇರುಳು, ಮುಂಜಾವು, ಸಂಜೆ ಅದೊಂದೇ ಯೋಚನೆ, ಅದೊಂದೇ ಉದ್ಯೋಗ ಅವನದಾಗಿದ್ದಿತು. ಮಹಾಪ್ರತಾಪರಲ್ಲಿ ಕೆಲಸ ಮಾಡಲಿದ್ದ ದಾಸಿಯರನ್ನು ಮತ್ತೆ ಮತ್ತೆ ಕರೆದು ಕೇಳುವನು. ಬಹಳ ಸಲ ನಿರಾಶೆಯೇ ಆಗುವುದು. ಒಂದೊಂದು ಸಲ ಏನೊಂದು ಸಂದಿಗ್ಧ ವಿಷಯ ತಿಳಿದರೆ ಅಷ್ಟರಿಂದಲೇ ಭವ್ಯವಾದ ಕಟ್ಟಡವನ್ನೇ ಕಟ್ಟಿಬಿಡುವನು. ಇವರಲ್ಲವೇ ಗುಪ್ತಚಾರರು ಬೇರೆ ಇದ್ದೇಇದ್ದರು. ಅವರು ಮಹಾಪ್ರತಾಪರ ನಿತ್ಯ ನಡಾವಳಿಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಆಗಾಗ್ಗೆ ಬಂದು ವಾರ್ತೆಯನ್ನರುಹುತ್ತಲಿದ್ದರು. ಅಷ್ಟು ಬಲಕಾರಿಯಾದ ಆಧಾರಗಳೇನೂ ಸಿಕ್ಕಿರಲಿಲ್ಲ, ಆದರೆ ಅಷ್ಟರಿಂದ ಅವರು ಕಪಟಿಗಳಲ್ಲವೆಂದು ಅವನೇನೂ ಊಹಿಸಲಿಲ್ಲ. ಸಂಶಯಿತಮನವು ಪ್ರತಿಯೊಂದರಲ್ಲಿಯೂ ಸಂದೇಹವಹಿಸುತ್ತಲೇ ಇರುತ್ತದೆ ಅವರ ಕಾಪಟ್ಯ ತಿಳಿಯದಿದ್ದುದು ತನ್ನ ಚಾರರಲ್ಲಿ ಚಾತುರ್ಯವಿಲ್ಲದಿರುವುದರ ಇಲ್ಲವೆ ಮಹಾಪ್ರತಾಪರು ಬಹಳ ದಕ್ಷರಾಗಿರುವುದರ ಕಾರಣವಿರಬೇಕು, ಎಂದು ತರ್ಕಿಸಿ, ಇನ್ನೂ ಹೆಚ್ಚು ಚಿಕಿತ್ಸಕ ಬುದ್ಧಿಯಿಂದ ವಿಚಾರಿಸಹತ್ತಿದನು.

ತಂದೆಯ ಈ ಮನೋವಾರ್ತೆ ಜಗನ್ಮೋಹಿನಿಗೆ ತಿಳಿಯದಿರಲಿಲ್ಲ. ಬೀಜ ನೆಟ್ಟವಳೇ ಅವಳು ತನ್ನ ಬೀಜ ವೃಕ್ಷವಾದುದು ಆಕೆಗೆ ತಿಳಿಯದಿರುವುದೆ?

'ಶಶಿಲೇಖೆ, ತಂದೆಯವರು ಹೇಗೆ ಸಂಶಯಕ್ಕೊಳಗಾಗಿರುವರು ನೋಡಿದೆಯಾ?'

'ರಾಜಪುತ್ರೀ, ವಿಚಿತ್ರ. ಪಾಪ! ಯಾವ ಸುದ್ದಿಯೂ ಇಲ್ಲದೇ ತಮ್ಮ ನಿತ್ಯದ ಕಾರ್ಯಕ್ರಮದಲ್ಲಿದ್ದುಕೊಂಡು ಸಮಯ ನಿರೀಕ್ಷಣೆ ಮಾಡುತ್ತಿರುವ ಅಂತಹ ಸಿಂಹಾಸನೈಕನಿಷ್ಠರಾದ ಮಹಾಪ್ರತಾಪರಲ್ಲಿ ಪ್ರಬಲವಾದ ಸಂಶಯ ಮಾಳವರಾಗಿರುವರು.'

'ಸಂಶಯದ ಮಹಾತ್ಮ್ಯೆ ಅಗಾಧವಾದುದು.'

'ಅಲ್ಲದೆ ಇನ್ನೇನು? ಈ ನಾಲ್ಕು ದಿವಸಗಳಲ್ಲಿ ತಂದೆಯವರು ಸಂಶಯದ ಮೂರ್ತಿಯೇ ಆಗಿರುವರು. ಮೋಸವಾಗುವುದೆಂಬ ಆ ಒಂದು ಯೋಚನೆಯಿಂದಾವೃತರಾಗಿರುವ ಮೂಲಕ, ಅತೀವ ಚಿಕಿತ್ಸೆಯಿಂದ ನೋ-ಡುತ್ತಲಿರುವರು ಮುಂದೆ ಇದರ ಪರಿಣಾಮವೇನಾಗಬಹುದು?'

'ಅದನ್ನರಿಯುವುದು ಹೇಗೆ?'

ಹೀಗೆ ಗಜಪತಿಯು ಸಂದೇಹದಿಂದಾವೃತನಾಗಿ ನಿತ್ಯವೂ ಹೊಸ ಶೋಧ ಮಾಡುವುದರಲ್ಲಿ ಮಗ್ನನಾಗಿ ದಿನಗಳೆಯುತ್ತಲಿದ್ದನು. ಯುದ್ಧಕ್ಕೆ ನಿಶ್ಚಿತವಾದ ಅವಧಿ ಇನ್ನು ನಾಲ್ಕೇ ದಿನ ಉಳಿದಿದ್ದಿತು. ಆ ದಿವಸ ಬೆಳಗಿನ ಸಮಯ. ಅರುಣೋದಯದ ಕಾಲವಾಗಿರಬಹುದು.

ಬೆಳಕು-ಕತ್ತಲೆಗಳ ನಡುವಿನ ಆ ಕಾಲ ಅತೀವ ರಮಣೀಯವಾದುದು. ಸಕಲ ಪ್ರಾಣಿವರ್ಗವು ತಮ್ಮ ದಿನದ ದುಡಿಮೆಯಿಂದ ದಣಿದು ಮಲಗಿದವರು, ಇರುಳಲ್ಲಿ ದೊರೆತ ವಿಶ್ರಾಂತಿಯಿಂದ ಉತ್ತೇಜಿತರಾಗಿ ಏಳುತ್ತಾರೆ. ನಿಸರ್ಗ ದೇವತೆ ಅದೇ ಸ್ನಾನವಮಾಡಿ ವಸ್ತ್ರಾಭರಣಗಳಂದ ಭೂಷಿತಳಾಗಿ ಪರಮಾತ್ಮನ ದರುಶನಕ್ಕೆ ಹೊರಟ ಸುಕುಮಾರ ತರುಣಿಯಂತೆ ಶೋಭಿಸುತ್ತಾಳೆ. ಜಗಜೀವನದ ಜ್ಯೋತಿಯೇ ಆದ ಭಗವಾನ್ ಭಾಸ್ಕರನ ಶುಭಾಗಮನ ಸೂಚಿಸುವ ಅರುಣನಾಗಮನವು ಅತೀವ ಆಂದಕರವಾಗಿರುತ್ತದೆ ಅರುಣದೇವನ ನಸುಗೆಂಪಿನ ಬೆಳಕು ಭೂದೇವಿಗೆ ರನ್ನದೊಡವೆಗಳನ್ನು ನೀಡುವಂತೆ ತೋರುತ್ತಲಿದೆ. ಇದಕ್ಕಿಂತಲೂ ಆನಂದಕರವಾದ ನೋಟವೆಂದರೆ, ಉಷಾಗಮನ. ಉಷಾಗಮನ ಎಂದೊಡನೆಯೆ ಸಕಲ ಮಾನವ ಪ್ರಾಣಿಯ ಕಣ್ಣಿಗೆ ಉತ್ಕೃಷ್ಟತರವಾದ ಆ ಕಮನೀಯ ನೋಟ ಕಟ್ಟಿ, ಮನದಲ್ಲಿ ಮೂಡಿ, ಹೃದಯದಲ್ಲಿ ನೆಟ್ಟುಹೋಗದಿರದು. ಉಷಃಕಾಲವೆಂದರೇನೇ ಅಂತಹ ರಮಣೀಯ ಸಮಯ. ಋಗ್ವೇದ ಕಾಲದ ಋಷಿಗಳು ಇಂತಹ ಶಾಂತ-ಪ್ರಶಾಂತ ಉಷಃಕಾಲವನ್ನು ಬಹಳವಾಗಿ ಬಣ್ಣಿಸಿರುವರ . 'ಋಗ್ವೇದದ ಅತ್ಯಂತ ಸುಂದರತಮ ಭಾಗವೆಂದರೆ, ಉಷಾದೇವಿಯ ವರ್ಣನಪರ ಪದ್ಯಗಳೇ.' ಎಂದು ಅದನ್ನು ಅಭ್ಯಾಸಿಸಿದವರೆಲ್ಲರಿಗೂ ತಿಳಿಯದಿರದು. ಜಗತ್ತಿನ ಅಜ್ಞಾನಾಂಧಃಕಾರವನ್ನು ಹೊಡೆದೋಡಿಸಿ ಹೃದಯ-ಹೃದಯಗಳಲ್ಲಿ ಜ್ಞಾನಕಿರಣಗಳನ್ನು ನೀಡಿ, ಕರ್ತವ್ಯ ಮಾರ್ಗ ಕಾಣುವಂತೆ ಮಾಡುವ ಉಷಾಗಮನವು ಹಿತಕರವಾಗದಿರಬಹುದೆ? ಅಂದಿನ ಋಷಿಗಳು ಉಷಃಕಾಲದ ಸಮಯಕ್ಕೆ ಎದ್ದು ತಮ್ಮ ನಿತ್ಯಕರ್ಮಗಳಲ್ಲಿ ನಿರತರಾಗುತ್ತಲಿದ್ದುದರಿಂದ, ಅವರಿಗೆ ಅದು

ಚೆನ್ನಾಗಿ ತಿಳಿದು ಬರುವುದು ಸ್ವಾಭಾವಿಕವಿದೆ. ಅವರು ತೆರೆದ ಕಣ್ಣುಗಳಿಂದ ಉಷೆಯನ್ನು ನೋಡುತ್ತಲಿದ್ದರು. ವಿಶ್ರಾಂತಿಗೆಂದು ಮಲಗಿದ ಸಕಲ ಚೇತನಾಚೇತನ ಸೃಷ್ಟಿಯನ್ನೆಚ್ಚರಿಸಲು ಸ್ವರ್ಗದಿಂದೈತರುವ ಶ್ವೇತವಸನಾಲಂಕೃತ ಸುಂದರ ಸುಕುಮಾರ ಸ್ವರ್ಗೀಯಾಕೃತಿಯನ್ನು, ತನ್ನಾ ಶ್ವೇತವಸನದಿಂದ ಸಕಲ ವಿಶ್ವವನ್ನೇ ಬೆಳಗುವ ದಿವ್ಯಾಂಗನೆಯನ್ನು ನಿತ್ಯವೂ ನೋಡಿ ನೋಡಿ ಆನಂದ ಹೊಂದುತ್ತಲಿದ್ದರು ಅವರಾ ಆನಂದಾವಸ್ಥೆಯಲ್ಲಿ ಹೊರ ಹೂಮ್ಮಿದ ಬಣ್ಣಗಳು ಜಗತ್ತಿನಲ್ಲಿ ಆದಿ ಗ್ರಂಥವೆಂದು ಹೆಮ್ಮೆಪಡಬಹುದಾದ ಋಗ್ವೇದವನ್ನೇ ಬೆಳಗುತ್ತಲಿವೆ.

ಇಂತಹ ಸಮಯದಲ್ಲಿ ಒಬ್ಬ ಗುಪ್ತಚಾರ ಗಜಪತಿಯ ಬಳಿಗೆ ಬಂದನು. ಗಜಪತಿಗೆ ಮೋಸದ ಭೀತಿಯಿಂದ ನಿದ್ದೆಯೇ ಬರಲಿಲ್ಲ. ನಸುಕಿನಲ್ಲಿಯೇ ಗುಪ್ತಚಾರ ಬಂದುದರಿಂದ ಅಶುಭವೇನೋ ನಡೆದಿರಬೇಕೆಂದು ಊಹಿಸಿದನು. ಅವನು ಆತುರತೆಯಿಂದ ಬಂದ ಕಾರಣವನ್ನು ವಿಚಾರಿಸಿದನು.

'ಮಹಾರಾಜ, ನಮ್ಮ ನಗರಕ್ಕೆ ಸಮೀಪದಲ್ಲಿ ಹತ್ತೆಂಟು ಜನರು ಒಂದು ದೊಡ್ಡ ಪೆಟ್ಟಿಗೆ ಹೊತ್ತು ತರುತ್ತಲಿರುವರು.' 'ಅವರಾರು?

'ಅವರು ತಮ್ಮ ಗುರುತು-ಪರಿಚಯವನ್ನೇನೂ ಕೊಡುವುದಿಲ್ಲ.'

'ಆಂ, ಅಂತಹರು ಅವರಾರು? ಯಾರ ಬಳಿಗೆ ಹೋಗುತ್ತಲಿರುವರು?'

'ನಾನು ಹೋಗಿ ಕೇಳಿದೆನು. ಮೊದಲು ಅವರೇನೂ ಹೇಳಲಿಲ್ಲ. ಆ ಮೇಲೆ ಮಾತ್ರ ಅವರು ನಿಜ ಸಂಗತಿಯನ್ನು ಹೇಳಿದರು '

'ಏನೆಂದು ಹೇಳಿದರು? ನಮ್ಮ ಮಹಾಪ್ರತಾಪರ ಬಳಿಗೆ ಬರುತ್ತಲಿದ್ದರೇನು?'

'ಅಹುದು ಮಹಾರಾಜ. ಮಹಾಪ್ರತಾಪ ಬಲರುದ್ರದೇವರ ಬಳಿಗೆ ಹೋಗುತ್ತಲಿರುವೆವು.' ಎಂದು ನಾನು ಮಹಾರಾಜರ ಹೆಸರಿನಲ್ಲಿ ಅವರನ್ನು ಕೇಳಿದಾಗ್ಗೆ ನಿರುಪಾಯರಾಗಿ ಹೇಳಿದರು.

'ಆ ಪೆಟ್ಟಿಗೆಯಲ್ಲೇನಿದ್ದಿತು?'

'ಅದನ್ನು ಹೇಗೆ ತಿಳಿಯಬೇಕು?

'ಯಾಕೆ, ನೋಡಬೇಕಿದಿದ್ದಿತು.'

'ಛೆ! ಮಹಾರಾಜ ನಾನೆಷ್ಟು ಭಯ ಪಡಿಸಿದರೂ ತೋರಿಸಲಿಲ್ಲ. 'ಇದು ಬಹಳ ಗುಪ್ತವಾದುದು. ಬಲರುದ್ರದೇವರನ್ನುಳಿದು ಇನ್ನಾರೂ ನೋಡುವಂತಿಲ್ಲ.' ಎಂದು ಸ್ಪಷ್ಟವಾಗಿ ಹೇಳಿದರು. ಅವರು ಹತ್ತು-ಹನ್ನೆರಡು ಜನರು. ನಾನು ಒಬ್ಬನೆ ಇದ್ದುದರಿಂದ ಸುಮ್ಮನೆ ಮರಳಬೇಕಾಯಿತು. ಅದಷ್ಟು

ಬೇಗನೆ ಧಾವಿಸಿ ಬಂದು ತಿಳಿಸಿರುತ್ತೇನೆ. ಮುಂದೆ ಮಹಾರಾಜರ ಚಿತ್ತ.'

'ಈಗ ಎಲ್ಲಿರುವರು?'

'ನಮ್ಮ ಕೋಟೆ ಸಮೀಪಿಸುತ್ತಲಿರಬಹುದು.'

'ಬೇಗ ಹೋಗಿ ರಣಮಲ್ಲನನ್ನು ಕರೆ.'

ಅಲ್ಪಾವಕಾಶದಲ್ಲಿಯೇ ರಣಮಲ್ಲನು ಬಂದು ವಂದಿಸಿದನು.

'ರಣಮಲ್ಲ, ಬೇಗನೆ ಇಪ್ಪತ್ತೈದು ಜನ ಸೈನಿಕರನ್ನು ಕರೆದುಕೊಂಡು ನನ್ನ ಸಂಗಡ ನಡೆ' ಎಂದು ಹೇಳಲು, ರಣಮಲ್ಲನು ಹೊರಟನು.

ಗಜಪತಿ ಗುಪ್ತಚಾರನನ್ನೊಡಗೊಂಡು ಹೊರಟನು. ವಿಧವಿಧದ ವಿಚಾರಗಳು ಅವನ ತಲೆಯಲ್ಲಿ ತಾಕಲಾಡುತ್ತಲಿದ್ದುವು. ತನ್ನ ವಿಚಾರ ಸಂದಣಿಯಲ್ಲಿ ಸಿಲುಕಿದ ಅವನು, ಕೋಟೆಯನ್ನು ಹೇಗೋ ದಾಟಿ ಬಹಿರ್ಭಾಗಕ್ಕೆ ಬಂದನು.

'ಮಹಾರಾಜ, ಅದೋ ನೋಡಿ, ಅಲ್ಲಿ ಬರುತ್ತಲಿರುವರು' ಎಂದಂದು ಗುಪ್ತಚಾರ ಗಜಪತಿಯ ಸಮಾಧಿ ಭಂಗ ಮಾಡಿದನು.

ಗುಪ್ತಚಾರ ನಿರ್ದೇಶಿಸಿದ ದಿಸೆಯತ್ತ ಗಜಪತಿ ನೋಡಿದನು. ಆಗಲೆ ಬೆಳಗಾದ ಮೂಲಕ ಬೆಳಕಿನಲ್ಲಿ ಎಲ್ಲವೂ ಕಾಣುವಂತಿದ್ದಿತು. ಹತ್ತೆಂಟು ಜನ ಒಂದು ಪೆಟ್ಟಿಗೆಯನ್ನು ಹೊತ್ತು ತರುತ್ತಲಿದ್ದರು ಹಿಂದಿನಿಂದ ಹಲವರು ಸೈನಿಕರಿದ್ದರು. ಪೆಟ್ಟಿಗೆ ಭಾರವಾಗಿದ್ದಂತೆ ತೋರಿತು. ಗಜಪತಿ ಬೇಗನೆ ಅವರ ಬಳಿಗೆ ಹೋಗಿ, 'ತಡೆಯಿರಿ' ಎಂದು ಆಜ್ಞಾಪಿಸಿದನು.

ಪೆಟ್ಟಿಗೆಯನ್ನು ಹೊತ್ತವರು ನಿಂತರು. ಅವರು ಗಜಪತಿಯತ್ತ ಕೊಂಚ ಭೀತನೋಟವನ್ನು ಬೀರುತ್ತಲಿದ್ದರು. ಅವರಾ ಭೀತಿಯನ್ನರಿತ ಗಜಪತಿಗೆ ತನ್ನ ಸಂದೇಹವೇ ದೃಢವಾದಂತೆ ತಿಳಿಯಿತು ಅವನು ಸಂಶಯಿತ ಸ್ವರದಿಂದ 'ಈ ಪೆಟ್ಟಿಗೆಯಲ್ಲಿರುವುದೇನು?' ಎಂದು ಕೇಳಿದನು.

ಅವರಲ್ಲಾರೂ ಉತ್ತರವೀಯಲಿಲ್ಲ. ಎಲ್ಲರೂ ಮೂಕರಂತೆ ನಿಂತರು.

'ಮಹಾಪ್ರತಾಪಿ ಪ್ರತಾಪರುದ್ರದೇವರು-ಕಲಿಂಗನಾಡಿನ ಮಹಾರಾಜರು ಬಂದು ನಿಂತುದು ಕಾಣುತ್ತಿಚೆಯಷ್ಟೆ?' ಎಂದು ರಣಮಲ್ಲ ಅಬ್ಬರಿಸಿದನು!

ಅವರಲ್ಲಿ ಒಬ್ಬನು—ಬಹುಶಃ ಮುಖ್ಯಸ್ಥನಿರಬಹುದಾಗಿದ್ದಿತು.—ವಂದಿಸಿ, ಮತ್ತೆ ಸುಮ್ಮನೆ ನಿಂತುಬಿಟ್ಟನು.

'ನೀವು ಯಾರು? ಎಲ್ಲಿಂದ ಬಂದಿರುವಿರಿ?' ಎಂದು ಗಜಪತಿ ಕ್ರೋಧದಿಂದ ಮತ್ತೆ ಪ್ರಶ್ನೆಮಾಡಿದನು.

ಅವರು ಏನೂ ಉತ್ತರ ಕೊಡಲಿಲ್ಲ.

ಗಜಪತಿ ರೊಚ್ಚಿಗೆದ್ದನು. ಅವನು ಬಹಳ ಕೋಪದಿಂದ:—'ನೀಚರಿರಾ! ಮಾತುಗಳೇಕೆ ಆಡುವದಿಲ್ಲ? ಒಳ್ಳೇ ಮಾತುಗಳಿಂದ ಹೇಳುವಿರೊ, ಇಲ್ಲವೆ .. ...' ಎಂದು ಗದ್ದರಿಸಿದನು. ಆದರೂ ಸುಮ್ಮನೆ.

ಗಜಪತಿ ಸಿಟ್ಟಿನಿಂದ ಹುಚ್ಚನೇ ಆದನು. ಅವನು ಕಂಪಿಸುವ ಸ್ವರದಿಂದ.—'ರಣಮಲ್ಲ, ಈ ದುಷ್ಟರನ್ನೆಲ್ಲ ಬಂಧಿಸು. ಈ ಪೆಟ್ಟಿಗೆಯನ್ನು ಕೈವಶ ಮಾಡಿಕೊಳ್ಳು' ಎಂದು ಅಪ್ಪಣೆಯಿತ್ತನು.

ರಣಮಲ್ಲನು ತನ್ನ ಜನರೊಡನೆ ಅವರ ಮೈಮೇಲೆ ಹೋಗಿ, ಬಲುಮೆಯಿಂದ ಅವರ ಶಸ್ತ್ರಗಳನ್ನೆಲ್ಲ ಕಸಿದು ಅವರನ್ನು ಬಂಧಿಸಿದನು. ತನ್ನ ಜನರಿಂದ ಪೆಟ್ಟಿಗೆಯನ್ನು ಹೊರಿಸಿದನು. ಅಲ್ಪಾವಕಾಶದಲ್ಲಿಯೇ ಗಜಪತಿ ತನ್ನ ಮಂದಿರಕ್ಕೆ ಬಂದು ಪೆಟ್ಟಿಗೆಯನ್ನೊಂದು ಗುಪ್ತಸ್ಥಳದಲ್ಲಿರಿಸಿ, ರಣಮಲ್ಲನಿಗೆ ಆ ಎಲ್ಲರನ್ನೂ ಕೈದಿನಲ್ಲಿರಿಸುವಂತೆ ಹೇಳಿ ಕಳುಹಿದನು.

ಅವರೆಲ್ಲರೂ ಹೊರಟು ಹೋಗಲು, ಭದ್ರವಾಗಿ ಕಟ್ಟಲ್ಪಟ್ಟಿದ್ದ ಆ ಪೆಟ್ಟಿಗೆಯನ್ನು ಬಿಚ್ಚಿದನು. ಬಾಗಿಲು ತೆರೆಯುತ್ತಲೆ ಅದ್ಭುತ ತೇಜವೊಂದು ಚಮಕಿಸಿತು. ಒಮ್ಮೆಲೆ ಕೋಲ್ಮಿಂಚು ಹೊಳೆದಂತಾಯಿತು. ಗಜಪತಿ ಅಗಲವಾದ ಕಣ್ಣುಗಳಿಂದ ಇಣುಕಲು, ಪೆಟ್ಟಿಗೆಯಲ್ಲಿ ಮೇಲ್ತರಗತಿಯ ಮುತ್ತುರತ್ನಗಳು ಕಾಣಿಸಿದುವು ಅವುಗಳ ಬೆಲೆಯು ಲಕ್ಷಾವಧಿ ಹೊನ್ನುಗಳಿಗೆ ಮಿಕ್ಕಬಹುದೆಂದು ಅವನು ತರ್ಕಿಸಿದನು. ಅಂತಹ ಬೆಲೆಯುಳ್ಳ ಕೋಶವನ್ನೆಲ್ಲಿ ಒಯ್ಯುತ್ತಲಿರಬಹುದೆಂಬದು ಅವನಿಗೆ ಹೊಳೆಯಲಿಲ್ಲ. ಇನ್ನೂ ನಿರೀಕ್ಷಿಸಲು, ಅಲ್ಲಿಯೇ ಒಂದು ಪತ್ರವಿದ್ದಿತು. ಆ ಪತ್ರವನ್ನು ಕೈಯಲ್ಲಿ ತೆಗೆದುಕೊಂಡು ನೋಡಲು, ಅದರಲ್ಲಿ ಮುಂದಿನಂತೆ ಸಂಗತಿಯಿದ್ದಿತು:—

"ಶ್ರೀಮದ್ರಾಜಮಾನ್ಯ ರಾಜಶ್ರೀ ಮಹಾಪ್ರತಾಪಿ ಬಲರುದ್ರ ದೇವರು, ಕಲಿಂಗ ರಾಜ್ಯದ ಷೋಡಶ ಮಹಾಪಾತ್ರರಲ್ಲಿ ಮುಖ್ಯರಾದ ವೀರವರರಿಗೆ—

ಕರ್ನಾಟಕ ಸಾಮ್ರಾಜ್ಯಾಧೀಶ್ವರ ಶ್ರೀಮತ್ಸಕಲ.......... . ..ನರಪತಿ ಶ್ರೀಕೃಷ್ಣದೇವರಾಯರ ಬಿನ್ನಹವು.

ನಮ್ಮ ನಿಮ್ಮಲ್ಲಿ ಮೊದಲೇ ಒಪ್ಪಿತವಾದಂತೆ ಈಗ ನಿಮಗೆ ಸಲ್ಲತಕ್ಕ ಕಾಣಿಕೆ ಕಳುಹಿರುವೆನು. ಉಳಿದವರಿಂದ ಸ್ವೀಕೃತವಾಗಿ ಪ್ರತ್ಯುತ್ತರ ಬಂದಿವೆ. ನೀವಾದರೂ ಇದನ್ನು ಸ್ವೀಕರಿಸಿ, ಮೊದಲೇ ಸಿದ್ಧವಾದ ಯೋಜನೆಯಂತೆ ಯುದ್ಧಾರಂಭದಲ್ಲಿ ನಮ್ಮ ಪಕ್ಷಕ್ಕೆ ಸೇರಬೇಕು. ತಮ್ಮ,

ನರಪತಿ."

ಮುಂತಾಗಿದ್ದಿತು. ಗಜಪತಿ ಅದನ್ನು ನೋಡಿ ಗಾಬರಿಯಾದನು. ತಾನೆಣಿ ಸುತ್ತಲಿದ್ದ ಸಂಶಯು ಸತ್ಯವಾಗಲು, ಮುಂದಿನ ಯೋಚನೆಯು ಬಗ್ಗೆ ಅವನು ಗೊಂದಲದಲ್ಲಿ ಬಿದ್ದನು. ಕಯ್ಯನ್ನು ತಲೆಯಲ್ಲಿಟ್ಟು ಕೊಂಚ ಕಾಲ ಸುಮ್ಮನೆ ಕುಳಿತು ಬಿಟ್ಟನು. ಮಂದಿರಕ್ಕೆ ಮಂದಿರವೇ ಕೆಳಗು ಮೇಲಾದಂತೆ ತೋರ ಹತ್ತಿತು. ಭೀತಿಯಿಂದ ಅವನು ಕಂಗೆಟ್ಟನು.

'ಒಳ್ಳೇ ಉತ್ಸಾಹದಿಂದ ಯುದ್ಧಕ್ಕೆ ಆರಂಭಿಸಿದ್ದಾನೆ. ಇರ್ಕಡೆಗಳಲ್ಲಿನ ಸೈನಿಕರೂ ತಮ್ಮ ತಮ್ಮ ದಳಪತಿಗಳ ಆಜ್ಞಾನಿರೀಕ್ಷಣೆಯಿಂದ ಉತ್ಸುಕರಾಗಿ ನಿಂತಿರುತ್ತಾರೆ. ಪ್ರತಿಯೊಬ್ಬನ ಮುಖದಲ್ಲಿಯೂ ವೀರಶ್ರೀ ಉಕ್ಕುತ್ತಲಿದೆ ಪ್ರತಿಯೊಬ್ಬ ಸೈನಿಕನೂ ಜೀವವನ್ನು ತೃಣೀಕರಿಸಿ, ಕರದಲ್ಲಿನ ಕರವಾಳ ಶರಗಳಿಂದ ಅರಿಶಿರಗಳನ್ನು ಧರೆಗಿಳಿಸಬೇಕೆಂದು, ಅರಿಸೈನ್ಯವನ್ನೆಲ್ಲ ಭೂಮಿ ಗೊರಗಿಸಬೇಕೆಂದು ಸಿದ್ಧರಾಗಿ ನಿಂತಿದ್ದಾರೆ. ಅಷ್ಟರಲ್ಲಿ ರಣಕಹಳೆಯಾ ಯಿತು; ಯುದ್ಧಕ್ಕಾರಂಭವಾಯಿತು ಅಲ್ಪಾವಕಾಶದಲ್ಲಿಯೇ ಗಜಪತಿಯ ಹಿಂದೆ ಗದ್ದಲವು ಕೇಳಿಸಿತು. 'ಹೊಡೆಯುವೆನು; ಇಲ್ಲವೆ ಮಡಿಯುವೆನು' ಎಂಬ ನಿರ್ಧರದಿಂದ ಗಜಪತಿ ಹೊಡತಕೊಬ್ಬನಂತೆ ಅರಿಸೈನಿಕರ ಪ್ರಾಣ ಹರಣ ಮಾಡುತ್ತ ಮುಂದೊರೆದಿರುವಾಗ್ಗೆ ಮೈಮೇಲೆ ಸ್ಮರಣೆಯೇ ಇರಲಿಲ್ಲ. ಹಿಂದಿನ ಗದ್ದಲವನ್ನೆಲ್ಲ ಕೇಳಿ ಹೊರಳುತ್ತಾನೆ, ತನ್ನ ಪಕ್ಷವೆಲ್ಲ ಕರಗಿ ಸಣ್ಣಾ ಗಿದೆ. ಇದ್ದವರು ನೂರಾರೇ ಸೈನಿಕರು. ಅವರು ಕೂಡ ಶತ್ರುಗಳ ಕರವಾಳ ಗಳಿಗೆ ಆಹುತಿಯಾಗಲಿರುವರು ದಿಙ್ಮೂಢನಾಗಿ ಗಜಪತಿ ಅತ್ತಿತ್ತ ಕಣ್ದಿ ರುಗುವಷ್ಟರಲ್ಲಿ ತುಚ್ಛತೆಯಿಂದ ಉಪಹಾಸಮಾಡುವ ನರಪತಿ ಕಂಡನು. ತನ್ನ ಪಕ್ಷ ಹೇಗೆ ಹತವಾಯಿತೆಂದು ತಿಳಿಯದೆ ಗೊಂದಲದಲ್ಲಿರುವಾಗಲೆ ನರ ಪತಿಯ ನಗುಮುಖ ಕಾಣಲು, ರೊಚ್ಚಿಗೆದ್ದು ನರಪತಿಯನ್ನು ಹೊಡೆಯ ಬೇಕೆಂದು ಮುಂದೊರೆದನು. ಅಷ್ಟರಲ್ಲ ಹಿಂದಿನಿಂದ ಯಾರೋ ಕೈಹಿಡಿ ಯಲು 'ಕೈಬಿಡಿರಿ' ಎಂದು ಆರ್ಭಟಿಸಿದರೂ ಕೈಬಿಡದಾಗಲು, ಅತ್ತ ನೋಡು ತ್ತಾನೆ; ತನ್ನ ಮಹಾಪಾತ್ರರಲ್ಲೀರ್ವರು. ನೀಚರಿರಾ! ಮೊದಲು ನಿಮ್ಮನ್ನು ಯಮಸದನಕ್ಕಟ್ಟಿ, ಮುಂದಿನ ಯೋಚನೆ ಮಾಡುವೆನು, ಎಂದು ಎದ್ದನು.....'

ದಾಮೋದರ ಶರ್ಮ ಅದೇ ಸಮಯಕ್ಕೆ ರಾಜದರ್ಶನಕ್ಕೆ ಬಂದನು. ರಾಜನಾಚರಣೆ ನೋಡಿ ಅವನನ್ನು ಕೂರಿಸಬೇಕೆಂದು ಅವನ ಕೈಹಿಡಿದನು. ಗಜಪತಿ ಕಣ್ದೆರೆದು ನೋಡುತ್ತಾನೆ, ಎದುರಿಗೆ ದಾಮೋದರ ಶರ್ಮ!

'ಮಹಾರಾಜ, ಇದೇನು? ಸಂಗತಿಯಾದರೂ ಏನು?' ಎಂದಂದನು.

'ಮಂತ್ರಿಗಳೇ, ನಾನು ಹೇಳಿದರೂ ಸಟೆಯೆನ್ನುತ್ತಲಿದ್ದಿರಲ್ಲವೆ?

ಗೊಳ್ಳಿ, ಇಲ್ಲಿ ಪ್ರತ್ಯಕ್ಷ ಸಾಕ್ಷಿಯಿವೆ' ಎಂದು ಪೆಟ್ಟಿಗೆ ತೋರಿಸಿ ಪತ್ರವಿತ್ತನು.

ದಾಮೋದರ ಶರ್ಮನು ಪತ್ರ ತೆರೆದೋದಿದನು; ಆ ಮೇಲೆ ಪೆಟ್ಟಿಗೆ ತೆಗೆದು ನೋಡಿದನು. ಅವನ ಮುಖವು ವಿಚಾರಮಗ್ನವಾಗಿದ್ದಿತು.

'ಏಕೆ? ಮಂತ್ರಿಗಳೇ, ನಾನು ಹೇಳಿದುದು ತಿಳಿಯಿತೆ?' ಗಜಪತಿ ರೋಷ ಮಿಶ್ರಿತ ಸ್ವರದಲ್ಲಿ ಪ್ರಶ್ನೆ ಮಾಡಿದನು.

'ಮಹಾರಾಜ, ಮೋಸವಿರುವಂತೆ ತೋರುತ್ತದೆ' ಮಂತ್ರಿಯೆಂದನು.

'ಅಹುದು. ಮೋಸವೆಂದರೆ ಅಂತಿಂತಹದಲ್ಲ; ಭಯಂಕರ ಮೋಸವು. ಕಲಿಂಗ ರಾಜ್ಯದ ಬುಡವನ್ನೇ ಕಿತ್ತುಬಿಸುಡುವ ಕಪಟ ವ್ಯೂಹ' ಗಜಪತಿ ರೊಚ್ಚಿನಿಂದಬ್ಬರಿಸಿದನು.

'ಮಹಾರಾಜ, ಈ ಪೆಟ್ಟಿಗೆಯೇ ಮೋಸದ್ದಿರುವಂತೆ ತೋರುತ್ತದೆ' ದಾಮೋದರ ಶರ್ಮ ವಿಚಾರದ ಮುದ್ರೆಯಿಂದುತ್ತರವಿತ್ತನು.

'ಮೋಸಕ್ಕಾಗಿಯೇ ಕಳುಹುದುದಿದೆ. ಅಂದಲ್ಲಿ ಮೋಸವೆಂದು ಬೇರೆ ಹೇಳುವ ಕಾರಣವೇ ಇಲ್ಲ.' ಗಜಪತಿಯು ಆಶ್ಚರ್ಯದ ಸ್ವರದಲ್ಲಂದನು.

'ನಾನು ಹೇಳಿದುದು ಅದಲ್ಲ ಈ ಪೆಟ್ಟಿಗೆ ಪತ್ರಗಳಲ್ಲೇನೋ ಕಪಟ ವಿರಬೇಕೆಂದು ತೋರುತ್ತದೆ. ಆದುದರಿಂದ ಮಹಾರಾಜರು ಪೂರ್ಣ ಚಿಕಿತ್ಸೆ ಮಾಡದೆ, ಯಾವ ನಿರ್ಧರಕ್ಕೂ ಬರುವುದು ಯೋಗ್ಯವಲ್ಲೆಂದು ನನ್ನ ಸಲಹೆ'

'ಮಂತ್ರಿಗಳೇ, ನಾನಿದುವರೆಗೆ ಹೇಳುತ್ತಲಿದ್ದುದರ ಉಪಯೋಗವೇನೂ ಆದಂತೆ ತೋರಲಿಲ್ಲ. ಮೊದಲೇ ನರಪತಿಯ ಉದಾರಚರಿತಕ್ಕೆ ಮನ ಸೋತಿರುವರು. ಅದರಲ್ಲಿ ಗೆಲುವಿನ ಬಗ್ಗೆ ನಿಶ್ಚಿತವಾದ ಧೈರ್ಯವಿಲ್ಲ ಇಷ್ಟೇ ಅಲ್ಲ, ತಮ್ಮ ಪಕ್ಷಕ್ಕೆ ಸೋಲೇ ಎಂದು ಸಿದ್ಧರವಾಗಿದೆ. ಇಂತಹ ಸಮಯ ದಲ್ಲಿ ಈ ಲಕ್ಷಾವಧಿ ಬೆಲೆಯ ಕಾಣಿಕೆ ನೋಡಿದರೆ, ಯಾರ ಮುಖದಲ್ಲಿ ನೀರು ಬರಲಿಕ್ಕಿಲ್ಲ?'

'ಪೂರ್ಣ ಚಿಕಿತ್ಸೆ ಮಾಡದ ಹೊರತು ನಾನು ಉತ್ತರವೀಯಲಾರೆನು.'

'ಮಂತ್ರಿಗಳೇ, ನೀವು ಚಿಕಿತ್ಸೆಯನ್ನಾದರೂ ಹೇಗೆ ಮಾಡುವಿರಿ?'

"'ಈಗಲೆ ಉಳಿದವರಿಂದ ಕಾಣಿಕೆ ಸ್ವೀಕೃತವಾಗಿವೆ' ಎಂದು ಪತ್ರ ದಲ್ಲಿಲ್ಲವೆ? ಆ ಪ್ರಕಾರ ಎಲ್ಲೆಡೆಯಲ್ಲಿಯೂ ಶೋಧ ಮಾಡುವಾ."

'ಗೌಪ್ಯವಾಗಿಯೋ ಪ್ರಕಟವಾಗಿಯೊ?'

'ಎಲ್ಲರಿಗೂ ತಿಳಿಯುವಂತೆ ಸ್ಪಷ್ಟವಾಗಿಯೇ ಮಾಡೋಣ. ಒಂದು ಸಲ ಸಂಶಯ ಬಂದ ಮೇಲೆ ಅನುಮಾನವಾದರೂ ಏಕೆ? ಹೇಗೂ ಇಲ್ಲೊಂದು ಪತ್ರವಿದೆ. ಇದರ ಆಧಾರದಿಂದ ಬೇಕಾದ ಕಾರ್ಯ ಕೈಕೊಳ್ಳಬಹುದು

'ಹಾಗೆ ಮಾಡುವುದೆಂದರೆ, ನಮ್ಮ ಚಿತೆ ನಾವೇ ರಚಿಸಿದಂತೆ.'

'ಅದೇಕೆ ಮಹಾರಾಜ?'

'ಮಂತ್ರಿಗಳೇ, ನೀವು ಮೇಲ್ತರಗತಿಯ ರಾಜಕಾರ್ಯಧುರಂಧರರಿದ್ದರೂ ಇಲ್ಲಿ ಮಾತ್ರ ತಪ್ಪುತ್ತಿರುವಿರಿ.'

'ತಪ್ಪುವುದು ಮಾನವ ಸ್ವಭಾವ. ಆ ಬಗ್ಗೆ ನಾನು ಯೋಚಿಸುವುದಿಲ್ಲ; ಆದರೆ ಈ ಸನ್ನಿವೇಶದಲ್ಲಿ ಹೇಗೆ ತಪ್ಪುತ್ತಿದೆಯೆಂಬದೇ ನನಗೆ ತಿಳಿಯದು.'

'ಮಂತ್ರಿಗಳೇ, ನಾವು ಈ ಸಂಗತಿಯನ್ನು ಸ್ಫೋಟವಾಗಿಟ್ಟೊಡನೆಯೇ ಜನರಲ್ಲೆಲ್ಲ ಹರಡಿ ಹೋಗುವುದು. ಆ ಮೇಲೆ ನಾವೇ ನಮ್ಮ ಮಹಾಪಾತ್ರರ ಅಪಮಾನ ಮಾಡಿದಂತಾಗುವದು. ಮುಂದೆ ಯುದ್ಧದ ಸಮಯದ ವರೆಗಾದರೂ ನಮ್ಮವರಾಗುಳಿಯಬಹುದಾದ ಮಹಾಪಾತ್ರರು ಈಗಲೆ ನಮ್ಮ ಶತ್ರುಗಳಾಗುವರು. ಒಂದುವೇಳೆ ಕಪಟವಿಲ್ಲದಿದ್ದರೂ ನಾವು ಸರ್ವಸಾಮಾನ್ಯರಂತೆ ಅವರಲ್ಲಿ ಸಂಶಯ ತೆಗೆದುಕೊಂಡ ಬಗ್ಗೆ ಅವರು ಕೋಪಿಸಬಹುದು; ಅಥವಾ ಅವರೀ ಕಾಪಟ್ಯಕ್ಕೆ ಆಶ್ರಯವಿತ್ತಿದ್ದರೂ ಕೂಡ ಅವರನ್ನು ತಡೆಯುವವರಾರು?'

'ಅವರು ಕಪಟವನ್ನಾಚರಿಸಿರಬಹುದೆಂಬದೇ ನನಗೆ ನಂಬುಗೆಯಾಗುವುದಿಲ್ಲ. ಅಂತೆಯೇ ಅವಸರಪಡಿಸಬಾರದೆಂದು ನನ್ನ ಬಿನ್ನಹ'

'ಮಂತ್ರಿಗಳೇ, ಒಂದುವೇಳೆ ವ್ಯೂಹವು ಸಟಿಯೇ ಇದ್ದರೂ, ನಾವು ಯುದ್ಧಮಾಡುವುದು ಮೂರ್ಖತನವೆಂದು ನನ್ನ ನಂಬುಗೆಯಾಗಹತ್ತಿದೆ'

'ಅದು ಹೇಗೆ ಮಹಾರಾಜ?'

'ಈಗಿನ ಪರಿಸ್ಥಿತಿಯ ಕಲ್ಪನೆ ತಂದುಕೊಳ್ಳಿರಿ. ನರಪತಿ ಈ ಒಂದು-ಒಂದೂವರೆ ತಿಂಗಳಲ್ಲಿ ಸಿಂಹಾಚಲದಲ್ಲಿ ನಡೆಯಿಸಿದ ತನ್ನ ಉದಾರ ಕಾರ್ಯಗಳಿಂದ ಕಲಿಂಗ ಪ್ರಜೆಗಳನ್ನೆಲ್ಲ ಆಕರ್ಷಿಸಿರುವನು. ಅಂದರೆ, ಅವರು ಕಲಿಂಗ ಸಿಂಹಾಸನ ನಿಷ್ಠೆಯನ್ನು ಮರೆತು, ಕರ್ನಾಟಕಸಿಂಹಾಸನಕ್ಕೇನೇ ಕೊನೆಯವರೆಗೆ ತಲೆಬಾಗಬೇಕೆಂದಿರುವರೆಂದೇನೂ ಅರ್ಥವಲ್ಲ; ಆದರೂ ನರಪತಿಯೆಂದರೆ, ಉದಾರನು, ಸುಗುಣಿಯು, ಸಜ್ಜನನು, ಸಹಸಾ ದುಷ್ಟ ಕಾರ್ಯಕ್ಕೆ ಕೈಹಾಕುವವನಲ್ಲ, ಎಂದು ಸಾರ್ವತ್ರಿಕ ನಂಬುಗೆಯಾಗಿದೆ.'

'ಅಹುದು. ಆ ಬಗ್ಗೆ ಮನುಷ್ಯನೆನ್ನಿಸಿಕೊಳ್ಳುವ ಪ್ರತಿಯೊಂದು ವ್ಯಕ್ತಿಯೂ ಸಮ್ಮತಿಸಲೇಬೇಕು.'

'ಈಗ ನಾವು ಯುದ್ಧದ ಸಿದ್ಧತೆಗೆ ತೊಡಗಿದಾಗಿನಿಂದಲೂ ಜನತೆಯಲ್ಲಿನ ಅಭಿಪ್ರಾಯ ವಿಚಾರಿಸಿರುವಿರಾ?'

'ಅಹುದು. ಮಹಾರಾಜ, ಆಗಾಗ್ಗೆ ವಿಚಾರಿಸಿರುವೆನು.'

'ಏನೆಂದಿದೆ?'

" 'ನರಪತಿಯು ಮೇಲ್ತರಗತಿಯ ರಾಜನಿರುವ ಮೂಲಕ ಕಲಿಂಗ ರಾಜರು ಒಂದು ಸಲ ಸನ್ಮಾನ್ಯವಾದ ಒಪ್ಪಂದಕ್ಕೆ ವಿಚಾರಿಸಬೇಕು. ಮೈತ್ರಿಯ ಸಲುವಾಗಿ ನರಪತಿಯಾದರೂ ಸಮ್ಮತಿಸದರನು. ಒಂದು ಸಲ ಯತ್ನಿಸಿ ನೋಡಬೇಕು ಸನ್ಮಾನ್ಯ ಸಂಧಿ ಸಾಧಿಸಿದರೆ, ಸಕಲರಿಗೂ ಹಿತವೇ. ಒಂದು ವೇಳೆ ಅಪಮಾನಕಾರಕವಾದ ಕರಾರು ಹಾಕಿದರೆ, ಆಗ್ಗೆ ಯುದ್ಧವಿದ್ದೇ ಇದೆ' ಮುಂತಾಗಿ ಹೇಳುತ್ತಲಿರುವರು."

'ಅವರ ಈ ಅಭಿಪ್ರಾಯ ಯೋಗ್ಯವೇ ಆಗಿದೆ. ನಾನೇನೋ ಒಂದೆರಡು ಸಲ ಸೂಚಿಸಲು ಯತ್ನಿಸಿದೆನು; ಆದರೆ ಮಹಾರಾಜರು ಅತ್ತ ಚಿತ್ತವೀಯದ್ದರಿಂದ, ಉಪಾಯಗಾಣದಾದೆನು'

'ಮಂತ್ರಿಗಳೇ, ಹಿಂದಿನ ಮಾತು ಹಿಂದಾಯಿತು ನನ್ನ ತಲೆಯಲ್ಲಿ ಮಬ್ಬುಗವಿದಿತ್ತು. ಮೊದಲು ಕನ್ನಡಿಗರು ಮಹಮ್ಮದೀಯ ರಾಷ್ಟ್ರಗಳನ್ನು ದಾಟಿ ನಮ್ಮ ವರೆಗೆ ಬರುವುದಶಕ್ಯವೆಂದೇ ನನ್ನ ಭ್ರಮೆಯಿದ್ದುದರಿಂದ, ಮೊದಲಿನಿಂದಲೂ ನಾನು ಕನ್ನಡ ಸಾಮ್ರಾಜ್ಯದಲ್ಲಿ ಕೊಳ್ಳಿ ಹೊಡೆಯುತ್ತ ಬಂದೆನು ಸದ್ಯದ ಶ್ರೀ ಕೃಷ್ಣದೇವರಾಯನ ಸಮಯಕ್ಕೆ ಕನ್ನಡಿಗರು ಬಲಶಾಲಿಗಳಾಗಹತ್ತಿದುದರಿಂದ, ಅವರ ಬಲವನ್ನೆಲ್ಲ ನಿರ್ಮೂಲ ಮಾಡಬೇಕೆಂದು ಮಹಮ್ಮದೀಯರೊಡನೆ ವ್ಯೂಹರಚಿಸಿದೆನು. ಅದರಲ್ಲಿ ಮೊದಲು ಮಹಮ್ಮದೀಯ ಅರಸರೇ ಅವನೊಡನೆ ಕಾಳಗಕ್ಕೆ ನಿಲ್ಲುವಂತೆ ಮಾಡಿದೆನು. ದೈವೀ ಯೋಗ ಬೇರೆಯೇ ಇದೆ. ನರಪತಿಯು ಮಹಮ್ಮದೀಯರನ್ನು ಹಣಿದುದಲ್ಲದೆ, ಹಾ, ಹಾ ಅನ್ನುವಷ್ಟರಲ್ಲಿ ಕನ್ನಡಿಗರನ್ನು ಹಿಂದೂಡುವೆನೆಂದು ಹೆಮ್ಮೆಯಿಂದಿದಿರಾದ ನನ್ನನ್ನೂ ದೆಸೆಗೇಡು ಮಾಡಿದನು. ಇಂತಹ ಸಮಯದಲ್ಲಿ ನಾವು ಪುನಃ ಯುದ್ಧಮಾಡಿದರೂ ನಮಗೆ ಅಪಜಯವು ಖಂಡಿತವೆಂದು ನನ್ನ ಭಾವನೆಯಾಗಹತ್ತಿದೆ. ಹೀಗೆ ಅಧೈರ್ಯದಿಂದ ಯುದ್ಧಕ್ಕೆ ಹೊರಡುವುದೆಂದರೆ, ತೀರ ಅಪಾಯಕರವೆಂದು ನನ್ನ ವಿಚಾರ; ಏಕೆಂದರೆ, ಕನ್ನಡಿಗರಿಗೆ ಉತ್ಕರ್ಷಕಾಲವಿದೆ. ಈ ಸಮಯ ಅವರನ್ನು ಯಾರೂ ತಡೆಯರು; ಮತ್ತು ಭಾರತೀಯ ರಾಜರಾದ ನಾವು ಒಬ್ಬರೊಬ್ಬರು ಸ್ನೇಹಭಾವದಿಂದಿದ್ದು, ಪರಕೀಯರ ಆಕ್ರಮಣ ತಡೆಯಬೇಕಲ್ಲದೆ, ನಮ್ಮ ನಮ್ಮಲ್ಲಿ ಕಲಹಮಾಡುತ್ತ ಕುಳಿತರೆ, ಅದರಿಂದ ಭಾರತವು ದುರ್ದೆಸೆಗೀಡಾಗದಿರದು. ಏಕೆ ಮಂತ್ರಿಗಳೇ, ನಿಮ್ಮ ಅಭಿಪ್ರಾಯವೇನಿದೆ?'

'ಮಹಾರಾಜರ ವಿಚಾರಕ್ಕೆ ಅನ್ಯಥಾ ಹೇಳುವ ಕಾರಣವಿಲ್ಲ.'

'ಈ ದಾಕ್ಷಿಣ್ಯ ಆ ಮೇಲೆ ಇರಲಿ. ಸದ್ಯ ನಿಮ್ಮ ಸ್ಪಷ್ಟವಾದ ಅಭಿ ಪ್ರಾಯ ತಿಳಿಸಿರಿ.'

'ಮಹಾರಾಜ, ಪ್ರತಿಯೊಬ್ಬ ಭಾರತೀಯನೂ ತನ್ನ ಹೃದಯದಲ್ಲಿ ಸರ್ವ ಕಾಲದಲ್ಲಿಯೂ ಕೊರೆದುಕೊಂಡಿರಬೇಕಾದ ವಿಚಾರಗಳಿವು. ಭಾರತವೆಂದರೆ, ಸಕಲ ಧರ್ಮಗಳ ತವರುಮನೆ, ಜಗನ್ಮಾನ್ಯ ವಿಭೂತಿಗಳ ಹುಟ್ಟುಸ್ಥಳ, ಸರ್ವಾ ರ್ಥಿಗಳಿಗೆ ಮೂಲಸ್ಥಾನ. ಮಹಾರಾಜ, ಶಾಂತರೀತಿಯಿಂದ ಸತತ ಯತ್ನ ಮಾಡಿದರೆ, ನಮ್ಮೀ ಭಾರತದಲ್ಲಿ ಕಾಮಧೇನುವಿನ ಸಮೀಪದಲ್ಲಿದ್ದಂತೆ ಸರ್ವ ಕಾಮನೆ ಫಲಿಸುವಂತಿವೆ. ಇಂತಹ ಸಮಯದಲ್ಲಿ ನಾವೆಲ್ಲರೂ ನಮ್ಮ ಸರ್ವಸ್ವ ದಿಂದ ಶಾಂತಿಕಾಯಲೆತ್ನಿಸುವದು ಮುಖ್ಯವಾಗಿದೆ. ಮೊದಲು ಶಾಂತಿಗಾಗಿ ಯತ್ನಿಸಿ, ಕೊನೆಗೆ ಉಳಿದ ಉಪಾಯಗಳನ್ನವಲಂಬಿಸಬಹುದು.'

'ಯೋಗ್ಯ, ಮಂತ್ರಿಗಳೇ, ಯೋಗ್ಯ. ನಮ್ಮ ಮುಂದಿನ ಕಾರ್ಯ ವೆಂದರೆ, ಸನ್ಮಾನ್ಯವಾದ ಸಂಧಿಗೆ ನರಪತಿ ಸಮ್ಮತಿಸಿದರೆ—'ಸಮ್ಮತಿಸಿದರೆ' ಏಕೆ? ಸಮ್ಮತಿಸಿಯೇ ಸಮ್ಮತಿಸುವನೆಂದು ನನ್ನ ನಂಬುಗೆಯಿದೆ'

'ಮಹಾರಾಜ, ನರಪತಿಯೆಂದರೆ ಅಂತಹ ಪುರುಷ ಶ್ರೇಷ್ಠನಿರುವನು.'

'ಅಷ್ಟಕ್ಕೇ ಆಗಿದ್ದರೆ, ನಾನೆಂದೂ ಸಮ್ಮತಿಸುತ್ತಲಿರಲಿಲ್ಲ.'

'ಹಾಗಾದರಿನ್ನೇನು?'

'ಇಂದು ಬೆಳಗಿನಲ್ಲಿ ಶ್ರೀ ಜಗನ್ನಾಥನೇ ಸಂಧಿಗೆಂದು ಯತ್ನಿಸುವಂತೆ ನನಗೆ ಅಪ್ಪಣೆ ವಿಧಿಸಿದ್ದಾನೆ.'

'ದೇವ ದೇವ, ಜಗನ್ನಾಥನೇ?'

'ಅಹುದು. ಮಂತ್ರಿಗಳೇ, ಶ್ರೀ ಜಗನ್ನಾಥನೇ?'

'ಅದು ಹೇಗೆ? ಹೇಳಿರಿ ಮಹಾರಾಜ, ಶ್ರೀಜಗನ್ನಾಥನದು ನಮ್ಮ ಮೇಲೆ ಬಹಳ ಪ್ರೇಮ. ಆವಾಗಲೂ ಕೃಪಾದೃಷ್ಟಿಯಿಂದಲೇ ನೋಡುತ್ತ ಇರುತ್ತಾನೆ.'

"ಇಂದು ಬೆಳಗಿನ ಸಮಯವಾಗಿದ್ದಿತು. ಆಗ್ಗೆ ನಾನು ನನ್ನ ನಾಡ ಸಮೀಪಕ್ಕೆ ಒಂದು ಹುಲಿ ಬಂದಂತೆ ವಾರ್ತೆ ಕೇಳಿದೆನು. ಇನ್ನು ನಮ್ಮ ದೇಶದಲ್ಲಿ ಹಾವಳಿಯೆಬ್ಬಿಸಬಹುದೆಂಬ ಭೀತಿಯಿಂದ ನಾನದನ್ನು ಸಂಹರಿಸ ಬೇಕೆಂದು ಹೊರಟೆನು. ಬಹಳ ಸಮಯದ ವರೆಗೆ ಅಡವಿಗಳನ್ನೆಲ್ಲ ತಿರುಗಿ ದೆನು, ಗಿಡ-ಗಂಟಿಗಳನ್ನು ದಾಟಿದೆನು, ಮುಳ್ಳು-ಕಲ್ಲುಗಳನ್ನು ತುಳಿದೆನು, ಹಳ್ಳ-ಕೊಳ್ಳಗಳನ್ನು ಹಾಯ್ದೆನು, ಗುಡ್ಡ-ಬೆಟ್ಟಗಳನ್ನು ಏರಿದೆನು; ಆದರೂ

ನನ್ನಿಂದಾ ಹುಲಿಯನ್ನು ಹಿಡಿಯುವುದಾಗಲಿ ಹೊಡೆಯುವುದಾಗಲಿ ಸಾಧ್ಯವಾಗಲಿಲ್ಲ. ಹುಲಿಯ ಶೋಧಕ್ಕೆಂದು ನಾನು ಆಹಾರ ನಿದ್ರೆಗಳ ಪರಿವೆಯಿಲ್ಲದೆ, ಒಂದೇಸವನೆ ತಿರುಗಿದೆನು. ಕೊನೆಗೆ ನಿರಾಶನಾದೆನು.

ಮುಂದೇನು ಮಾಡಬೇಕೆಂಬ ಯೋಜನೆಯಿರುವಾಗಲೆ ಆ ಹುಲಿಯು ಮನುಷ್ಯ ಭಾಷೆಯಲ್ಲಿ ಅದೆಲ್ಲಿಂದಲೋ ಮಾತನಾಡಹತ್ತಿತು:

'ರಾಜನೇ, ವ್ಯರ್ಥವಾಗಿ ಏಕೆ ಬಳಲುತ್ತೀ? ನಾನು ನಿಮಗೆ ಯಾವ ಉಪದ್ರವವನ್ನೂ ನೀಡಬೇಕೆಂದು ಬಂದಿಲ್ಲ. ಇಬ್ಬರೂ ಸ್ನೇಹದಲ್ಲಿರಬೇಕೆಂದು ನನ್ನ ಬಲವಾದ ಆಕಾಂಕ್ಷೆಯಿದೆ. ಆದುದರಿಂದ ನಾನಿಷ್ಟು ದೂರ ಬರಬೇಕಾಯಿತು; ಆದರೆ ನೀನು ಇಷ್ಟು ದಣಿದ ಹೊರತು ನನ್ನ ಮಾತಿಗೆ ಕಿವಿಗೊಡೆಯೆಂದರಿತು, ನಿನ್ನನ್ನು ಇಷ್ಟು ಬಳಲಿಸಿದೆನು.' ಎಂದು ನುಡಿಯಿತು ಅದನ್ನು ಕೇಳಿ ನನಗೆ ಅತ್ಯಂತ ಆಶ್ಚರ್ಯವಾಯಿತು. ಭೀಕರ ಕಾಡು ಪ್ರಾಣಿಯಾದ, ಕ್ರೂರ ಪ್ರಾಣಿಭಕ್ಷಕ ಪಶುವಾದ ಹುಲಿಯೆಂದರೇನು, ಮನುಷ್ಯ ಭಾಷೆಯಲ್ಲಿ ಮಾತನಾಡುವುದೆಂದರೇನು? ಅದೂ ಸ್ನೇಹಕ್ಕೆ ಮುಂದೊರೆಯುವುದು ನನ್ನನ್ನು ವಿಸ್ಮಯ ಚಕಿತನನ್ನಾಗಿ ಮಾಡಿತು. 'ಹುಲಿಯೊಡನೆ ಮಾನವ ಸ್ನೇಹವೇ? ಅಗ್ನಿಕಾಷ್ಠವನ್ನು ತನ್ನ ಬಳಿಯಲ್ಲಿ ಜೋಕೆಯಿಂದಿರಿಸಬಹುದೆ? ಇವೆಂತಹ ವಿಚಿತ್ರ?' ಎಂದು ಕೇಳಿದೆನು. 'ರಾಜನೇ, ನಿನ್ನ ಕಣ್ಣಗಳನ್ನು ಚೆನ್ನಾಗಿ ತೆರೆದು ನೋಡು. ನಾನು ಹುಲಿಯಿರದೆ, ನಿನ್ನಂತೆಯೆ ನಾನಾದರೂ ಇರುತ್ತೇನೆಂದು ತಿಳಿದು ಬರುವುದು.' ಎಂದೊಡನೆ ನಾನು ಅತ್ತಿತ್ತ ನೋಡುತ್ತೇನೆ! ಒಂದು ಅತ್ಯಂತ ರಮಣೀಯ ಸ್ಥಳದ ಬದಿಯಿಂದ ಧ್ವನಿ ಕೇಳಬಂದಿತು. ನಾನು ಉತ್ಸುಕತೆಯಿಂದ ಮುಂದೆ ಹೋದೆನು. ಆ ಸ್ಥಳದ ಸೌಂದರ್ಯವನ್ನು ನೋಡಿ ನನ್ನ ಕಣ್ಣಗಳು ಕುಕ್ಕಿಹೋದುವು.

ಒಂದು ಸುಂದರವಾದ ಕೊಳ. ಕೊಳವೆಂದರೇನು? ಮಂತ್ರಿಗಳೇ, ಕುಶಲ ಶಿಲ್ಪಿಯು ಸಿದ್ಧಪಡಿಸಿದ ಒಂದು ಅತಿ ರಮಣೀಯವಾದ, ಕಲೆಗೆ ನೆಲೆಯೇ ಆದ ಒಂದು ದೊಡ್ಡದಾದ ಹೂಬುಟ್ಟಿಯಂತಿದ್ದಿತು. ಸುತ್ತಲೂ ಬಿಳೀ ಹಸರು ಮುಂತಾದ ಸಂಗಮರವರೀ ಕಲ್ಲುಗಳನ್ನು ಅಂದವಾಗಿ ಜೋಡಿಸಿದ ಮೆಟ್ಟಲುಗಳಿದ್ದುವು. ಆ ಮೆಟ್ಟಲುಗಳು ಮೆಟ್ಟಲುಗಳಂತೆ ಕಾಣದೆ, ಅಂದವಾಗಿ ಹೆಣೆದ ಹೂಬುಟ್ಟಿಯ ಬದಿಗಳಂತೆ ಕಾಣುತ್ತಲಿದ್ದುವು. ಒಳಗೆ ಕೊಳದ ತುಂಬಾ ಕಮನೀಯವಾಗಿ ಕಂಗೊಳಿಸುವ ಕನ್ನೈದಿಲೆಗಳಿದ್ದುವು. ಬಿಳೀಕಮಲ, ಕೆಂಪುಕಮಲ, ಕಪ್ಪುಕಮಲ ಮುಂತಾದ ಇನ್ನೂ ಎಷ್ಟೋ ಬಗೆಯ ಕಮಲಗಳು ಅಲ್ಲಿದ್ದುವು. ಮಂತ್ರಿಗಳೇ, ಆ ಎಲ್ಲ ಕಮಲಗಳು

ಅಸ್ತವ್ಯಸ್ತವಾಗಿ ಬೆಳೆದಿರಲಿಲ್ಲ. ಯಾವನೊಬ್ಬ ಕುಶಲ ಹೂಗಾರನು ಬರಿಯ ಕಮಲದ ಹೂಗಳಿಂದಲೇ ಅತ್ಯಂತ ಆನಂದಕರವಾಗುವಂತೆ, ಮಧುರತೆಯೇ ಮೂರ್ತಿಮಂತಾಗಿ ಒಡಮೂಡಿದಂತೆ, ಜಾಣ್ಮೆ ಮೈಗೊಂಡು ಕಣ್ಮನಗಳನ್ನು ತಣಿಸುವಂತೇರ್ಪಡಿಸಿದ ಪುಷ್ಪಗುಚ್ಛದಂತಿದ್ದಿತು. ಮಂತ್ರಿಗಳೇ, ಆ ಗುಚ್ಛದಲ್ಲಿ ರಚಿತವಾಗಿದ್ದ ಹೂಗಳ ಕ್ರಮ, ಅಲ್ಲಿ ಅವುಗಳನ್ನುಪಯೋಗಿಸಿದ ಶೈಲಿ, ವರ್ಣವೈವಿಧ್ಯತೆಯಿಂದ ಆವಾಗಲೂ ಹೊರಹೊಮ್ಮುತ್ತಲಿದ್ದ ಅವರ್ಣನೀಯ ಶೋಭೆ ಇವುಗಳನ್ನು ನೋಡಿ ನಾನು ಮುಗ್ಧನಾಗಿ ಹೋದೆನು. ಸುಮಧುರ ನೋಟ ನೋಡಿ ನೋಡಿ ನನ್ನ ನೋಟ ತಣಿಯದಾಯಿತು ಬಹು ಅಂದವಾಗೇರ್ಪಡಿಸಿದ್ದ ಆ ನೈಸರ್ಗಿಕ ಪುಷ್ಪಗುಚ್ಛವನ್ನು ನೋಡುವುದರಲ್ಲಿ ನನ್ನನ್ನು ನಾನೇ ಮರೆತನಲ್ಲದೆ, ನಾನಲ್ಲಿಗೆ ಹೋದ ಕಾರ್ಯವನ್ನೂ ಹುಲಿಯನ್ನು ಹಿಂಬಾಲಿಸಿ ಬಂದ ಸಂಗತಿಯನ್ನೂ ಸಂಪೂರ್ಣವಾಗಿ ಮರೆತು, ಆ ನೇತ್ರಾನಂದಕರವಾದ ನೋಟದಲ್ಲಿಯೇ ಕೂಡಿ ಹೋದೆನು ಅಲ್ಪಾವಕಾಶದಲ್ಲಿಯೇ ಆ ಕಮನೀಯ ಕುಸುಮಗುಚ್ಛದ ಮಧ್ಯದಲ್ಲಿ ಅತ್ಯಂತ ರಮಣೀಯವಾದ ಕಮಲದ ಹೂವೊಂದರಲ್ಲಿ ಒಬ್ಬ ಪುರುಷ ಕುಳಿತಂತೆ ಕಾಣಿಸಿತು. ನಾನು ಕೊಂಚ ನಿಟ್ಟಿಸುವಲ್ಲಿ, ಆತನು ತನ್ನ ಬಳಿಗೆ ಬರುವಂತೆ ಸನ್ನೆ ಮಾಡಿದನು. ನಾನು ಮರುಯೋಚನೆಯಿಲ್ಲದೆ ಹೂಗಳ ಮೇಲೆ ಕಾಲಿಕ್ಕುತ್ತ ಹೊರಟೆನು. ಆತ ಕುಳಿತಲ್ಲಿಗೆ ಹೋಗುತ್ತಲೆ, ಅವನು ಎದ್ದು ಕೈಹಿಡಿದು ನನ್ನನ್ನು ಕೂಡಿಸಿ, 'ರಾಜನೇ, ಚನ್ನಾಗಿ ವಿಚಾರಿಸದಿದ್ದುದರ ಪರಿಣಾಮವಿದು. ಹುಲಿ ಯಾವದು, ಮಾನವನಾವ ಎಂಬದನ್ನು ಚನ್ನಾಗಿ ವಿಚಾರಿಸಿದ್ದರೆ, ನಿನಗೀ ದಣುವೇ ಆಗುತ್ತಿರಲಿಲ್ಲ ಆದುದು ಆಗಿ ಹೋಯಿತು. ಇನ್ನಾದರೂ ನಾವು ಸ್ನೇಹದಿಂದಿರೋಣ' ಎಂದು ನುಡಿದನು. ನಾನು ಆಶ್ಚರ್ಯದಲ್ಲಿ ಕೊಂಚ ನಿಟ್ಟಿಸಲು, ಆತನು ನರಪತಿಯೇ ಎಂದು ತಿಳಿಯಿತು. ನಾನು ಮುಂದೆ ಏನು ಮಾತನಾಡಬೇಕೆಂಬದು ತಿಳಿಯದೆ ಯೋಚನೆಗೊಳಗಾಗಿರುವಾಗ, 'ಮಗು, ವ್ಯರ್ಥವಾಗಿ ಏಕೆ ವೇಳೆಗಳೆಯುತ್ತೀ? ಈತನ ಸೂಚನೆಯಂತೆ ನೀನೀತನೊಡನೆ ಇನ್ನು ಸ್ನೇಹದಿಂದ ನಡೆದುಕೊಳ್ಳು. ನೀವೀರ್ವರೂ ಪ್ರಿಯಮಿತ್ರರಾಗಿರಬೇಕೆಂದು ನನ್ನ ಉದ್ದೇಶವಿದೆ ಜಗನ್ನಾಥನಾಮದಿಂದ ನಾನು ಇಲ್ಲಿ ವಾಸಿಸುವಂತೆ, ಪಂಪಾಪತಿಯಾಗಿ ನರಪತಿಯನ್ನು ರಕ್ಷಿಸುತ್ತಲಿರುವೆನು. ಅನ್ಯಥಾ ಯೋಚನೆಗೊಳಗಾಗದೆ, ನೀನೀತನ ಸ್ನೇಹ ಸಂಪಾದಿಸು; ಅಂದರೆ, ನಿನಗೆ ಸರ್ವವೂ ಕಲ್ಯಾಣವಾಗುವುದು.' ಎಂಬ ದೈವೀವಾಣಿ ಕೇಳಿಸಿತು. ಕೂಡಲೆ ಎಚ್ಚರಾಯಿತು.' ಎಂದು ಹೇಳಿದನು.

ಮಂತ್ರಿಯು ಆ ಸುಂದರವಾದ ಸ್ವಪ್ನವನ್ನೂ, ಆವಾಗಲೂ ಕಲಿಂಗದ ಮೇಲೆ ಕೃಪೆದೋರುತ್ತಲಿದ್ದ ಜಗನ್ನಾಥನ ಅಭಯವಾಣಿಯನ್ನೂ ಕೇಳಿ, ಆನಂದ ತುಂದಿಲನಾದನು. 'ಮಹಾರಾಜ, ದೈವೀಲಿಲೆ ಅಗಾಧವಾದುದು. ಇಂತಹ ಸುಮಧುರ ಸಮ್ಮೀಲನವು, ಆನಂದಮಯವಾದ ಮೈತ್ರಿಯು ಕೂಡಲೇಬೇಕೆಂದು ಜಗನ್ನಾಥನ ಇಚ್ಛೆಯೇ ಇರುವಾಗ, ಆರು ತಾನೇ ತಡೆ ಹಿಡಿಯಲಾರ್ಪರು? ಮಹಾರಾಜ, ಇದರಿಂದ ಇನ್ನು ಮುಂದೆ ಕಲಿಂಗ ಕರ್ನಾಟಕಗಳ ದೃಢಮೈತ್ರಿ ಬೆಳೆದು, ಅದರಿಂದ ಉಭಯ ರಾಷ್ಟ್ರಗಳಿಗೆ, ತನ್ಮೂಲಕ ಆರ್ಯಾವರ್ತಕ್ಕೆ ಶುಭದಿವಸಗಳು ಬರುವವೆಂದೆನ್ನಲು ಸಂದೇಹವಿಲ್ಲ.' ಹರ್ಷ ಬಾಷ್ಪಗಳುದುರುತ್ತಿರಲು ಮಂತ್ರಿ ನುಡಿದನು.

'ಮಂತ್ರಿಗಳೇ, ಈಗ ನಾವು ಹೇಗೆ ಮುಂಮೊರೆಯಬೇಕೆಂದು ನಿಮ್ಮ ಯೋಚನೆಯಿದೆ?' ಗಜಪತಿ ಕೇಳಿದನು.

'ಮಹಾರಾಜರೆ, ಕಲಿಂಗ ನಾಡಿನ ಅಭ್ಯುದಯಕ್ಕಾಗಿ, ಕಲಿಂಗ ನಾಡವರ ಶಾಂತಿಗಾಗಿ, ನನ್ನ ಮಾತೃಭೂಮಿಯ ಮೇಲ್ಮೆಗಾಗಿ ನಾನೇ ಮುಂದಾಗುವೆನು. ನಾನೀಗಲೇ ಕನ್ನಡ ರಾಜನಲ್ಲಿ ಹೋಗಿ, ಕಲಿಂಗ-ಕರ್ನಾಟಕಗಳಲ್ಲಿ ಮೈತ್ರಿ ಬೆಳೆಯಿಸಬೇಕೆಂದು ಬೇಡಿಕೊಳ್ಳುವೆನು. ನರಪತಿಯೆಂದೂ ಹೊರದೂಡಲಿಕ್ಕಿಲ್ಲ.' ಮಂತ್ರಿಯೆಂದನು.

'ಅಹುದು; ಹಾಗೆಯೇ ಮಾಡಿರಿ. ಇಲ್ಲಿಯ ಸಂಗತಿಯನ್ನೆಲ್ಲ ಸೂಚಿಸಿರಿ. ಒಂದು ವಿಚಾರವೆಂದರೆ, ಈ ಸಂಧಿ ಕಾರ್ಯದಲ್ಲಿ ನರಪತಿಗಳಿಗೇನೇ ಮುಂದಾಗುವಂತೆ ಸೂಚನೆ ಕೊಡಿರಿ, ಏಕೆಂದರೆ, ನಾವು ಮಹಾಪಾತ್ರರನ್ನು ಇಲ್ಲಿ ಯುದ್ಧದ ಸಲುವಾಗಿ ಕಲೆಹಾಕಿರುವೆವು. ಈಗ ಅವರು ಪಕ್ಷಭೇದ ಮಾಡಿದ ಮೋಸ ನಮಗೆ ತಿಳಿದಿದೆ. ಇದು ಮಾನವ ಸ್ವಭಾವ. ಇದರಲ್ಲಿ ಅವರ ದೋಷವೇನೂ ಇಲ್ಲ. ಬಲಿಷ್ಠನೂ, ವೀರನೂ, ಚತುರನೂ, ಉದಾರಿಯೂ ಆದ ಸಮ್ರಾಟನ ಸ್ನೇಹವನ್ನು ಅದಾರು ಬಯಸಲಿಕ್ಕಿಲ್ಲ? ಅವರಾದರೂ ಹಾಗೆ ಮಾಡುವದು ಸಹಜವು. ಅದನ್ನು ನಾವು ಸುಧಾರಿಸಬೇಕಾದರೆ, ಈ ಮೋಸ ಕೊಂಚವಾದರೂ ಬೈಲಿಗೆ ಬೀಳತಕ್ಕುದಲ್ಲ. ನಾವು ಯುದ್ಧದಲ್ಲಿರುವಂತೆಯೇ ನಟಿಸುವೆವು. ಆಕಸ್ಮಿಕವಾಗಿ ನರಪತಿಯಿಂದಲೇ ಸ್ನೇಹದ ಸೂಚನೆ ಬಂದಂತೆ ಮತ್ತು ಅದರಿಂದಲೆ ನಾವು ಮಹಾಪಾತ್ರರನ್ನೆಲ್ಲ ಸಮಾಧಾನ ಪಡಿಸುವಂತೆ ನಡೆಯತಕ್ಕುದು. ಮಹಾಪಾತ್ರರ ಮೋಸದ ಪರಿಣಾಮವಾಗಿ ನಾವು ಹೀಗೆ ಮಾಡಿದೆವೆಂದರೆ, ಅದರಿಂದ ದುಷ್ಪರಿಣಾಮವಾದೀತು. ಹೇಗೂ ಸನ್ಮಾನ್ಯವಾದ ಸಂಧಿ ಸಂಭವಿಸುವುದೆಂದು ನನಗೆ ನಂಬುಗೆಯಾಗಿದೆ.

ಇಂತಹ ಸಮಯದಲ್ಲಿ ಮಹಾಪಾತ್ರರ ಮನಗಳನ್ನು ಕಲುಷಿತ ಮಾಡುವುದು ತೀರಾ ಅಯೋಗ್ಯವು ಆದರಿಂದ ಇಂದಿಲ್ಲ ನಾಳೆಯಾದರೂ ಕಲಿಂಗ ನಾಡಿಗೆ ಘಾತವಾಗದಿರಲಿಕ್ಕಿಲ್ಲ ಬಹಳ ದಕ್ಷತೆ ವಹಿಸಬೇಕು. ತಿಳಿಯಿತೇ ಮಂತ್ರಿಗಳೆ?' ಗಜಪತಿ ಮಾತನಾಡಿದನು

'ಅಹುದು ಮಹಾರಾಜ, ಹಾಗೆಯೇ ಮಾಡುವೆನು.' ಮಂತ್ರಿಯುತ್ತರವಿತ್ತನು.

'ಆಗಲಿ, ಬೇಗನೆ ನಿಮ್ಮ ಉದ್ಯೋಗಕ್ಕೆ ತೊಡಗಿರಿ ನಾನಿಲ್ಲಿ ಬೇರೆ ಕಾರ್ಯ ಕೈಕೊಳ್ಳಬೇಕಾಗಿದೆ. ಯುದ್ಧದ ಭೀಕರತೆಯಿಂದ ಆಕೆಯ ಮನ ತಳಮಳಿಸುತ್ತಲಿದ್ದಿತು ಭೀಕರ ಹತ್ಯೆಯ ಸಲುವಾಗಿ ಆಕೆ ಅಂಜುತ್ತಿದ್ದಳು. ನಾಡನ್ನು ಭಯಂಕರವಾಗಿ ನಷ್ಟಕ್ಕೀಡುಮಾಡುವ ಯುದ್ಧದ ವಿಷಯವಾಗಿ ಆಕೆ ಬಹಳ ಚಡಪಡಿಸುತ್ತಲಿದ್ದಳು ಸಂಧಿಗಾಗಿ ಯತ್ನಿಸಲು ನನಗೆ ಹಲವು ಸಲ ಬಿನ್ನವಿಸಿರುವಳು. ನನ್ನ ಮೂರ್ಖತನದ ಪರಿಣಾಮವಾಗಿ ನಾನಾ ಕೋಮಲ ಬಾಲಿಕೆಯ ಮನ ನೋಯಿಸಬೇಕಾಗಿದ್ದಿತು ಇಂದು ನನ್ನ ಕಣ್ಣು ತೆರೆದಿವೆ ನಾನೀ ವಿಚಾರಗಳಿಂದ ಆ ಮಗುವಿನ ಮನವನ್ನು ತೋಷಿಸುವೆನು ನೀವು ಹೋಗುವುದಾವಾಗ?' ಅರಸನಂದನು.

'ಮಧ್ಯಾಹ್ನದ ಊಟ-ಉಪಚಾರ ಪೂರಯಿಸಿ, ಸಾಯಂಕಾಲದ ಸಮಯಕ್ಕೆ ಹೋಗುವೆನು.' ಮಂತ್ರಿಯುತ್ತರವಿತ್ತನು.

'ಹಾಗೆಯೇ ಮಾಡಿರಿ. ಹೋಗುವುದಕ್ಕೆ ಮೊದಲು ಇನ್ನೊಂದು ಸಲ ನನ್ನನ್ನು ಕಾಣುವಿರಲ್ಲವೆ?' ಗಜಪತಿ ಕೇಳಿದನು

'ಕಾಣುವೆನು.' ಮಂತ್ರಿಯುತ್ತರವಿತ್ತನು.



## ೧೩ ಭಪ್ಪರೇ ಅಪ್ಪಾಜಿ!

ಅಂದು ಜಗನ್ಮೋಹಿನಿಗೆ ಅತ್ಯಂತ ಹರುಷವಾಗಿದ್ದಿತು ತನ್ನ ಮನದಿಚ್ಛೆ ಪೂರೈಸುವ ಸಮಯ ಸಂಧಿಸಿದಾಗ್ಗೆ ಯಾರಿಗೆ ತಾನೆ ಆನಂದವೆನಿಸಲಿಕ್ಕಿಲ್ಲ? ಕಲಿಂಗ-ಕರ್ನಾಟಕಗಳ ಮೈತ್ರಿಗಾಗಿ, ತನ್ಮೂಲಕ ಎರಡೂ ರಾಷ್ಟ್ರಗಳ ಉನ್ನತಿಗಾಗಿ, ತಾನು ಮೊದಲಿನಿಂದ ಯತ್ನಿಸುತ್ತಲಿದ್ದುದು, ಮನಃಪೂರ್ವಕ ಬಯಸುತ್ತಲಿದ್ದುದು, ಪ್ರತಿದಿನ ಪರಮಾತ್ಮನಿಗೆ ಪ್ರಾರ್ಥಿಸುತ್ತಲಿದ್ದುದು ಅಂದು ಫಲಿಸುವ ಕಾಲಪ್ರಾಪ್ತವಾದುದಕ್ಕೆ ಆಕೆ ಪರಮೇಶ್ವರನನ್ನು, ಶ್ರೀಜಗನ್ನಾಥನನ್ನು ಪರಮ ಪ್ರೀತಿಯಿಂದ ಪ್ರಾರ್ಥಿಸುತ್ತಲಿದ್ದಳು. ಕಲಿಂಗ ರಾಜ್ಯದಭಿವೃದ್ಧಿ ಹೇತುವಿನಲ್ಲಿಯೇ ತನ್ನದೊಂದು ಮನೋಭಿಲಾಷೆ ಅಡಕವಾಗಿದ್ದಿತು. ತನ್ನ ಹೃದಯದಲ್ಲಿ ಬೆಳೆದ ಪ್ರೇಮಲತೆಯನ್ನು ತನ್ನ ಪ್ರಿಯಸಖಿಯನ್ನುಳಿದು ಇನ್ನಾರಿಗೂ ತಿಳಿಯದಂತೆ ಪಾಲಿಸುತ್ತಲಿದ್ದಳು ಪ್ರೇಮಲತೆ ಅಂದು ಜಗನ್ನಾಥನ ಸನ್ನಿಧಾನದಲ್ಲಿ ಹುಟ್ಟಿದುದು ಅಂತರ್ಜಗದಲ್ಲಿ ಬೆಳೆಯುತ್ತಲೆ ನಡೆದು, ಅವಶ್ಯಕವಾದ ನೀರು-ಗೊಬ್ಬರಗಳನ್ನು ಸಂಪಾದಿಸಿ ಬಹಳವಾಗಿ ಬೆಳೆದಿದ್ದಿತು. ತನ್ನ ಪಚ್ಚೆದೆಲೆ, ಬಂಗಾರದದೇಟು, ರನ್ನಗುಡಿಗಳಿಂದ ಕಮನೀಯವಾಗಿ ಹಬ್ಬುತ್ತಲಿದ್ದಿತು. ತನ್ನಾ ಅಮೋಘವಾದ ಪ್ರೇಮಲತೆಗೆ ಇನ್ನಾರಾದರೂ ಕೈಹಚ್ಚಬಹುದೆಂದು ಬಹು ದಕ್ಷಳಾಗಿ ಕಾಯುತ್ತಲಿದ್ದಳು. ನೀರಿಲ್ಲದೆ ಗೊಬ್ಬರದಿಂದ ಬಹಳವಾಗಿ ಕರಗಬಹುದೆಂದೂ ಬಹಳ ಜಾಗರೂಕತೆ ವಹಿಸುತ್ತಲಿದ್ದಳು. ಅದುವರೆಗೆ ಅದನ್ನು ಬೆಳೆಯಿಸಲು ಬಹಳವಾಗಿ ಯತ್ನಿಸಿದ್ದರಿಂದ ಮುಂದಾದರೂ ಅದು ನಿತ್ಯವೂ ಬೆಳೆಯುತ್ತಲೆ ಹೋಗಿ, ಕೊನೆಯವರೆಗುಳಿಯಬೇಕೆಂದು ಆಕೆಯ ಮನದಿಚ್ಛೆಯಿದ್ದಿತು. ಅದುವರೆಗೆ ಆಕೆಗೆ ಆಶೆ ಆಳವಾಗಿರಲಿಲ್ಲ. ಮೇಲೆ ಮೇಲೆ ಹಲವು ಸಲ ಬಲುಮೆಯಂತೆ ಕಾಣಿಸಿದರೂ, ಅಂತರಂಗದಲ್ಲಿ ನಿರಾಶೆಯ ಕಿರಣವೊಂದು ಮೂಡದಿರಲಿಲ್ಲ; ಆದರೆ ಅಂದು ತಂದೆ ಸಂಧಿಗಾಗಿ ಸಮ್ಮತಿಸಿದುದನ್ನು ಕಂಡು ಹರ್ಷಗೊಂಡಳು. ಅಂತರಂಗದ ಪ್ರೇಮಲತಿಕೆ ಮೌಕ್ತಿಕದ ಉತ್ಕೃಷ್ಟ ಪುಷ್ಪಗಳಿಂದ ಬೆಳಗಹತ್ತಿತು. ಕಮನೀಯವಾದಾ ಸುಮನಗಳ ಸುಮನೋಹರ ಸುವಾಸದಿಂದ ಶರೀರವೆಲ್ಲವೂ ಕಂಪಿಸಹತ್ತಿತು. ಅಮೃತಮಯ ಫಲಗಳು ತನ್ನಾ ಪ್ರೇಮಲತಿಕೆಯಲ್ಲಿ ತೂಗಬೇಕೆಂದೇ ಆಕೆಯ ಕೊನೆಯಾಶೆ. ಆದರೂ ತನ್ನಾ ಆಶೆಗೆ ಯಾರಾದರೂ ಮೋಸ ಮಾಡಬಹುದೆಂಬ ಭೀತಿಯೂ ಇಲ್ಲದಿರಲಿಲ್ಲ. ... ಕರ್ನಾಟಕದರಸು ಸಂಧಿಗೆ ಸಮ್ಮತಿಸದಿದ್ದರೆ-ಇಲ್ಲವೆ ತಮ್ಮ

ತಂದೆಗೆ ಅಪಮಾನಕರವಾದ ಶರ್ತುಗಳನ್ನು ಹಾಕಿ ತಂದೆಯೇ ಒಪ್ಪಂದಕ್ಕೆ ಒಪ್ಪದಿದ್ದರೆ-ಆಗ್ಗೆ ಬಹು ಕಠಿಣ ಪರಿಸ್ಥಿತಿ ಪ್ರಾಪ್ತವಾಗಬಹುದಲ್ಲದೆ-ತಾನು ಬಹಳ ದಿನಗಳಿಂದ ಪಾಲಿಸಿ, ಪೋಷಿಸಿ, ವರ್ಧಿಸಿದ ಪ್ರೇಮಲತೆ ಕಮರಿ ಹೋಗಬಹುದು. ಆಗ್ಗೆ ತನ್ನಾ ಅಂತರ್ಜಗವು ಶೋಭಾಹೀನವಾಗಿ-ತನ್ಮೂಲಕ ಅಮಂಗಳವಾಗಿ ತೋರಬಹುದು ..........' ಇತ್ಯಾದಿ ಶಂಕೆಗಳೂ ಆಕೆಗೆ ಬಾರದಿರಲಿಲ್ಲ.

ಕರ್ನಾಟಕದೊಡೆಯ ಇಂತಹ ಸಮಯದಲ್ಲಿ ತನ್ನ ಉದಾರ ವರ್ತನೆಗೆ ಯೋಗ್ಯವಾಗಿಯೇ ವರ್ತಿಸುವನೆಂದು ಆಕೆಗೆ ಭರವಸೆ ಇದ್ದಿತು; ಆದರೂ ಒಂದು ಶಂಕೆ ಇದ್ದೇ ಇದ್ದಿತು. ಅದಕ್ಕಾಗಿ ತಾನೇನಾದರೂ ಯತ್ನಿಸಲೇ ಬೇಕೆಂದು ಆಕೆ ಯೋಚಿಸಿದಳು. ಯತ್ನ ಮಾಡಬೇಕೆಂದು ಯೋಚಿಸಿದುದೇನೋ ಸರಿ, ಆದರೆ ಅದನ್ನು ಕೈಗೂಡಿಸುವುದೆಂತು? ಆಕೆ ಬಹಳವಾಗಿ ಯೋಚಿಸಿದಳು. ಒಂದೇ ಒಂದು ಉಪಾಯವೆಂದರೆ, ಶಶಿಲೇಖೆಯನ್ನು ಸಿಂಹಾದ್ರಿಗೆ ಕಳುಹಿ, ಅಪ್ಪಾಜಿಗೆ ಗಜಪತಿಯೊಡನೆ ಕೊಂಚ ಉದಾರವಾಗಿ ವರ್ತಿಸಬೇಕೆಂದು ಹೇಳಿ ಕಳುಹುವುದು. ಕೊನೆಗೊಮ್ಮೆ ಅದೇ ಯೋಗ್ಯವೆಂದು ನಿರ್ಧರಿಸಿದಳು.

'ಲೇಖೆ, ಇನ್ನೊಂದು ಸಲ ದೌತ್ಯ ಕೈಕೊಳ್ಳುವೆಯಾ?'

'ಈಗೆರಡು ಸಲ ಆಗಿದೆ; ಮೂರನೆಯ ಸಲ ಆಗಿಯಾದರೂ ಮುಕ್ತಾಯವಾಗಲಿ.'

'ಆ ಬಗ್ಗೆ ಯೋಚಿಸಬೇಡ; ಇದೇ ಕೊನೆಯ ಸಲವಾಗುವುದು.'

'ದೌತ್ಯ ಕನ್ನಡ ಶಿಬಿರಕ್ಕಷ್ಟೆ?'

'ಏಕೆ, ಅಲ್ಲಿ ಹೋಗಬೇಕೆನ್ನುವ ಉತ್ಸುಕತೆ ಬಹಳವೇನು?'

'ಉಂಟೆ? ಛೆ! ನಿನಗೆ ಕನ್ನಡ ಶಿಬಿರವೆಂದರೆ, ಅಲ್ಪವಾದರೂ ಉತ್ಸಾಹವಿದೆಯೇ? ಪಾಪ! ಏನೂ ಅರಿಯದವಳು.'

'ಹುಂ, ನೀನಾವಾಗ ಹೋಗುವೆ?'

'ಯಾವಾಗ ಹೋಗೆನ್ನುವೆಯೋ ಆವಾಗಲೆ.'

'ಇರಲಿ. ಲೇಖೆ, ನೀನು ಈಗ ಅಲ್ಲಿ ಹೋಗಬೇಕಾದುದೇಕೆ ಬಲ್ಲೆಯಾ?'

'ನೀನು ಹೇಳದಿದ್ದರೆ, ನನಗೆ ತಿಳಿಯುವುದೆಂತು?'

'ಇಲ್ಲಿನ ವಿದ್ಯಮಾನಗಳನ್ನೆಲ್ಲ ನೀನರಿತಿರುವೆ.'

'ಮಹಾರಾಜರು ಸಂಧಿಗೆಂದು ಸಿದ್ಧರಾದುದಲ್ಲವೆ?'

'ಅಹುದು. ನೀನು ಸಿಂಹಾದ್ರಿಗೆ ಹೋಗಿ, ಅಪ್ಪಾಜಿಯವರನ್ನು ಕಾಣ

ಬೇಕು. ಅಲ್ಲಿ ಅವರಿಗೆ 'ಕಲಿಂಗ ಜನತೆಯ ಮೇಲೆ ಕನಿಕರವಿಟ್ಟು, ಕಲಿಂಗ ರಾಜನಲ್ಲಿ ದಯದೋರಿ, ಕಲಿಂಗ-ಕರ್ನಾಟಕಗಳಲ್ಲಿನ ಮೈತ್ರಿ ಬೆಳೆಯಿಸುವ ದೃಷ್ಟಿಯಿಂದ ಯೋಗ್ಯವೆನಿಸಿದಂತೆ ವರ್ತಿಸಬೇಕು. ಇದುವರೆಗೆ ಕಲಿಂಗ ರಾಜ್ಯದ ಪ್ರಜೆಗಳಲ್ಲಿ ತೋರಿದ ಔದಾರ್ಯಕ್ಕೆ ಕೊಂಚವಾದರೂ ಕೊರತೆ ಯುಂಟಾಗದಂತೆ, ಕನ್ನಡಿಗರ ಕೀರ್ತಿ ಕೊನೆಯವರೆಗುಳಿಯುವಂತೆ, ಕನ್ನಡ ರಾಜನೌದಾರ್ಯ ಆಚಂದ್ರಾರ್ಕವಾಗುಳಿಯುವಂತೆ ವರ್ತಿಸಬೇಕೆಂದು ಹೇಳು. ಮುಂದೆ ಎರಡೂ ರಾಷ್ಟ್ರಗಳೈಕ್ಯದಿಂದಾಗಲಿರುವ ಅಮೃತಮಯ ಸುಮಧುರ ಸಮ್ಮೇಲನ ಸಾಧಿಸಲು ಸ್ವಾರ್ಥತ್ಯಾಗೈಕ್ಯ ದೃಷ್ಟಿಯನ್ನಿಟ್ಟು ಸಂಧಿಗೆ ಸಮ್ಮತಿಸಬೇಕೆಂದು ಸೂಚಿಸು ... . .. ..'

'ರಾಜಪುತ್ರಿ, ಇದೆಲ್ಲವೂ ಅನವಶ್ಯಕವೆಂದು ನನ್ನ ವಿಚಾರ.'

'ಏಕೆ?'

'ಕನ್ನಡರಾಜರಾದರೂ ಸಂಧಿಗೆ ಆತುರರೇ ಆಗಿರುವರು.'

'ಹೇಗೆ ಹೇಳು?'

'ಮೋಹಿನಿ ಮಂತ್ರದ ಪರಿಣಾಮವಾಗಿ ಅವರು ಮೂಢರೇ ಆಗಿರುತ್ತಾರೆ. ಮೋಹಮುಗ್ಧರಾದ ಅವರು ಒಪ್ಪಂದಕ್ಕೆ ಒಪ್ಪಿಯೇ ಒಪ್ಪುತ್ತಾರೆ.'

'ಲೇಖೆ, ನೀನು ಹೇಳಿದ ಸಂಗತಿ ಸತ್ಯವಿರಬಹುದು; ಆದರೆ ಅಷ್ಟರಿಂದಲೆ ನಮ್ಮ ಹೇಳಿಕೆಯಂತೆ ವರ್ತಿಸುವರೆಂಬುದನ್ನು ಮಾತ್ರ ಮರೆತುಬಿಡು.'

'ಏಕೆ?'

'ಸಖಿ, ಅವರು ಸುಂದರರೂ ಸುಗುಣಿಗಳೂ ಇರುವಂತೆ, ಸಂಯಮಿಗಳೂ ಇರುತ್ತಾರೆ. 'ಅಂದರೆ?'

'ಅಂದರೇನು? ಅವರು ದುರ್ಬಲ ಮನಸ್ಸಿನವರಿಲ್ಲ. ಹರಿಯುವ ತಮ್ಮ ಮನವನ್ನು ಬೇಕಾದ ಹಾಗೆ ಕಟ್ಟಿ ಹಾಕಬಲ್ಲರು.'

'ಇರಬಹುದು; ಆದರೆ ಇಲ್ಲಿ ಅದೇನು ಸಂಬಂಧ?'

'ಲೇಖೆ, ತಮ್ಮ ಸಾಮ್ರಾಜ್ಯ,-ರಾಷ್ಟ್ರಗಳಿಗೆ ಕೊಂಚವಾದರೂ ಕುಂದುಂಟಾಗಬಹುದಾದ ಸಮಯವಿದ್ದರೆ, ಅವರು ಎಂತಹ ಸ್ವಾರ್ಥವನ್ನಾದರೂ ತ್ಯಜಿಸಿ, ತಮ್ಮ ನಾಡಿನ ಕೀರ್ತಿ ಕಾಯ್ದುಕೊಳ್ಳುವರಲ್ಲದೆ ಅನ್ಯಥಾ ಆಚರಿಸಲೆಳಿಸುವವರಲ್ಲ.'

'ಛೆ! ಇದು ಮಾತ್ರ ಕಠಿಣ. ಇಂತಹರ ಸಂಗಡ ವ್ಯವಹರಿಸುವದೇ ಕಷ್ಟ.'

'ಇಲ್ಲ; ಲೇಖೆ, ಇಲ್ಲ. ಇಲ್ಲಿಯೇ ನೀನು ತಪ್ಪುತ್ತಲಿರುವೆ. ಪುರುಷ

ರಲ್ಲಿನ ಈ ಗುಣವು ಸಕಲರಿಗೂ ಆದರಣೀಯವಾಗಿದೆ. ಸಂಯಮಿಯಾದ ಪುರುಷನಿಂದ ಎಂತಹ ಶ್ರೇಷ್ಠಕಾರ್ಯಗಳಾದರೂ ಕೈಗೂಡುತ್ತವೆ. ಅದೊಂದಿಲ್ಲದೆ ಇನ್ನೇನಿದ್ದರೂ ವ್ಯರ್ಥವೇ. ಸಂಯಮನವಿಲ್ಲದ ಪುರುಷನಿಂದ ಯಾವ ಉಚ್ಚ ಕಾರ್ಯಗಳೂ ಕೈಗೂಡಲಾರವು. ಲೇಖೆ, ಪ್ರತಿಯೊಬ್ಬ ಸುಸಂಸ್ಕೃತ ಸ್ತ್ರೀಯಳು ಪುರುಷನಲ್ಲಿನ ಸಂಯಮನವನ್ನು ನೋಡಿ ನಲಿಯುತ್ತಾಳೆ, ನರ್ತಿಸುತ್ತಾಳೆ; ಸಂಯಮಿಯಾದ ಪುರುಷನ ಜೊತೆ ಸೇರಲು ಆತ್ಯಾನಂದ ಪಡುತ್ತಾಳೆ; ಅಂತಹನ ಸೇವೆ ಕೈಕೊಳ್ಳಲು ಹೆಮ್ಮೆಯಿಂದ ಮುಂಬರುತ್ತಾಳೆ.'

'ರಾಜಪುತ್ರಿ, ನಿನ್ನ ಮಾತು ನಿಜವಿದೆ. ಈಗ ನಾವು ಮಾಡುವುದೇನು?'

'ನಮ್ಮ ಮಂತ್ರಿಗಳು ಅಲ್ಲಿಗೆ ಇಂದು ಸಾಯಂಕಾಲಕ್ಕೆ ಹೋಗಲು ನಿಶ್ಚೈಸಿರುತ್ತಾರೆ. ನೀನು ಆ ಪೂರ್ವದಲ್ಲಿ ಹೋಗಿ ಇಷ್ಟು ಸೂಚನೆಗಳನ್ನಿತ್ತು ಬಾ. ಮುಂದೆ ಶ್ರೀ ಜಗನ್ನಾಥ ಮಾಡಿಸಿದುದಾಗಲಿ.'

ಶಶಿಲೇಖೆ ತನ್ನ ಸಿದ್ಧತೆ ಮಾಡಿಕೊಂಡು ಸಿಂಹಾದ್ರಿಗೆ ಹೊರಟಳು. ಮನಸ್ಸು ಆನಂದದ ವಿಚಾರಗಳಲ್ಲಿ-ತನ್ನ ಮನೋವಲ್ಲಭನನ್ನು ಕಾಣುವ-ಸುಂದರ ಸನ್ನಿವೇಶ ಸಂಧಿಸಿದುದನ್ನು ನೆನೆದು, ಆಕೆ ಪುಲುಕಾಂಕಿತಳಾದಳು. ತನ್ನ ಮನೋರಮಣ ತಾನು ಸಿಂಹಾಚಲಕ್ಕೆ ತಲುಪುವ ಸಮಯ ಎಲ್ಲಿರಬಹುದು? ಆತ ಮಾತನಾಡಿಸಿದರೆ, ಹೇಗೆ ಮಾತನಾಡಬೇಕು? ಅವನು ಏನು ಪ್ರಶ್ನೆ ಕೇಳಬಹುದು? ತನ್ನನ್ನು ಸ್ವೀಕರಿಸುವ ವಿಷಯಕವಾಗಿ ಮಾತೆತ್ತಿದರೆ, ಹೇಗೆ ವರ್ತಿಸಬೇಕು? . ಇತ್ಯಾದಿ ಮನೋರಮವಾದ ವಿಚಾರಗಳಲ್ಲಿ ಮಗ್ನಳಾಗಿ ಇಕ್ಕೆಲಗಳನ್ನೀಕ್ಷಿಸದೆ ಆನಂದತುಂದಿಲಳಾಗಿ ಹೊರಟಿದ್ದಳು. ಬಿಸಿಲು ಪ್ರಖರವಾಗಿದ್ದರೂ ಅತ್ತ ಲಕ್ಷ್ಯವೇ ಇರಲಿಲ್ಲ 'ಸೂರ್ಯೋ ಹಿಮಕರಾಯತೆ' ಎಂಬ ಮಾತು ಆಕೆಗೆ ಸಂಪೂರ್ಣವಾಗಿ ಅನ್ವಯಿಸುವಂತಿದ್ದಿತು.

ಹೀಗೆ ಆಕೆ ಸಿಂಹಾದ್ರಿಯನ್ನು ಪ್ರವೇಶಿಸಿ ರಾಜಶಿಬಿರದತ್ತ ಮುಂದೊರೆದಳು. ಕಾರ್ಯಾಂತರದಿಂದ ಹೊರ ಹೋಗಿದ್ದ ರಾಮಲಿಂಗನೂ ಆಕಸ್ಮಿಕವಾಗಿ ಆಕೆಗೆ ಕೊಂಚ ಹಿಂದೆ ಬಂದನು. ಮುಂದೆ ಹೋಗುವ ಶಶಿಲೇಖೆಯನ್ನು ನೋಡಿ ಅವನಿಗೆ ಅತ್ಯಂತ ಹರ್ಷವಾಯಿತು. ಅವನು ಲಗುಬಗೆಯಿಂದ ಮುಂಬಂದು, 'ಶಶಿಲೇಖಾ' ಎಂದು ಬಹು ಮೆಲ್ಲನೆ, ಆದರೆ ಆಕೆಗೆ ಕೇಳುವಂತೆ ಕೂಗಿದನು.

ಶಶಿಲೇಖೆ ಬೆಚ್ಚಿಬಿದ್ದಳು. ತನ್ನ ಮನೋವಲ್ಲಭನ ಕಮನೀಯ ರೂಪು ಮನದಣೀ ನಿರೀಕ್ಷಿಸುತ್ತ ಅಂತರ್ಮುಖಳಾಗಿ ಮುಂದೆ ಸಾಗುತ್ತಲಿರುವಾಗ, ತನ್ನ ಮನದಲ್ಲಿದ್ದುದೇ ಮುಂಬಂದು ನಿಂತಂತಾಯಿತು. ಆಕೆಯ

ಣ್ಣು ರಾಮುಲಿಂಗನನ್ನು ನೋಡಲು ಆತುರವಾಗಿದ್ದವು. ಕಿವಿಗಳು ಅವನ ನಿದನಿಯನ್ನು ಕೇಳಲುತ್ಸುಕವಾಗಿದ್ದುವು ಮನದಲ್ಲಾ ಮನೋಹರ ಮೂರ್ತಿ ಕಿತ್ರಿಸುತ್ತ ಮುಂದೊರೆದಿರಲು, ತನ್ನ ಹೆಸರು ಕೂಗಿದುದು ಕೇಳಬಂದಿತು. ತನ್ನ ಮನೋಮೂರ್ತಿಯೇ ಎಂದು ಕಿವಿಗಳು ಆಗಲೆ ಗುರುತಿಸಿಬಿಟ್ಟುವು. ಮರಳಿ ನೋಡಬೇಕೆಂದು ಮನವು ತವಕಪಡುತ್ತಲಿದ್ದಿತು; ಆದರೆ ಲಜ್ಜೆ ಹಾಗೆ ಮಾಡಗೊಡಲಿಲ್ಲ ಅದೇ ಸಮಯಕ್ಕೆ ರಾಮುಲಿಂಗ ಮುಂಬಂದು.- ಶಶಿಲೇಖಾ, ಬಂದುದಾವಾಗ?" ಎಂದು ಕೇಳಿದನು.

'ಈಗ ಬಂದೆನು' ಶಶಿಲೇಖೆ ವೀಣಾನಾದಿತಸ್ವರದಲ್ಲಿ ಉತ್ತರವಿತ್ತಳು.

'ರಾಜಪುತ್ರಿಯವರು ಕುಶಲವಾಗಿರುವರೆ?" ರಾಮುಲಿಂಗ ಮರಳಿ ಪ್ರಶ್ನೆ ಮಾಡಿದನು.

'ಅಹುದು, ಕುಶಲರಾಗಿರುವರು.' ಶಶಿಲೇಖೆ ಉತ್ತರವಿತ್ತಳು.

ಹೀಗೆ ಕ್ಷೇಮ ಸಮಾಚಾರ ನಡೆಯುವ ಸಮಯಕ್ಕೆ ಅವರೀರ್ವರೂ ರಾಮುಲಿಂಗನ ಶಿಬಿರಕ್ಕೆ ತಲುಪಿದರು. ಒಳಗೆ ಹೋಗಿ ಕುಳ್ಳಿರುತ್ತಲೆ, ರಾಮು ಲಿಂಗನು ಬಂದ ಕಾರ್ಯವನ್ನು ಕುರಿತು ಪ್ರಶ್ನೆ ಮಾಡಿದನು:

'ಶಶಿಲೇಖಾ, ಬರಲು ಏನಾದರೂ ಕೆಲಸವಿದ್ದಿತೆ?'

'ಅಹುದು, ಅಂತೆಯೇ ಮಹಾಸೇನಾಪತಿಗಳಿಗೆ ತೊಂದರೆ ಕೊಡಬೇಕಾಯಿತು.'

'ಇಂತಹ ತೊಂದರೆ ಸದಾ ಸಂಭವಿಸಲಿ, ಎಂದು ಪರಮಾತ್ಮನಿಗೆ ನಿತ್ಯವೂ ಪ್ರಾರ್ಥಿಸುತ್ತಲಿದ್ದೇನೆ' 'ಅಂದರೆ?'

'ಅಂದರೇನು? ಹುಂ, ಇರಲಿ. ಬಂದ ಕಾರ್ಯವನ್ನು ವಿವರಿಸಬಹುದು. ನಾನೇನೋ ಶಕ್ಯವಿದ್ದಮಟ್ಟಿಗೆ ಸಹಾಯ ಮಾಡಲು ಸಿದ್ಧಸಿರುವೆನು.'

'ತಮ್ಮ ಯುಕ್ತಿ ಚನ್ನಾಗಿ ಸಾಧಿಸಿದೆ.' 'ಅಂದರೆ?'

'ತಾವು ಬಲರುದ್ರದೇವರ ಹೆಸರಿನಲ್ಲಿ ಕಳುಹಿದ ಉಪಾಯನಗಳು, ಕಲಿಂಗರಾಜರಲ್ಲಿ ಬಲವಾದ ಭೀತಿಯನ್ನುಂಟುಮಾಡಿವೆ.'

'ಆಂ, ಹೀಗೋ? ಆದು ನಮ್ಮ ಅಪ್ಪಾಜಿಯವರ ಯುಕ್ತಿ. ಮಂತ್ರಿಗಳು ಅದನ್ನು ಅಷ್ಟು ನಂಬಿರಲಿಕ್ಕಿಲ್ಲ!'

'ಇಲ್ಲ. ಅವರು ಮೋಸದ್ದೆಂದೇ ಸಾಧಿಸಿದರು; ಆದರೆ ಮಹಾ ರಾಜರು ಏನಾದರೂ ಒಪ್ಪಲಿಲ್ಲ.' 'ಹುಂ, ಮುಂದೆ?'

'ಮಹಾರಾಜರು ಯುದ್ಧಮಾಡುವದನ್ನು ನಿಲ್ಲಿಸಿರುವರು.'

ಮುಂದೇನು ಮಾಡಬೇಕೆನ್ನುವರು?"

'ಸಂಧಿಗೆ ಬಿನ್ನವಿಸಬೇಕೆಂದು ನಿರ್ಧರಿಸಿರುವರು.'

'ಹಾಗಾದರೆ ಸಂದಿಗೆ ಸಮ್ಮತಿಸಿರುವರೇ?'

'ಅಹುದು. ಇಂದು ಸಾಯಂಕಾಲಕ್ಕೆ ನಮ್ಮ ಮಹಾಮಂತ್ರಿಗಳು ತಮ್ಮ ಬಳಿಗೆ ಬರಲಿರುವರು.'

'ಶಶಿಲೇಖಾ, ನಿಜವಾಗಿಯೂ ಇದು ಅತ್ಯಾನಂದದ ವಾರ್ತೆಯು. ಮೊದಲಿನಿಂದಲೂ ಯುದ್ಧವನ್ನು ತಡೆಯಬೇಕೆಂದು ಅದೆಷ್ಟೋ ಯತ್ನಿಸಿದೆವು; ಅಶಕ್ಯವಾಯಿತು. ಇನ್ನು ಮುಂದಾದರೂ ವೈರಭಾವ ತೊರೆದು, ಮೈತ್ರಿಯಿಂದಿರಬೇಕೆಂಬ ನಮ್ಮ ಬಯಕೆ ಬಲವಾಗಿದ್ದಿತು; ಆದರೆ ಇದು ವರೆಗೂ ನಮಗೆ ಸಾಧಿಸಿರಲಿಲ್ಲ. ಇಂದು ಈ ಸಂಧಿ ಸಂಧಿಸಿದುದಕ್ಕೆ ನಮಗೆ ಬಹಳ ಆನಂದವಾಗಿದೆ. ಇಂತಹ ಆನಂದಕರವಾರ್ತೆ ತಂದುದಕ್ಕೆ ನಾನು ನಿನಗೆ ಏನಾದರೂ ಬಹುಮಾನ ಕೊಡಬೇಕೆನ್ನುವೆನು. ಹೇಳು, ಶಶಿಲೇಖಾ, ನಿನಗೆ ಯಾವ ಬಹುಮಾನಬೇಕು?'

'ನನಗೆ ಬೇಕಾದ ಬಹುಮಾನವನ್ನು ಆ ಮೇಲೆ ಆಯ್ದುಕೊಳ್ಳುವೆನು. ಮೊದಲು ನಮ್ಮ ರಾಜಪುತ್ರಿ ಬಯಸುವ ಬಹುಮಾನವನ್ನಿತ್ತರೆ ಸಾಕು.'

'ಕನ್ನಡ ಸಾಮ್ರಾಜ್ಯವನ್ನೂ ಕರ್ನಾಟಕದ ವೀರ ನರಪತಿಗಳನ್ನೂ ಅವರಿಗೆ ಕಾಣಿಕೆಯಾಗಿತ್ತಿರಲು, ಅವರಿಗಿನ್ನೇನು ಕೊಡಲುಳಿದಿದೆ? ರತ್ನಾಕರನಿಗೆ ರತ್ನಗಳ ಕಾಣಿಕೆಯೆ? ಕಾಸಾರಕ್ಕೆ ಕಮಲದರ್ಪಣವೇ? ಅಮೃತರುವಿಗೆ ಫಲವನ್ನೀಯುವುದೆ?'

'ಅಹುದು. ಸೇನಾಪತಿಗಳೇ, ಅಂತಹದೇ ಸಮಯ ಸನ್ನಿಹಿತವಾಗಿದೆ'

'ಅಂತಹ ಮಹಾಭಾಗ್ಯ ಲಭಿಸಿದರೆ ನಾನು ಅತೀವ ಧನ್ಯನೆಂದು ಭಾವಿಸುವೆನು ಕಲಿಂಗ ರಾಜಪುತ್ರಿಯವರೆಂದರೆ, ಕರ್ನಾಟಕದ ರಾಜಮಹಿಷಿಯವರು.'

'ಅನಿಶ್ಚಿತ ಭವಿಷ್ಯದ ಬಗ್ಗೆ ಈಗಲೆ ಹೇಗೆ ಹೇಳುವಿರಿ?'

'ಸಾಮಾನ್ಯರಿಗೆ ಅನಿಶ್ಚಿತವಾಗಿದ್ದರೂ ಎಲ್ಲರಿಗೂ ಅನಿಶ್ಚಿತವಲ್ಲ.'

'ಅದೇನೋ ಸರಿಯೆ; ಆದರೆ ಹೀಗೆ ಹೇಳಿದವರಾರು?'

'ನಮ್ಮ ಅಪ್ಪಾಜಿಯವರು.'

'ಮಹಾಮಂತ್ರಿ ಅಪ್ಪಾಜಿಯವರೆ? ಅವರು ಹೇಳಿದರೊ? ಒಂದು ಸಲವಾದರೂ ಅವರು ನಮ್ಮ ರಾಜಪುತ್ರಿಯನ್ನು ಕಂಡಿರುವದಿಲ್ಲವಲ್ಲ!'

'ಜಗನ್ಮೋಹಿನೀ ದೇವಿಯವರನ್ನು ಕಂಡು, ಅವರ ಹಸ್ತವನ್ನು ನಿರೀಕ್ಷಿಸಿ, ಮನಗಂಡು ಬಂದಿರುವರು.'

'ಅದಾವಾಗ? ನಾನು ರಾಜಪುತ್ರಿಯನ್ನಗಲಿ ಇರುತ್ತಲೇ ಇದ್ದಿಲ್ಲ. ನನಗೆ ತಿಳಿಯದೆ ಅವರು ಹೇಗೆ ನೋಡಿದರು?'

'ನೀನಿರುವಾಗಲೆ ಬಂದಿದ್ದರು.'

'ಆಂ. ನಾನಿರುವಾಗಲೆ? ಛೆ! ತೀರಾ ಸುಳ್ಳು. ನನಗೆ ಅಂತಹ ಮರುವು ಇದ್ದಂತಿಲ್ಲ. ಅಪ್ಪಾಜಿಯವರು ಬಂದು ರಾಜಪುತ್ರಿಯನ್ನು ಕಂಡಿದ್ದರೆ, ನನಗೆ ಸ್ಮರಣೆಯುಳಿಯುತ್ತಲಿರಲಿಲ್ಲವೆ?'

'ಸ್ಮರಣೆಯೂ ಇದೆ' 'ಛೆ! ಇದೇನು ಒಗಟು?'

'ಒಗಟೂ ಅಲ್ಲ, ಏನೂ ಅಲ್ಲ ಎಲ್ಲವೂ ಸ್ಪಷ್ಟವೇ ಇದೆ.'

'ಅದೇನು, ಹೇಳಿರಿ ನೋಡುವಾ?'

'ನಿಮ್ಮಲ್ಲಿ ಜೊಯಿಸನೋರ್ವ ಬಂದಿರಲಿಲ್ಲವೆ?'

'ಭಪ್ಪರೆ, ಅಪ್ಪಾಜಿ! ನಿಜವಾಗಿಯೂ ಚತುರರು. ಊಂ, ಕಿಂಚಿತ್ತಾದರೂ ಸುಳುವು ತಿಳಿಯಗೊಡಲಿಲ್ಲ ಅವರೇನು ಹೇಳಿದರು?'

'ಕರ್ನಾಟಕ ಸಾಮ್ರಾಜ್ಞಿಪದವಿಗೆ ಅವರು ತೀರಾ ತಕ್ಕವರಿರುವರೆಂದು ಹೇಳಿದರಲ್ಲದೆ, ಅಂತಹ ಸಾಮ್ರಾಜ್ಞಿಯ ಮೂಲಕವಾಗಿ ಕರ್ನಾಟಕ ಸಾಮ್ರಾಜ್ಯವು ಘನತೆಗೇರುವುದೆಂದು ನಿಶ್ಚಿತವಾಗಿ ಹೇಳಿರುವರು.'

'ಆಗಲಿ. ದೈವೀಯೋಜನೆ ಹೇಗಿದೆಯೋ ನೋಡೋಣ'

'ಶಶಿಲೇಖಾ, ಕಲಿಂಗ ರಾಜಪುತ್ರಿಯವರು-ಕರ್ನಾಟಕದ ಭಾವೀ ಸಾಮ್ರಾಜ್ಞಿಯವರು-ಏನೆಂದು ಆಜ್ಞೆಮಾಡಿರುವರು?'

'ಸೌಹಾರ್ದ ದೃಷ್ಟಿಯಿಂದ ಸಂಧಿ ಸಂಧಿಸಬೇಕೆಂದು.'

'ಈ ಬಗ್ಗೆ ಅವರಿಗೆ ಸಂದೇಹವೇಕೆ ಬಂದಿತು?'

'ಸಂದೇಹವೇ? ಛೆ! ಎಂದಿಗೂ ಇಲ್ಲ ಹಾಗೆ ಕನ್ನಡಿಗರ ಬಗ್ಗೆ ಅವರಿಗೆ ಸಂದೇಹವೆನಿಸಿದ್ದಲ್ಲಿ ಅವರು ಬಿನ್ನಹಕ್ಕೆ ಅವಕಾಶವನ್ನೇ ಕೊಡುತ್ತಲಿರಲಿಲ್ಲ. ಕನ್ನಡ ಸಮ್ರಾಟರ ಔದಾರ್ಯದ ವಿಷಯಕವಾಗಿ ಅವರಿಗೆ ಪೂರ್ಣ ಮನವರಿಕೆಯಾಗಿದೆ. ಅಂತೆಯೇ ಅವರು ಹೀಗೆ ಬಿನ್ನವಿಸಿಕೊಳ್ಳಬೇಕಾಯಿತು'

'ಆಗಲಿ. ಅವರು ಹೇಳಿದುದಾದರೂ ಏನು?'

"'ಕಲಿಂಗ ರಾಜರು ಸೋಲಿನಪಮಾನದಿಂದ ಮನನೊಂದವರು. ಹಿಂದೆ ಒಂದು ಸಲವೇಕೆ, ಹಲವು ಸಲ ಕರ್ನಾಟಕ ಸಾಮ್ರಾಜ್ಯಕ್ಕೆ ದಾಳಿಯಿಕ್ಕಿದ, ಆ ಮೇಲೆ ಕರ್ನಾಟಕ ಸಾಮ್ರಾಜ್ಯದ ನಾಶಕ್ಕಾಗಿ ಮಹಮ್ಮದೀಯರೊಡನೆ ಹೂಡಿದ ಗುಪ್ತ ಕಟಕ್ಕಾಗಿ ಅವರು ಮನಸ್ಸಿನಲ್ಲಿ ಯಾವಾಗಲೂ ತಳಮಳಿಸುತ್ತಲಿರುವರು ಮೊದಲೇ ಮನನೊಂದ ಅವರ ಮನ ನೋಯಿಸಬಾರ

ದೆಂಬು ಅವರು ಬಹಳವಾಗಿ ಹೇಳಿರುವರು. ಇದಲ್ಲದೆ ಕೆಳಗೆ ಬಿದ್ದವರನ್ನು ಕೈ ಹಿಡಿದು ಕರೆದುಕೊಳ್ಳುವುದು ವಿಜಯೀ ವೀರರ ಕರ್ತವ್ಯವು. ಅದೇ ಅವರ ನಿಜವಾದ ಪೌರುಷವು. ಕನ್ನಡ ಸಮ್ರಾಟರು ಇದನ್ನೆಂದೂ ಮರೆ ಯುವುದಿಲ್ಲವೆಂದು ಅವರು ಬಲ್ಲರು; ಆದರೂ ಜನ್ಮದಾತೃ ತಂದೆಯ ಮೇಲಿನ ಶ್ರದ್ಧೆಯಿಂದ, ಮಾತೃಭೂಮಿಯಾದ ಕಲಿಂಗ ನಾಡಿಗಾಗಿ ಸಲ್ಲಿಸಲಿದ್ದ ಕರ್ತ ವ್ಯದ ದೃಷ್ಟಿಯಿಂದ ಹೀಗೆ ಮಾಡಬೇಕಾಯಿತೆಂದು ಅವರು ಹೇಳಿರುವರು."

ಧನ್ಯ! ಶಶಿಲೇಖಾ, ಇಂತಹ ಸ್ತ್ರೀರತ್ನಕ್ಕೆ ಜನ್ಮವಿತ್ತ ಕಲಿಂಗ ನಾಡೇ ಧನ್ಯವು!! ಇಂತಹ ಉಜ್ವಲ ದೇವಿಯನ್ನು ಮಾತೆಯಾಗಿ ಪಡೆಯಲಿರುವ ನಾವೇ ಧನ್ಯರು!!! ಶಶಿಲೇಖಾ, ಇಗೋ, ನಾನು ವಚನವೀಯುತ್ತೇನೆ, ರಾಜಪುತ್ರಿಯವರಿತ್ತ ಆಜ್ಞೆಯಂತೆ ವ್ಯವಹರಿಸಲು ನಾನು ಶಕ್ತಿಮೀರಿ ಯತ್ನಿಸಿ, ಕರ್ನಾಟಕ-ಕಲಿಂಗಗಳು ಪ್ರೇಮರಜ್ಜುವಿನಿಂದ ಬಂಧಿಸುವಂತೆ ಮಾಡುತ್ತೇನೆ.'

'ಹಾಗಾದರೆ ನಾನಿನ್ನು ಹೊರಡಬಹುದೆ?'

'ಓಹೋ! ಒಳ್ಳೇ ಆನಂದದಿಂದ ಹೊರಡಬಹುದು. ನಮ್ಮ ರಾಜರು ಬಹಳ ದಯಾವಂತರು. ಅವರೆಂದೂ ಕಠೋರವೃತ್ತಿ ಸ್ವೀಕರಿಸಿ ಜನತೆಯ ಮನ ನೋಯಿಸುವದಿಲ್ಲ'

'ಬಹಳ ಒಳಿತಾಯಿತು. ಇಂದು ನಿಜವಾಗಿಯೂ ನಾನು ಬಹಳ ಆನಂದಿತಳಾಗಿರುವೆನು. ಈ ರೀತಿ ಆಶ್ವಾಸನವಿತ್ತುದಕ್ಕೆ ನಾನು ಸೇನಾಪತಿ ಗಳಿಗೆ ಬಹಳ ಋಣಿಯಾಗಿರುವೆನು. ಉಪಕಾರದಲ್ಲಿ ಅಲ್ಪವನ್ನಾದರೂ ತೀರಿ ಸುವ ಸಂಧಿ ದೊರೆತರೆ, ನಾನು ಅತೀವ ಧನ್ಯಳಾಗುವೆನು.'

'ಅದಾದರೂ ಬೇಗನೆ ಬರಬಹುದು.'

'ಬೇಗನೆ ಬರುವದೆ?'

'ಅಹುದು. ಅಲ್ಪಾವಧಿಯಲ್ಲಿಯೆ?' 'ಅದೇನು?'

'ಈ ಕರ್ನಾಟ-ಕಲಿಂಗ ರಾಷ್ಟ್ರಗಳನ್ನು ಕಟ್ಟಲು, ರಾಜಮನೆತನಗಳ ಲ್ಲೈಕ್ಯ ಸಂಪಾದಿಸಲು ಕಲಿಂಗ ರಾಜಪುತ್ರಿಯವರೇ ಕಾರಣರಾಗುವರು.....'

'ಅಹುದು. ಹಾಗೆ ರಾಜಪುತ್ರಿಯ ಇಚ್ಛೆಯಿದೆ.'

'ಹಾಗೆಯೇ ಮತ್ತೆ ಕರ್ನಾಟಕ ಸೇನಾಪತಿಗೋರ್ವ ಜೊತೆಗಾತಿ ಬೇಡವೆ?'

'ಬೇಕಾಗಬಹುದು. ಅದಕ್ಕೆ ನಾನು ಮಾಡಬೇಕಾದುದೇನು?'

'ಅದೇ ಕಾರ್ಯ ನೀನು ಮಾಡಬೇಕು.'

'ಜೊತೆಗಾರ್ತಿಯನ್ನಾರಿಸುವದೆ?'

''ಅಲ್ಲ' 'ಹಾಗಾದರೆ?'

'ಜೊತೆಗಾರ್ತಿಯಾಗುವದು. ಶಶಿಲೇಖೆ, ನಿಜವಾಗಿಯೂ ನಾನು ನಿನ್ನಲ್ಲಿ ನುರಕ್ತಳಾಗಿರುವೆನು. ನನ್ನನ್ನು ವಿವಾಹವಾಗಿ, ನನ್ನ ಹೃದಯ ರಾಣಿಯಾಗುವೆಯಾ?

ಹೀಗೆ ಬಹಳ ವೇಳೆ ಅವರೀರ್ವರೂ ತಮ್ಮ ಪ್ರೇಮಾಲಾಪಗಳಲ್ಲಿ ತೊಡಗಿ ಕುಳಿತಿದ್ದರು. ಸಾಯಂಕಾಲ ಸಮೀಪಿಸಲು, ಶಶಿಲೇಖೆ ಮರಳಲಿದ್ದಳು. ರಾಮಲಿಂಗ ಪ್ರೇಮದಿಂದ ತನ್ನ ಭಾವೀ ಮನದನ್ನೆಗೆ ನಿರೋಪವಿತ್ತು, ಅಪ್ಪಾಜಿಯನ್ನು ಕಂಡನು. ಅಪ್ಪಾಜಿಗೆ ಸರ್ವ ಸಂಗತಿಯನ್ನೂ ನಿವೇದಿಸಿದನು. ಅವರೀರ್ವರೂ ಕೂಡಿ ಬಹಳ ವೇಳೆಯವರೆಗೆ ವಿಚಾರಿಸಿ, ಕೊನೆಗೆ ನರಪತಿಯನ್ನು ಕಾಣಲೆದ್ದರು.

ಸಂಧ್ಯಾಸಮಯವಾದುದರಿಂದ ನರಪತಿ ತನ್ನ ಸಾಯಾಹ್ನಿಕಕ್ಕೆ ತೊಡಗಿದ್ದನು ಅವರೀರ್ವರೂ ತಮ್ಮ ತಮ್ಮ ಸಾಯಾಹ್ನಿಕಗಳನ್ನು ಪೂರಯಿಸಿ ಅಲ್ಲಿಗೆ ಬಂದರು. ಅದೇ ವಿಷಯದ ಬಗ್ಗೆ ಚರ್ಚಿಸುತ್ತ ಕುಳಿತಿರಲು, ಚಾರನೋರ್ವನು ಕಲಿಂಗದ ಮಂತ್ರಿ ದಾಮೋದರಶರ್ಮ ಬಂದ ಸಂಗತಿಯನ್ನು ತಿಳಿಸಿದನು ಮೊದಲೇ ನಿರ್ಧರವಾದ ಮೇರೆಗೆ ಅಪ್ಪಾಜಿ ಆತನನ್ನು ಎದುರ್ಗೊಂಡು ಕರೆತರಲೆದ್ದನು.

ದಾಮೋದರಶರ್ಮ—ಕಲಿಂಗ ರಾಜ್ಯದ ಮಹಾಮಂತ್ರಿ,—ಬಾಗಿಲಲ್ಲಿ ನಿಂತಿದ್ದನು ಕೊಂಚ ಸಮಯ ಅವನು ಅತ್ತಿತ್ತ ನೋಡುತ್ತ ನಿಂತಿರಲು, ಅಪ್ಪಾಜಿ ಬಂದು 'ಕಲಿಂಗ ಮಂತ್ರಿಗೆ ಸುಸ್ವಾಗತವು,' ಎಂದು ನುಡಿದು, ನಗುಮುಖದಿಂದ ಸ್ವಾಗತಿಸಿದನು. ಈರ್ವರೂ ನರಪತಿ ಕುಳಿತಲ್ಲಿಗೆ ಹೋದರ .

'ಕಲಿಂಗ ಮಂತ್ರಿಗೆ ಶುಭಾಗಮನವು.' ಎನ್ನುತ್ತ ರಾಮಲಿಂಗ ಎದ್ದು ನಿಂತು ಸ್ವಾಗತಿಸಿದನು. ರಾಯನಾದರೂ ಹಸನ್ಮುಖನೊಡನೆ ಮಹಾಮಂತ್ರಿಗಳು ಬರಬೇಕು,' ಎಂದನು. ದಾಮೋದರಶರ್ಮನು ತನಗೆ ಯೋಗ್ಯ ಮನ್ನಣೆ ಸಿಕ್ಕಿದುದಕ್ಕೆ ಹೃಷ್ಟನಾದನು.

ನರಪತಿ:—ಕಲಿಂಗ ಮಂತ್ರಿಗಳಾಗಮನೋದ್ದೇಶವು ತಿಳಿದರೆ ಒಳಿತಾಗುವುದು. ರಾಯನೇ ಉಪಚಾರ ವಿಧಿಗಳೆಲ್ಲ ಕೊನೆಗಂಡ ನಂತರ ಮಾತಿಗೆ ಮೊದಲು ಮಾಡಿದನು.

ದಾಮೋದರಶರ್ಮ:—ಕರ್ನಾಟಕ ಸಿಂಹಾಸನಾಧೀಶ್ವರರಾದ ವೀರ ನರಪತಿಗಳೇ, ಕರ್ನಾಟಕದ ಸಾಮ್ರಾಜ್ಯ ಧುರಂಧರರಾದ ಮಹಾ ಮಂತ್ರಿ

ಗಳೇ, ಮತ್ತು ವೀರ ಸೇನಾಪತಿಗಳೇ, ಈ ದಿನ ನಾನು ಇಲ್ಲಿಗೆ ಬಂದ ಕಾರ್ಯ ಸೂಕ್ಷ್ಮವಾದುದು ತಾವೆಲ್ಲರೂ ಶಾಂತಚಿತ್ತರಾಗಿ ಅದನ್ನು ಕೇಳಿಕೊಂಡು ಸಮಾಧಾನವಾಗಿ ಸಮಾಲೋಚಿಸಬಹುದೆಂದು ನನ್ನ ನಂಬುಗೆಯಿದೆ.

ಅಪ್ಪಾಜಿ:—ಕಲಿಂಗ ಮಂತ್ರಿಗಳೇ, ವಿಜಯನಗರಾಧೀಶರು ಆವಾಗಲೂ ಇಂತಹ ಸನ್ನಿವೇಶಗಳಲ್ಲಿ ಉಚಿತ ರೀತಿಯಲ್ಲಿ ವರ್ತಿಸಿದ ಬಗ್ಗೆ ಇತಿಹಾಸ ಸಾರುತ್ತಲಿದೆ. ಆ ಬಗ್ಗೆ ತಾವು ನಿಶ್ಚಿಂತರಾಗಿ ತಮ್ಮ ಹೇಳಿಕೆ ಮುಂಡಿಸಬೇಕು

ದಾ:—ಚತುರಮಂತ್ರಿ ಶ್ರೀಮಾನ್ ಅಪ್ಪಾಜಿಯುವರ ಆಶ್ವಾಸನದಿಂದ ನನಗೆ ಆನಂದವಾಯಿತು. ಇನ್ನು ನಾನು ಬಂದ ಕಾರ್ಯದತ್ತ ಹೊರಳುತ್ತೇನೆ.

ಕರ್ನಾಟಕ ಸಿಂಹಾಸನಾಧೀಶ್ವರರೇ, ಕಲಿಂಗ-ಕರ್ನಾಟಕಗಳೆರಡೂ ಓರ್ವ ಭಾರತಮಾತೆಯ ಇಬ್ಬರು ಸತ್ಪುತ್ರರಂತಿರುವರು. ಈ ಇಬ್ಬರು ಬಂಧುಗಳು ಒಬ್ಬರೊಬ್ಬರು ಬಡಿದಾಡುವದು-ಒಂದೊಂದು ರಾಷ್ಟ್ರದ ಪ್ರಾಣ ಹರಣಕ್ಕೆ ಸಂಪತ್ತಿಯ ನಾಶಕ್ಕೆ-ಎರಡೂ ರಾಷ್ಟ್ರಗಳ ಹೀನಸ್ಥಿತಿಗೆ ಒಂದೊಂದು ಯತ್ನ ಮಾಡುತ್ತಲಿರುವುದೆಂದರೆ, ಅನುಚಿತವೆಂದು ನಮ್ಮಲ್ಲಿಯ ಎಲ್ಲರ ಅಭಿಪ್ರಾಯುವಿದೆ

ಇನ್ನು ಸದ್ಯದ ಯುದ್ಧಕ್ಕೆ ಸ್ವತಃ ಕರ್ನಾಟಕಾಧೀಶ್ವರರೇ ಸಂಪೂರ್ಣ ಕಾರಣರಲ್ಲವೆಂಬದನ್ನು ನಾನರಿತಿರುವೆನು. ಕಾರಣಗಳೇನೇ ಇದ್ದರೂ, ಇದು ವರೆಗೆ ಆದೆಂತಹ ಲಾಭ-ಹಾನಿಕರ ಸನ್ನಿವೇಶಗಳು ಸಂಭವಿಸಿದ್ದರೂ ಹಿಂದಿನ ದನ್ನೆಲ್ಲ ಇಂದು ಮರೆತು, ಮುಂದೆ ಬಂಧುಭಾವದಿಂದ ನಡೆದುಕೊಂಡು, ಎರಡೂ ರಾಷ್ಟ್ರಗಳ ಉನ್ನತಿಗೆ ಕಾರಣರಾಗುವುದೊಳಿತೆಂದು ನಮ್ಮಗಳ ನಂಬುಗೆ.

ಇಲ್ಲಿಯ ವರೆಗೆ ನಾನಾಗಿಯೇ ಬಂದುದರಿಂದ ಕರ್ನಾಟಕಾಧೀಶ್ವರರು ಅನ್ಯಥಾ ಭಾವಿಸಬಾರದೆಂದು ನನ್ನ ವಿನಂತಿ. ಕಲಿಂಗ ರಾಜ್ಯದಲ್ಲಿ ಬಹು ಭಾಗವನ್ನು ಕರ್ನಾಟಕದೊಡೆಯರು ಗೆದ್ದು ತಮ್ಮ ವಶದಲ್ಲಿರಿಸಿರುವರು. ಇದರಿಂದ ಕಲಿಂಗರು ಪೂರ್ಣ ನಿರಾಶರಾಗಿಲ್ಲ; ಅವರಲ್ಲಿ ಇನ್ನೂ ಯುದ್ಧ ಮಾಡುವ ಉತ್ಸಾಹವಿದೆ. ಸಾಕಷ್ಟು ಸೈನ್ಯವೂ ಬಲವೂ ಇದೆ. ಸ್ವಾತಂತ್ರ್ಯ ಪ್ರೇಮ ಅವರಲ್ಲಿ ಬೇರೂರಿದೆ. ತಮ್ಮ ತಾಯ್ನಾಡ ಸ್ವಾತಂತ್ರ್ಯರಕ್ಷಣೆಗೆಂದರೆ, ಪ್ರತಿಯೊಬ್ಬ ಕಲಿಂಗನು ತನ್ನ ಪ್ರಾಣಾರ್ಪಣೆ ಮಾಡಲು ಸಿದ್ಧನಿರುವನು

ಆದರೂ ಇಂತಹ ಅಂತಃಕಲಹಗಳಿಂದ ಇಬ್ಬರಿಗೂ ನಷ್ಟವೇ ಅಲ್ಲದೆ, ಲಾಭಾಂಶವೇನೂ ಇಲ್ಲವೆಂದು ನಮ್ಮ ಭಾವನೆ. ನಾನು ಪುನಃ ಸೂಚಿಸುವ ದೆಂದರೆ, ಇದುವರೆಗಾದ ಯುದ್ಧಕ್ಕೆ ಕಾರಣಗಳೇನಾದರೂ ಇರಬಹುದು.

ಒಬ್ಬರೊಬ್ಬರ ನಷ್ಟಕ್ಕೆ ಯಾರಾದರೂ ಕಾರಣರಿರಬಹುದು. ಭವಿಷ್ಯತ್ತಿನ ಉಜ್ವಲ ಮೈತ್ರಿ ಕಟ್ಟುವುದಕ್ಕೆ ಭೂತ ಕಾಲದ ಭೂತವನ್ನು ಹೊಡೆದೋಡಿಸಿ, ಆ ಬಗ್ಗೆ ಯತ್ಕಿಂಚಿತ್ತಾದರೂ ಯೋಚಿಸಕೂಡದೆಂದು ನಮ್ಮಗಳ ನಮ್ರವಿನಂತಿ.

ಇನ್ನು ಮುಖ್ಯವಾದ ಕೆಲಸವೆಂದರೆ, ಕರ್ನಾಟಕಾಧೀಶ್ವರರು ವಿಜಯಿ ವೀರರಾದರೂ-ನಮ್ಮಲ್ಲಿಯ ಕೆಲವು ನಾಡು ಗೆದ್ದು ವಶಪಡಿಸಿಕೊಂಡಿದ್ದರೂ-ಅನ್ಯವಿಜಯಿಗಳಂತಾಚರಿಸದೆ, ಅತ್ಯಂತ ಸೌಜನ್ಯದಿಂದ, ಅಪರಿಮಿತ ಔದಾರ್ಯದಿಂದ, ಅವರ್ಣನೀಯ ಸ್ನೇಹದಿಂದ ಕಲಿಂಗ ನಾಡವರ ಸಂಗಡ ವರ್ತಿಸಿ, ಕಲಿಂಗ ನಾಡವರ ಹೃನ್ಮನಗಳನ್ನಪಹರಿಸಿದುದಕ್ಕೆ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡಿಗರ ಈ ಶ್ರೇಷ್ಠ ತರಗತಿಯ ಉದಾರಚರಿತದಿಂದ ಅವರ ಕೀರ್ತಿ ದಿಗಂತಗಳಿಗೂ ಹರಡಿ, ಕೊನೆಯವರೆಗೂ ಭೂಮಂಡಲವನ್ನು ಬೆಳಗುವದಲ್ಲಿ ಸಂದೇಹವೇನೂ ಇಲ್ಲ; ಮತ್ತು ಆ ಪ್ರೇಮಳ ವರ್ತನೆಯೇ ನಮಗೆ ಮೈತ್ರಿಯ ಬಗ್ಗೆ ಪ್ರಯತ್ನಮಾಡಹಚಿತೆಂದು ಹೇಳಿದರೆ ಸಾಕು.

ಇನ್ನುಳಿದುದೆಂದರೆ, ಈಗ ತಾನೆ ನನಗೆ ತಿಳಿದ ಒಂದು ವಿಷಾದಕರ ಸಂಗತಿಯ ಬಗ್ಗೆ ನಾನು ಅನುತಾಪ ವ್ಯಕ್ತಮಾಡಲೇ ಬೇಕಾಗಿದೆ. ಈಗ ಕೆಲವು ಸಮಯ ಮೊದಲು ಇಲ್ಲಿಯ ಅದಾವನೋ ದುಷ್ಟನೋರ್ವನು ಕರ್ನಾಟಕ ಸಮ್ರಾಟರ ಪ್ರಾಣಾಪಾಯಕ್ಕೆ ಯತ್ನಿಸಿದನೆಂಬದು ಈಗ ನನಗೆ ತಿಳಿಯಿತು. ಆ ದುಷ್ಟ ಆಚರಣೆಯು ಕಲಿಂಗ ರಾಜರಿಗೆ ಯಾವ ವಿಧದಲ್ಲಿಯೂ ಸಂಬಂಧಿಸಿಲ್ಲ—ಇಷ್ಟೇ ಅಲ್ಲ; ಆ ಸಂಗತಿ ಕೇಳಿ ನನಗೆ ಅತ್ಯಂತ ವಿಷಾದವಾಗಿದೆ. ಇಂತಹ ಅಘೋರ ಕೃತ್ಯ ನಡೆದು ಹೋದರೂ ಕನ್ನಡಿಗರು ಅಂತಹ ದುಷ್ಟನನ್ನು ಕ್ಷಮಿಸಿದುದಲ್ಲದೆ, ಈ ಸುದ್ದಿಯನ್ನು ಕಿಂಚಿತ್ತಾದರೂ ಬಯಲಿಗಿಟ್ಟಿಲ್ಲವೆಂಬ ಸಂಗತಿಯನ್ನು ಕೇಳಿದ ಪ್ರತಿಯೊಬ್ಬ ಮಾನವ ಪ್ರಾಣಿಯೂ ಆಶ್ಚರ್ಯವ್ಯಕ್ತಮಾಡದಿರನು

ನಾನು ಮತ್ತೊಮ್ಮೆ ಉದಾರ ನಡತೆಗಾಗಿ ಕನ್ನಡ ಸಮ್ರಾಟರನ್ನಭಿನಂದಿಸಿ-ಸಂಧಿಯ ವಿಷಯಕವಾಗಿ ಪುನಃ ಬಿನ್ನವಿಸಿ-ನನ್ನೀ ದೌತ್ಯ ಸಂದೇಶ ಮುಗಿಸುತ್ತೇನೆ.'

ದಾಮೋದರ ಶರ್ಮನ ಭಾಷಣ ಮುಗಿಯುತ್ತಲೆ ಅಪ್ಪಾಜಿ ಅವನಿಗೆ ಉತ್ತರ ಕೊಡಲೆದ್ದನು.

'ಕಲಿಂಗನಾಡ ಮಹಾಮಂತ್ರಿಗಳೇ, ಇಂದಿನ ನಿಮ್ಮ ವಿಚಾರಪರಿಪ್ಲುತ, ಮೈತ್ರಿ ಸೂಚಕ, ಸ್ವಾತಂತ್ರ್ಯ ಪ್ರೇಮದ ವೀರ ಭಾಷಣವನ್ನು ಕನ್ನಡ

ಸಮ್ರಾಟರು ಕೇಳಿದರು. ತಮ್ಮ ಆಶಯವನ್ನು ತಿಳಿದು ಅವರಿಗೆ ಅತ್ಯಾನಂದವಾಯಿತು ಕನ್ನಡ ದೊರೆಗಳು ಅನ್ಯ ರಾಷ್ಟ್ರಗಳನ್ನು ತುಳಿದು ಹಾಕಬೇಕು, ಅನ್ಯ ನಾಡವರ ಸ್ವಾತಂತ್ರ್ಯ ಹರಣಮಾಡಬೇಕು, ಅನ್ಯ ಜನಾಂಗದವರನ್ನು ಕಷ್ಟಕ್ಕೆ ಗುರಿ ಮಾಡಬೇಕು ಎಂಬ ಭಾವನೆಯಿಂದ ಪ್ರೇರಿತರೆಂದೂ ಆಗಿರುವದಿಲ್ಲ. ಆವಾಗಲೂ ಭೀಕರ ಪರಿಣಾಮಿಯಾದೀ ಯುದ್ಧವನ್ನು ತಪ್ಪಿಸಲು ಬಹಳವಾಗಿ ಹೆಣಗಾಡಿ ಯುದ್ಧವು ಅನಿವಾರ್ಯವೆಂದು ತಿಳಿದಾಗಲೆ ಈ ಅನರ್ಥಕಾರೀ ಯುದ್ಧ ಕೈಕೊಳ್ಳುವರು ಈ ಸಲವೂ ಹಾಗೆಯೇ ಸಂಭವಿಸಿತೆಂಬದನ್ನು ಎಲ್ಲರೂ ಅರಿತಿರುವರು. ಅದೇನೇ ಇದ್ದರೂ, ಅದನ್ನು ಮರೆಯುವಂತೆ ಸೂಚಿಸಿದ ಪ್ರಕಾರ ಕರ್ನಾಟಕ ಸಮ್ರಾಟರು ಅದನ್ನೆಲ್ಲ ಮರೆತೇ ಇನ್ನು ಮುಂದೆ ಹೊಸ ಸಂಬಂಧವನ್ನು ಕಲ್ಪಿಸಿ ಆ ಪ್ರಕಾರವಾಗಿ ಎರಡೂ ರಾಷ್ಟ್ರಗಳ ಉನ್ನತಿಗೆ ಕಾರಣವಾಗಲಿಕ್ಕೆ ಆವಾಗಲೂ ಸಿದ್ಧರಿರುವರು.

ಮುಂತಾಗಿ ಮೈತ್ರಿ ಬೆಳೆಯಿಸುವ ಸದಿಚ್ಛೆ ಚನ್ನಾಗಿ ವ್ಯಕ್ತಪಡಿಸಿದುದಲ್ಲದೆ, ಕರ್ನಾಟಕದ ಹೆಮ್ಮೆಗೆ ಕೊಂಚವಾದರೂ ಕೊರತೆಯಾಗದಂತಹ ಸಂಧಿಗೆ ತಾವು ಸರ್ವ ಕಾಲದಲ್ಲಿಯೂ ಸಿದ್ಧರಿರುವದಾಗಿ ಸೂಚಿಸಿದರು. ಸಂಧಿಯ ಕರಾರುಗಳ ಬಗ್ಗೆ ಅವರಲ್ಲಿ ಚರ್ಚೆಯಾಯಿತು. ಒಬ್ಬರಿಗೊಬ್ಬರು ಅಪಮಾನವಾಗುವಂತಹ ಯಾವ ಸೂಚನೆಯೂ ಮುಂದೆ ಬರತಕ್ಕದ್ದಲ್ಲವೆಂಬ ವಿಷಯದಲ್ಲಿ ಅವರೀರ್ವರೂ ದಕ್ಷತೆ ವಹಿಸಿದರು. ಇಬ್ಬರೂ ಸಮಾನಸ್ಕಂದರಂತೆ ವ್ಯವಹರಿಸಬೇಕೆಂದು ನಿರ್ಣಯಿಸಿದರು. ಕರ್ನಾಟಕದಿತಿಹಾಸದಲ್ಲಿ ವೀರನರಪತಿ ಶ್ರೀಕೃಷ್ಣದೇವರಾಯನ ಕಾಲವೆಂದರೆ, ಕನ್ನಡದೇವಿಯ ಅತ್ಯಂತ ಉಜ್ವಲ ಸಮಯವು. ಕರ್ನಾಟಕ ಸಾಮ್ರಾಜ್ಯವೈಭವವು, ಅತೀವ ಉಚ್ಚತಮ ಶಿಖರಕ್ಕೆ ತಲುಪಿದುದು ಆತನ ಕಾಲದಲ್ಲಿಯೇ. ಬರಿಯ ವೈಭವದಿಂದಲ್ಲ, ಇಲ್ಲವೆ ಶೌರ್ಯದಿಂದಲ್ಲ. ಆ ಸಮಯದಲ್ಲಿ ಕನ್ನಡ ಸೇನೆಯನ್ನು ತಡೆಗಟ್ಟುವ ವೀರರೇ ಇರಲಿಲ್ಲವೆನ್ನಬಹುದು; ಆದರೆ ಕರ್ನಾಟಕದಿತಿಹಾಸನ್ನು ಉಜ್ವಲಗೊಳಿಸಿದುದು ಕನ್ನಡಿಗರ ಹುಟ್ಟುಗುಣವಾದ ಔದಾರ್ಯವು. ತಮ್ಮಾ ಉದಾರಚರಿತದಿಂದ ಪರಪ್ರಾಂತೀಯರನ್ನಷ್ಟೇ ಏಕೆ, ಪರದೇಶೀಯರನ್ನು ಕೂಡಾ ಚಕಿತಗೊಳಿಸಿದ ಉದಾಹರಣೆಗಳು ವಿಪುಲವಾಗಿವೆ.

ಕನ್ನಡಿಗರಿಗೆ ಸಾಮ್ರಾಜ್ಯವಿಸ್ತರಣೆ ಬೇಕಿದ್ದಿತು; ಆದರೆ ಬೇರೆಯವರನ್ನೆಲ್ಲ ತೊಂದರೆಗೀಡುಮಾಡುವುದು ಬೇಕಿರಲಿಲ್ಲ. ಓರಿಸದರಸು ಕನ್ನಡಿಗ

ರನ್ನು ಹಲವು ಸಲ ಪೀಡಿಸಿದುದರಿಂದಲೂ, ಕರ್ನಾಟಕ ಸಾಮ್ರಾಜ್ಯದ ನಾಶಕ್ಕಾಗಿ ಮುಹಮ್ಮದೀಯರೊಡನೆ ವ್ಯೂಹ ರಚಿಸಿದುದರಿಂದಲೂ ರಾಯನು ಗಜಪತಿಯ ಮೇಲೇರಿ ಹೋಗಬೇಕಾಯಿತೆಂಬದು ಹಿಂದೆ ಹಲವು ಸಲ ಬಂದಿದೆ.

ಗಜಪತಿ ತನ್ನ ಕೃತಕರ್ಮಕ್ಕೆ ಪಶ್ಚಾತ್ತಾಪಪಟ್ಟುದೂ, ಸಂಧಿಗಾಗಿ ಆತುರನಾದುದೂ ನರಪತಿಯ ಕ್ರೋಧಶಮನಕ್ಕೆ ಸಾಕಾದುವು. ವ್ಯರ್ಥವಾಗಿ ಪ್ರಾಣಹರಣ ಮಾಡಲು ಅವನ ಮನಸ್ಸು ಒಪ್ಪಲಿಲ್ಲ. ಅಂತೆಯೇ ಯುಕ್ತಿಯಿಂದ, ಒಂದು ಹನಿ ರಕ್ತವು ಕೂಡಾ ನೆಲಕ್ಕೆ ಬೀಳದಂತೆ ಅದ್ವಿತೀಯ ವಿಜಯ ಸಂಪಾದಿಸಿದನು. ಆದರಿಂದ ಗಜಪತಿಯ ಕಣ್ಣು ಚನ್ನಾಗಿ ತೆರೆದುವು. ತನ್ನ ಮೂರ್ಖತನವರಿತು ಅದನ್ನು ಹೇಗಾದರೂ ಸರಿಪಡಿಸಬೇಕೆಂದು ವಿಚಾರಿಸಿದನು

'ಯುದ್ಧದ ವೆಚ್ಚ ಕೊಡಬೇಕು? ಇಂತಿಷ್ಟು ಕಪ್ಪ ಕೊಡಬೇಕು?' ಮುಂತಾಗಿ ಒಂದೆರಡು ಸ್ವಾಭಾವಿಕವಾದ ಕರಾರು ಹಾಕಿದ್ದರೆ, ನಡೆಯುತ್ತಿತ್ತು; ಆದರೆ ಕನ್ನಡಿಗರು ಅಂತಹ ಕೀಳು ಮನದವರಲ್ಲ. ಆಗ್ಗೆ ವಿಜಯನಗರದಲ್ಲಿ ಲಕ್ಷ್ಮಿ ವಸತಿ ಹಾಕಿಬಿಟ್ಟಿದ್ದಳು; ಆದುದರಿಂದ ವಿಶೇಷವಾಗಿ ಯಾವ ತೊಂದರೆಗೂ ಹೋಗದೆ, 'ಇಬ್ಬರೂ ತಮ್ಮ ತಮ್ಮ ವೈರಭಾವವನ್ನು ಮರೆತು ಸಂಪೂರ್ಣ ಸ್ನೇಹಭಾವದಿಂದ ವ್ಯವಹರಿಸಬೇಕು. ನರಪತಿ ಗೆದ್ದುಕೊಂಡ ನಾಡನ್ನೆಲ್ಲ ಬಿಟ್ಟುಕೊಡಬೇಕು' ಎಂಬ ಕರಾರುಗಳ ಮೇಲೆ ಸಂಧಿ ನಿರ್ಣಯವಾಯಿತು.

ಕಲಿಂಗ ಮಂತ್ರಿ ಸಂತುಷ್ಟನಾದನು. ಅವನು ಕನ್ನಡಿಗರ ಉದಾರತನಕ್ಕೆ ಅವರನ್ನು ಸಂಪೂರ್ಣವಾಗಭಿನಂದಿಸಿದನು. ಕನ್ನಡಿಗರ ಉದಾರ ಆಚರಣೆ ಕೊಂಡಾಡುತ್ತ ಪ್ರೊಟ್ಟನೂರಿಗೆ ಪೂಡಮಟ್ಟನು.



## ೧೪ ಗಜಪತಿ ಸಪ್ತಾಂಗ ಹರಣ.

೨೦೦ದಿನ ಪ್ರಕರಣದ ಕೊನೆಯಲ್ಲಿ ನಡೆದ ಪ್ರಕಾರ ಸಂಧಿ ಸಾಧಿಸಿದಂತಾಯಿತು. ಗಜಪತಿ ತನ್ನ ಮಹಾಪಾತ್ರರ ಸಭೆ ನೆರೆಯಿಸಿ, ಸಂಧಿಯ ಬಗ್ಗೆ ವಿಚಾರಿಸಿದನು. ನರಪತಿಯ ಶೌರ್ಯೌದಾರ್ಯಗಳಿಗೆ ಅವರೆಲ್ಲರೂ ಮೊದಲೇ ಮನಸೋತಿದ್ದರು ತಾನು ಗೆದ್ದ ವೀರನಿದ್ದರೂ-ಮುಂದೆ ಗೆಲ್ಲುವ ವಿಶ್ವಾಸವಿದ್ದರೂ ಕೊಂಚವಾದರೂ ಲಾಭವನ್ನಪೇಕ್ಷಿಸದೆ ಬರಿಯ ಮೈತ್ರಿಯೊಂದೇ ಕರಾರಾಗುಳ್ಳ ಸಂಧಿಗೆ ಸಮ್ಮತಿಸಿದುದನ್ನು ಕೇಳಿ, ಅವರೆಲ್ಲರ ಕಂಠಗಳು ಕೃತಜ್ಞತೆಯಿಂದುಬ್ಬಿ ಹೋದುವು. ಅಂತಹ ಅತ್ಯಂತ ಆನಂದಕರವಾದ ಸಂಧಿಗೆ ಅವರೆಲ್ಲರೂ ಆನಂದದಿಂದ ಸಮ್ಮತಿಸಿದುದಲ್ಲದೆ, ಸಮೀಪದಲ್ಲಿಯ ಒಂದು ಸುಮುಹೂರ್ತದಲ್ಲಿ ದರಬಾರ ನೆರೆಯಿಸಿ, ನರಪತಿಯನ್ನು ಚನ್ನಾಗಿ ಮನ್ನಿಸತಕ್ಕುದೆಂದು ಬಲುಮೆಯಿಂದ ಬಿನ್ನಹ ಮಾಡಿಕೊಂಡರು.

ಗಜಪತಿಯಾಗಲಿ, ಕಲಿಂಗ ನಾಡವರಾಗಲಿ ಮಹಾಪಾತ್ರರ ಈ ಬಿನ್ನಹಕ್ಕೆ ಅಸಮ್ಮತಿ ವ್ಯಕ್ತಮಾಡುವುದು ಶಕ್ಯವೇ ಇರಲಿಲ್ಲ. 'ಗುಣಾಃ ಪೂಜಾಸ್ಥಾನಂ' ಎಂಬಂತೆ ಸದ್ಗುಣಗಳಿಗೆ ನೆಲೆಯೇ ಆಗಿದ್ದ ನರಪತಿಯನ್ನು ತದ್ವಾರಾ ಕರ್ನಾಟಕ ಸಾಮ್ರಾಜ್ಯವನ್ನು-ಕನ್ನಡ ಪ್ರಜೆಗಳನ್ನು ಪರಪ್ರಾಂತೀಯರು ಆದರಪಟ್ಟು ಸನ್ಮಾನಿಸಿದುದು ಅವರಿಗೆ ಯೋಗ್ಯವೇ. ಅದು ಅವರ ಗುಣಗ್ರಾಹಕತೆಯನ್ನೇ ವ್ಯಕ್ತಪಡಿಸುತ್ತದೆ; ಆದರೆ ಅದು ನಮಗೆ ಕನ್ನಡಿಗರಿಗ ಅಂತಹ ವೈಭವಶಾಲಿ ವಿಜಯನಗರದ, ಕಣ್ಮರೆಯಾಗಿದ್ದ ಮೆರೆದು ಕೀರ್ತಿಶಿಬಿರಕ್ಕೆ ತಲುಪಿದ್ದ ವಿಜಯನಗರ ಸಾಮ್ರಾಜ್ಯವು ನಮ್ಮದೆಂದು ಹೇಳಿಕೊಳ್ಳುವ ನಮಗೆ ಅಭಿಮಾನಾಸ್ಪದವಲ್ಲವೆ? ಒಂದು ಸಮಯ ನಮ್ಮವರು, ನಮ್ಮ ಹಿಂದಿನ ಹಿರಿಯರು ಶೂರ, ಧೀರ, ಚತುರ, ಕನ್ನಡಿಗರು ಅತುಲ ವೈಭವದಿಂದ ಬಾಳಿ, ಬೆಳೆದು, ಕೀರ್ತಿರೂಪರಾಗುಳಿದ ಆ ಮಹಿಮಮೆವೇತ್ತ ಕನ್ನಡಿಗರು, ದಿಗಂತರಗಳಲ್ಲಿಯೂ ಮನ್ನಣೆ ಪಡೆಯುತ್ತಲಿದ್ದರೆಂಬ ಸಂಗತಿಯು ಅತ್ಯಂತ ಅಭಿಮಾನಾಸ್ಪದವಲ್ಲವೆ? ನಮಗಾ ಉಜ್ವಲ ಭವಿಷ್ಯದ ಸ್ಮರಣೆಯಿತ್ತು. ಅಂತಹ ಮೇಲ್ತರಗತಿಯ ಬಾಳು ಸಂಪಾದಿಸುವ ಹುರುಪು ತಂದೀಯುವುದಿಲ್ಲವೆ? ಅಂತಹ ಮನ್ನಣೆ ಅಂದು ಕನ್ನಡಿಗರಿಗೆ ದೊರೆಯಲಿದ್ದಿತು.

ಆ ಸಮಾರಂಭದ ಸಿದ್ಧತೆ ಆಗಲೆ ನಡೆದಿದ್ದಿತು. ಅಂದು ಸಿಂಹಾಚಲದಲ್ಲಿ ಅಪೂರ್ವ ಉತ್ಸಾಹ ತಲೆದೋರುತ್ತಲಿದ್ದಿತು ಎರಡು-ಎರಡೂವರೆ ತಿಂಗಳಿಗೆ ಮೊದಲು ಸಿಂಹಾಚಲ ನಿವಾಸಿಗಳು ಕನ್ನಡ ದೊರೆಯನ್ನು ಸ್ವಾಗತಿ

ಸಲು ಸಮಾರಂಭವೇರ್ಪಟ್ಟಿದ್ದಿತು; ಆದರೆ ಅಂದು ಅಷ್ಟು ಉತ್ಸಾಹವಿರಲಿಲ್ಲ. ಕನ್ನಡ ರಾಜನನ್ನು ಅವರು ಆಗಲೇ ಅಷ್ಟು ಚನ್ನಾಗಿ ತಿಳಿದಿರಲಿಲ್ಲ. ಒಂದು ಬಗೆಯ ಬಲುಮೆಗೊಳಗಾಗಿ ಅಂದಿನುತ್ಸವವನ್ನೇರ್ಪಡಿಸಿದ್ದರು. ಮೈತ್ರಿಯ ಪ್ರಾರ್ಥನೆಯೇ ಅಂದಿನ ಮುಖ್ಯ ಉದ್ದೇಶವಾಗಿದ್ದಿತು; ಆದರೆ ಇಂದಿನ ಉತ್ಸವದಹುರುಪು-ಹುಮ್ಮಸು ಅವರ್ಣನೀಯವಾಗಿದ್ದಿತು. ಬಹಳ ದಿವಸಗಳಿಂದ ಹೊತ್ತುತ್ತಲಿದ್ದ ವೈರಾಗ್ನಿ ಇಂದು ಎಲ್ಲವೂ ಶಾಂತವಾಗಿ ಪ್ರೇಮಮಯ ತಂಗಾಳಿ ಬೀಸುತ್ತಲಿದ್ದಿತು. ನಗರವಾಸಿಗಳೆಲ್ಲ ಇಂದಿನ ಅಪೂರ್ವ ಉತ್ಸವವನ್ನು ಉತ್ಸಾಹಭರಿತ ಹೃದಯದಿಂದಾಚರಿಸುತ್ತಲಿದ್ದರು ತಮ್ಮ ಕಣ್ಣು ಸಾರ್ಥಕ ಮಾಡುವ ಆ ವೈಭವಪೂರ್ಣವಾದ ರಮಣೀಯ ನೋಟವನ್ನು ಅತ್ಯಂತ ಉತ್ಸುಕತೆಯಿಂದ ಎದುರು ನೋಡುತ್ತಲಿದ್ದರು

ಅಂದು ಪ್ರಥಮ ಪ್ರಹರದ ಕೊನೆಯಲ್ಲಿಯೇ ಕನ್ನಡ ರಾಜನ ವೈಭವದ ಮೆರವಣಿಗೆ ನಗರದಲ್ಲೆಲ್ಲ ಹಾಯಲಿದ್ದಿತು ನಾಗರಿಕರೆಲ್ಲ ಬಹಳವಾಗಿ ಶೃಂಗರಿಸಿದರು. ಮನೆ-ಮಾಳಿಗೆಗಳೆಲ್ಲ ಚೇತನೆ ಹೊಂದಿ ಕನ್ನಡ ರಾಜ ನಾಗಮನವನ್ನೇ ನಿರೀಕ್ಷಿಸುತ್ತಲಿರುವಂತೆ ತೋರುತ್ತಿತ್ತು. ಚೇತನಾ ವಿಹೀನ ವಸ್ತುಗಳಿಗೇ ಚೇತನೆಯಿತ್ತ ಆ ಸುಸಂಧಿ, ಚೈತನ್ಯಪೂರ್ಣ ಮಾನವರನ್ನು ಕುಣಿಯುವಂತೆ ಮಾಡುತ್ತಲಿದ್ದಿತು. ಯಾರೊಬ್ಬರ ಮುಖದಲ್ಲಿಯೂ ಮೃದುಹಾಸ ಮನೆ ಮಾಡಿದ್ದಿತು. ಭೀಕರವಾದ ಯುದ್ಧ ತಪ್ಪಿಸಿ, ಅತ್ಯಂತ ಆನಂದಕರವಾದ ಸಂಧಿಗೆ ಸಮ್ಮತಿಸಿದ ಬಗ್ಗೆ ನರಪತಿಯನ್ನು ಎಲ್ಲರೂ ಹೊಗಳುತ್ತಲಿದ್ದರು. ಆನಂದಕ್ಕೆ ಸಿಂಹಾಚಲವು ಮನೆಯೇ ಆದಂತೆ ತೋರುತ್ತಲಿದ್ದಿತು, ಆದರೆ ಈ ಎಲ್ಲರಿಗಿಂತಲೂ ಹೆಚ್ಚಾಗಿ ಆನಂದಬಡುತ್ತಲಿದ್ದ ವ್ಯಕ್ತಿಯೆಂದರೆ, ಜಗನ್ಮೋಹಿಸಿಯು ಆನಂದವೇ ಆನಂದವಾಗುಳ್ಳ ನಂದನವನವೇ ಆಕೆಯ ಹೃದಯದಲ್ಲಿ ನಿಂತಂತಾಗಿದ್ದಿತು. ಆನಂದಾಂಬುಧಿಯಲ್ಲಿ ಮಿಂದು ಮೈಮರೆತಿದ್ದಳು. ಸಂತಸದಿಂದ ಆಕೆಯ ಹೃದಯ ಅನಂತವಾಗಿ ಕುಣಿಯುತ್ತಲಿದ್ದಿತು. ಶರೀರದ ರೋಮರೋಮಗಳಲ್ಲಿ ನಲಿವು ಬಲವಾಗಿ ತೋರುತ್ತಲಿದ್ದಿತು. ತಮ್ಮ ಕಲಿಂಗ ರಾಜ್ಯದ ಭಾವೀ ವೈಭವ, ಕರ್ನಾಟಕದ ಸೊಬಗು, ಕನ್ನಡ ರಾಜನ ಗುಣಗಾನ, ಅಪ್ಪಾಜಿಯ ಚಾತುರ್ಯ ಇವುಗಳ ಹೊರತು ಆಕೆಗೆ ಇನ್ನೇನೂ ಕಾಣುತ್ತಲಿರಲಿಲ್ಲ ಸುಂದರವಾದ ಅಂದ-ಚಂದದ ಸವಿನೋಟಗಳ ಹೊರತು ಆಕೆ ಇನ್ನೇನೂ ನೋಡುತ್ತಲಿರಲಿಲ್ಲ. ಮೃದುಮಧುರ ಇನಿಗನಸುಗಳಲ್ಲಿ ಆಕೆ ಮುಳುಗಿದ್ದಳು. ಇಂತಹ ಅತ್ಯಂತ ಸುಖದ ದಿನವನ್ನು ತಂದಿತ್ತುದಕ್ಕೆ ಆಕೆ ಆವಾಗಲೂ ಅನಾದ್ಯನಂತ ಜಗನ್ನಾಥ

ನನ್ನು ಒಂದೇಸವನೆ ಪ್ರಾರ್ಥಿಸುತ್ತಲಿದ್ದಳು. ಆಕೆಯ ಆ ನೊಬಗಿನ ಸುಗ್ಗಿಯಲ್ಲಿ ಪಾಲುಪಡೆಯುವಳೆಂದರೆ. ಶಶಿಲೇಖೆ.

'ಲೇಖೆ, ಇಂತಹ ಆನಂದಕರ ಸಮಯ ಪ್ರಾಪ್ತವಾಗಬಹುದೆಂದು ನೀನೆಣಿಸಿದ್ದೆಯಾ?'

'ರಾಜಪುತ್ರೀ, ಎಲ್ಲವೂ ನಾವೆಣಿಸಿದ್ದಂತೆಯೇ ಆಗುತ್ತಿದೆಯೆ? ನಮ್ಮ ಎಣಿಕೆ-ಗಣಿಕೆಗಳು ಎಲ್ಲಿಯವರೆಗೆ ತಲುಪುವವು? ಜಗನ್ನಾಥನಾದಾಗಲೂ ತನ್ನ ಇಚ್ಛೆಯಂತೆ ಜಗತ್ತನ್ನು ಕುಣಿಸುತ್ತಾನೆ. ಸುಖವನ್ನಿತ್ತು ತಣಿಸುತ್ತಾನೆ, ದುಃಖವನ್ನಿತ್ತು ಮಣಿಸುತ್ತಾನೆ. ಆತನ ಅತರ್ಕ್ಯ ಲೀಲೆಯನ್ನರಿಯಲು ಸಮರ್ಥರಾರು?'

'ನಿಜ; ಲೇಖೆ, ಎಂತಹ ವಿಚಿತ್ರ ಯೋಗಾಯೋಗ! ನೀನೇ ನೋಡು. ಕನ್ನಡ ರಾಜ್ಯದಲ್ಲಿ ತಂದೆಯವರು ದಾಳಿಯಿಡಬೇಕೆಲ್ಲಿ? ತನ್ಮೂಲಕ ಕನ್ನಡದರಸು ಕೆರಳಬೇಕೆಲ್ಲಿ? ಅವನು ಇಲ್ಲಿಯವರೆಗೆ ಬರಬೇಕೆಲ್ಲಿ? ಇದೆಲ್ಲವೂ ಸ್ವಾಭಾವಿಕವಾದುದು, ಆದರೆ ಆಕಸ್ಮಿಕವಾಗಿ ಅಂದು ನಮಗವರ ದರುಶನವಾಗಿ, ಅದೆಷ್ಟೋ ಕಷ್ಟ-ನಷ್ಟಗಳನುಭವಿಸಿ ಕೊನೆಗೆ ಈ ಶುಭದಿವಸ ಕಂಡೆವು.'

'ರಾಜಪುತ್ರಿ, ಬಂದ ದುಃಖಗಳು ಮುಂಬರುವ ಸುಖದ ಸೂಚನೆ ತ-ರುತ್ತವೆಂದು ಹಿರಿಯರೆನ್ನುವ ಅನುಭವ ಬಂದಿತು. ನಿಜವಾಗಿಯೂ ಕಲಿಂಗಕ್ಕೆ ದಾರುಣವಾದ ಅವಸ್ಥೆ ಒದಗಿದ್ದಿತು. ಕಲಿಂಗವು ನಿರ್ನಾಮವಾಗುವದೆಂದು ಅನೇಕರೆಣಿಸಿದ್ದರು, ಆದರೆ ನೋಡು, ಯಕ್ಷಿಣಿಯು ಕೋಲು ತಿರುವಿದಂತೆ ಅಲ್ಪಾವಧಿಯಲ್ಲಿಯೇ ಮೊದಲಿನ ಆ ಭೀಕರತೆಯೇ ಸಂತಸಕ್ಕೆ ಮೈ-ಗೊಟ್ಟಿತು. ಅಗ್ನಿಕುಂಡ ತಂಗೊಳವಾಯಿತು ದುಃಖಸಾಗರ ನಂದನವನವಾಯಿತು. ನರಕ-ದುಃಖ ಸಗ್ಗದ ಸುಖವಾಯಿತು. ಹಾಲಾಹಲ ಮಧುರಾಮೃತವಾಯಿತು. ಜಗನ್ನಾಥ ಕಣ್ದೆರೆದರೆ ಯಾವುದು ತಾನೇ ಅಶಕ್ಯ?'

'ಅಹುದು. ನಿನ್ನ ಮಾತು ಯಥಾರ್ಥವಿದೆ. ದೇವದೇವನ ಲೀಲೆಯರಿಯದೆ, ಆತನ ಅಸದಳ ಸಾಮರ್ಥ್ಯ ತಿಳಿಯದೆ, ಕ್ಷಣದಲ್ಲಿ-ಒಂದೇ ಒಂದು ಕ್ಷಣದಲ್ಲಿ ಸಕಲ ವಿಶ್ವವನ್ನೂ ಸುಟ್ಟು ಸೂರೆಗೊಯ್ದು, ಮರುಕ್ಷಣದಲ್ಲಿಯೇ ಮುನ್ನಿನಕ್ಕಿಂತಲೂ ಮಧುರತಮವಾಗಿ ಕಟ್ಟುವ ಅತುಲ ಬಲಶಾಲಿ ಆ ಪರಮಾತ್ಮನನ್ನು ಮರೆತು, ನಾವೇ ಇಂದ್ರರು, ನಾವೇ ಚಂದ್ರರು ಎಂದು ತಿಳಿಯುತ್ತೇವೆ. ಹೆಮ್ಮೆ ಬಡುತ್ತೇವೆ; ಆದರೆ ಕೊಂಚವೇ ಅವಸ್ಥೆ ಬದಲಾದರೆ ಬಲವಾಗಿ ಗೋಳಡುತ್ತೇವೆ. 'ಪರಮಾತ್ಮ! ಎಂದು ಆತನತ್ತ ಧಾವಿಸುತ್ತೇವೆ.'

'ಸಖಿ, ದುಃಖಗಳೆಂದರೆ ಏನೆಂದು ತಿಳದಿರುವೆ? ಮಾನವನ ಸಚ್ಛೀಲತೆಯ ಒರೆಗಲ್ಲು ಸಗ್ಗ ಜೀವನದ ಸುಲಭ ಸೋಪಾನ. ಪರಮಾತ್ಮನ ಸ್ಮರಣೆಯಿಂದ ಜೀವನ ಪಾವನಗೈವ ಪರಶುಮಣಿ. ಬರುವ ಸುಖದ ಮುಂಗುರುಹು. ಸೌಖ್ಯಜೀವನದ ಅರುಣನ ಕಿರಣಗಳು. ಸಖಿ, ದುಃಖಗಳ ಬಣ್ಣನೆ ಎಷ್ಟು ಮಾಡಿದರೂ ಕಡಿಮೆಯೇ ಇದೆ. ಈ ಎಲ್ಲ ಉಚ್ಚ ಪರಿಣಾಮ ಮರೆತರೂ 'ಸುಖಂ ಹಿ ದುಃಖಾನ್ಯನುಭೂಯ ಶೋಭತೆ । ಘನಾಂಧಕಾರೇಷ್ವಿವ ಧೀರದರ್ಶನಂ॥' ಎಂಬ ಕವಿಯ ಉಕ್ತಿ ದುಃಖದ ಕಟುಫಲ ಕಡಿದವನಿಗೇನೇ ಸುಖದ ಸವಿಫಲಗಳ ಮಾಧುರ್ಯದರಿವಾಗುತ್ತದೆ. ಆವಾಗಲೂ ಸುಖದಲ್ಲಿಯೇ ಹೊರಳುವವನಿಗೆ ಸುಖದ ಸವಿಯೇ ಇರುವುದಿಲ್ಲ. ಬೆಳಕಿನಲ್ಲಿಯೇ ಇದ್ದು ಬೆಳಕಿನಲ್ಲಿಯೇ ಬೆಳೆಯುವವನಿಗೆ ಬೆಳಕಿನ ಮಹತಿ ತಿಳಿಯದು, ಆದರೆ ಕತ್ತಲೆಯಲ್ಲಿ ಕಂಗೆಟ್ಟು ಹೋದವನಿಗೆ ಬೆಳಕಿನ ಹೊಳಪು ಸುಳಿದರೆ, ಅವನಿಗೆ ಆನಂದ ಬಲವಾಗುತ್ತದೆ.'

'ನಿಜ; ಲೇಖೆ, ನೀನನ್ನುವುದು ಯಥಾರ್ಥವಿದೆ. ಇಂತಹ ಸುಂದರ ಸಮಯ ಸಂಪ್ರಾಪ್ತವಾಗಿ ಅದರ ಮಾಧುರ್ಯ ನಮಗೆ ತಿಳಿಯಬೇಕೆಂದೇ ಜಗನ್ನಾಥನು ಇಷ್ಟು ಸಂಕಟಗಳನ್ನು ಕೊಟ್ಟಿರಬಹುದು. ಏನೇ ಆದರೂ ಇಂತಹ ಸುಮಧುರ ಸಮಯಪ್ರೊದಗಿದುದು ನಾವು ಪಟ್ಟ ಕಷ್ಟಗಳಿಗಿಂತ ಹೆಚ್ಚಾಗಿಯೇ ಮಧುರವಾಗಿರುತ್ತದೆ. 'ಅಂತೆಯೇ ಮಾನವ ಹಿಂದುಮುಂದಿನ ಅರಿವಿಲ್ಲದೆ ಮುಂದೊರೆದಿರುವನು.'

'ರಾಜಪುತ್ರಿ, ಅಗೋ ನೋಡು. ಮಂಗಲವಾದ್ಯಗಳು ಕೇಳಬರುತ್ತಲಿವೆ. ಬಹುಶಃ ಕನ್ನಡದರಸಿನ ಆಗಮನವಾದಂತೆ ಕಾಣುತ್ತದೆ.'

ಇಬ್ಬರೂ ಲಗುಬಗೆಯಿಂದ ನಿರೀಕ್ಷಿಸುತ್ತ ನಿಂತರು.

'ಲೇಖೆ, ಅದೋ ನೋಡು ಸಂಭ್ರಮದಿಂದ ಅಂಬರದಲ್ಲೈತರುವ ಪ್ವಂಬಣ್ಣದ ಮುಂಬಗಲ ಬೆಂಗದಿರನ ಹೊಂಗಿರಣಗಳಲ್ಲಿ ಶೃಂಗಾರದಿಂ ಬರುವ ಅಂಗಜನ ತೆರದಿಂದೆ ಅಂಗನಾ ಮನೋಹರ ಪೆಂಗೊಳವಿನಿಂದಾ ಮಧುಬನದಿ ಮಾಧುರ್ಯ ನೀಡಿ ಸುಧೆಯನೀಂಟಿಸಿ, ಬಾಹ್ಯಬಧಿರರಂ ಮಾಡಿದ ಇಂದುವದನ ಇಂದಿರೆಯರಸ ಸುಂದರಪುರುಷ ಗೋವಿಂದ ತಾನೆಂದು ತೋರಿಪ್ಪನು.'

'ಭಾಪು! ಭಾಪು! ರಾಜಪುತ್ರಿ, ಕವಿತ್ವಕ್ಕೆ ನೀನೆಡೆಯಾಗಿರುವೆಯೋ ಇಲ್ಲವೆ ನಿನಗೇ ಕವಿತ್ವವೆಡೆಯಾಗಿದೆಯೋ?'

'ಇನ್ನೇನು, ನಾನು ನಿನ್ನನ್ನು ಸ್ತುತಿಸಬೇಕು. ನೀನು ನನ್ನನ್ನು ಹೊಗಳಬೇಕು. ಅಹೋ ರೂಪ ಮಹೋಧ್ವನಿಃ'

'ನಾನೇನಷ್ಟು ಕುರೂಪಿಯಿಲ್ಲ.'

'ಉಂಟೆ? ಹಾಗಿದ್ದರೆ ಕನ್ನಡಿಗರ ವೀರಸೇನಾಪತಿ—'

'ರಾಜಪುತ್ರಿ, ಅಲ್ಲಿ ನೋಡು. ಅಜನು ಜಾಣ್ಮೆಯಿಂದ ಸೃಜಿಸಿದೀ ಜನಪ ದ್ವಿಜರ ಪಾಲಿಪ ಸುಜನೋತ್ತಂಸ, ಗಜವನ್ನೇರಿ ತನ್ನಿನಿನೋಟದಿಂದ ಮನ ಸಿಜನ ಬಾಣವೆಸೆಯುತ್ತ ಮನ್ನೆಯರ ತನುಗಳಂ ಕಂಪಿಸುತೆ ಮನಗಳಂ ಸೆಳೆ ಯುತ್ತೆ ವನಜಸುಮ ಕಮನೀಯ ಕಮಲಮುಖದಿಂ ವಿಮಲ ಶಶಿಕಾಂತಿಯಿಂ ಯಶೋಜ್ಯೋತಿಯಿಂ ಭಾಸುರ ಪ್ರಭೆಯಿಂ ಕಾಂತೆಯರ ಅಂತರಂಗ ದೊಳನಂತ........'

'ಭಾಪು! ಭಾಪು!! ಪುತ್ರಿಯರೇ, ಇಂದು ಆಗಮಿಸುತ್ತಲಿರುವಂತಹ ಕನ್ನಡ ರಾಜನನ್ನು ನೋಡುತ್ತ ಕವಿತ್ವದ ಮೇಲಾಟಕ್ಕೆ ನೀವೀರ್ವರೂ ಬದ್ಧ ರಾದಂತೆ ತೋರುತ್ತದೆ.' ಗಜಪತಿ ನಗುಮುಖದಿಂದ ನುಡಿಯುತ್ತ ಅಲ್ಲಿಗೆ ಬಂದನು.

ಇಬ್ಬರ ಮುಖಗಳೂ ಕೆಂದೇರಿ ಸುಂದರವಾಗಿ ತೋರಹತ್ತಿದುವು ಲಜ್ಜೆಯಿಂದ ಸುಮ್ಮನೆ ನಿಂತುಬಿಟ್ಟರು.

'ಮೋಹಿನಿ, ಹೀಗೆ ಇಲ್ಲಿ ನಿಂತುಬಿಟ್ಟರೆ ಹೇಗೆ? ನರಪತಿಯು ಬಾಗಿಲಿಗೆ ಬರುತ್ತಲೇ ಆತನಿಗೆ ಮಂಗಲಾರುತಿಯೆತ್ತುವುದಿಲ್ಲವೆ? ನಿಮ್ಮ ನಿಮ್ಮ ಭಾವೀ ವಲ್ಲಭರಿಗೆ ಶುಭಾಗಮನ ಸೂಚಿಸುವುದೊಳಿತಲ್ಲವೆ?' ಎಂದು ಉಪಹಾಸದಿಂದ ನುಡಿದು ನಕ್ಕನು.

ಒಡನೆಯೇ ಮೂವರೂ ಕೆಳಗಿಳಿದು ಬಾಗಿಲಿಗೆ ಬಂದು, ಸೇವಿಕೆಯರು ಸಿದ್ಧವಾಗಿರಿಸಿದ್ದ ಮಂಗಲಾರುತಿ ತಮ್ಮ ಮಂಗಲ ಕರಗಳಲ್ಲಿ ಪಿಡಿದು, ಮಂಗಲವಾದ್ಯಗಳೊಡನೆ ಬರುವ ಮಂಗಲಾಂಗನ ಮಂಗಲಾಗಮನ ನಿರೀಕ್ಷಿ ಸುತ್ತ ಮಂಗಲಾದೇವಿಗೆ ವಂದನೆಗಳನ್ನರ್ಪಿಸುತ್ತ ನಿಂತರು. ಅಲ್ಪಾವಕಾಶ ದಲ್ಲಿ ನರಪತಿ ಸಕಲ ವೈಭವಗಳಿಂದಾಗಮಿಸಿದನು. ಜಗನ್ಮೋಹಿನಿಯ ಕಣ್ಣಿಗೆ ಹಬ್ಬನಾಯಿತು. ಮನಕ್ಕೆ ಹರುಷವಾಯಿತು. ಹೃದಯ ಆನಂದ ದಿಂದ ಉಬ್ಬಿಹೋಯಿತು.

ಚಿನ್ನರನ್ನದೊಡಪುಗಳಿಂದ ಭೂಷಿತವಾದ ರಾಜಗಜದ ಮೇಲಿರಿಸಿದ ನವರತ್ನಗಳ ಅಂಬಾರಿಯಲ್ಲಿ ಶಶಿಬಿಂಬವನ್ನಣಕಿಸುವ ಸುಂದರ ಸುಕುಮಾರ ವೀರ ನರಪತಿ ಕುಳಿತಿದ್ದನು. ಮುಖದಲ್ಲಿ ಮಧುರ ಹಾಸ್ಯ ಲಾಸ್ಯವಾಡುತ್ತ ಲಿದಿತು ನೋಟದಲ್ಲಿ ಗರ್ವಿತರನ್ನು ಉರ್ಮಿಗಿಳಿಸುವ ದರ್ಪ ಅಡಗಿದಿತು.

ನಗುಮೊಗದಿಂದ ಸುತ್ತಲೂ ನೋಡಿದಲ್ಲಿ, ಬಾಗಿಲಲ್ಲಿ ಕನಕದ ಲತೆಯಂತೆ, ರನ್ನದ ಬೊಂಬೆಯಂತೆ, ಮನ್ಮಥನರಗಿಳಿಯಂತೆ, ಸಮುದ್ರಪುತ್ರಿ ಲಕುಮಿಯಂತೆ, ವಾಗ್ದೇವಿ ಸರಸತಿಯಂತೆ, ಕವಿಯ ಪ್ರತಿಭೆಯಂತೆ.. ... ....ಜಗನ್ಮೋಹಿನಿ! ಸುಂದರಾಲಂಕಾರಗಳಿಂದ ಸುಭೂಷಿತಳಾದ, ಶೋಭನಾಕಾರದಿಂದ ಶುಭಾಗಮನ ಸೂಚಿಸುವ, ಸುಹಾಸದಿಂದ ಶೋಭಿಸುವ, ಜಗನ್ಮೋಹಿನಿ ರನ್ನದ ಹರಿವಾಣದಲ್ಲಿ ಚಿನ್ನದ ನೀರಾಜನಗಳನ್ನಿರಿಸಿ ಮಂಗಲಜ್ಯೋತಿಯ ಮಂಗಲಾರುತಿಯನೆತ್ತಲು ಅಂಗನೆಯರ ಮಧ್ಯದಲ್ಲಿ ಅಂಗಜನ ರಾಣಿಯ ಬಿಂಕದಿಂದ ನಿಂತಿದ್ದಳು. ಇಬ್ಬರ ಕಣ್ಣು ಕಲೆತವು, ಶರೀರ ಕಂಪಿಸಿದವು, ಹೃದಯ ನಲಿದಾಡಿದವು, ವಸನ ಬೆಮರ್ವನಿಗಳಿಂದ ತೊಯ್ದವು, ಮುಖಕಮಲ ಪ್ರಭೆಯನ್ನು ತಳೆದವು.

ಜಗನ್ಮೋಹಿನಿ ಲಜ್ಜೆಯಿಂದ ರನ್ನದಾರುತಿ ಹಿಡಿದು ಮುಂಬಂದಳು. ಶಶಿಲೇಖೆ ತನ್ನಿನಿಯನನೀಕ್ಷಣೆಯಲ್ಲಿ ಮಗ್ನಳಾಗಿದ್ದಳು ಆಕೆ ಹಿಂದೆ ಉಳಿಯಲು, ಜಗನ್ಮೋಹಿನಿ ಮೆಲ್ಲನೆ 'ಲೇಖೆ, ಹೀಗೆ ಪರವಶಳಾಗಬೇಡ. ಈಗಲೆ ಹೀಗೆ ಮಾಡಿದರೆ ಮುಂದೆ ಗತಿಯೇನು?' ಎಂದು ನಗೆಯಾಡಿದಳು.

ಶಶಿಲೇಖೆಯಾದರೂ ಕಡಿಮೆಯವಳೇ? 'ರಾಜಪುತ್ರೀ, ಮಹಾಜನೋಯೇನ ಗತಃ ಸ ಪಂಥಃ ।' ಎಂದು ಮೆಲುನಗೆಯಿಂದ ನುಡಿದಳು

ನರಪತಿ ಗಜದಿಂದಿಳಿದು ಮುಂಬಂದು ನಿಲ್ಲುತ್ತಲೆ, ಈರ್ವರೂ ಮಂಗಲಾರುತಿ ಬೆಳಗಿ ವಿಜಯ ತಿಲಕವನಿಟ್ಟು ಸುಹಾಸದಿಂದ ಸ್ವಾಗತಿಸಿದರು. ಅಂದಿನ ನೋಟ ಅವರ್ಣನೀಯವಾದುದು. ಅದನ್ನು ನೋಡುವ ಸುಸಮಯ ಸಾಧಿಸಿದಂತಹ ಆ ಸುದೈವಿಗಳ ಭಾಗ್ಯವೇ ಭಾಗ್ಯ! ಅಲ್ಲಿ ನಿಂತವರ ಕಣ್ಣು ತಣಿದವು, ಭಯ-ಭೀತಿ ಹರಿದವು, ಮದ-ಮಾತ್ಸರ್ಯ ತೊರೆದವು. ಇಂತಹ ಸುಂದರತಮವಾದ ಇನಿನೋಟ ಸಿಕ್ಕುವುದು ತೀರಾ ವಿರಳ. ಮತ್ತೂ ಮತ್ತು ನೋಡಿ ಆ ಸೌಂದರ್ಯವನ್ನು ತಮ್ಮ ಹೃದಯಗಳಲ್ಲಿ ಸಂಗ್ರಹಿಸಿಟ್ಟುಕೊಳ್ಳುವುದೇ ಅವರ ಕೆಲಸವಾಗಿತ್ತು.

ಗಜಪತಿ ಮುಂದೆ ಬಂದು ನರಪತಿಯ ಕೈಹಿಡಿದು ಆದರದಿಂದ ಕರೆದೊಯ್ದು ಸಭಾಮಂಟಪದಲ್ಲಿ ಕೂರಿಸಿದನು. ಆ ಸಭಾಮಂಟಪದ ಶೃಂಗಾರವು ಅವರ್ಣನೀಯವೇ ಆಗಿದ್ದಿತು. ಅದನ್ನು ಓದುಗರ ಊಹೆಗೇ ಬಿಟ್ಟುಕೊಟ್ಟು ಮುಂದಿನ ಕಾರ್ಯ ಕೈಕೊಳ್ಳುವೆನು. ಎದುರಿಗೆ ಸುಂದರತಮವಾಗಿ ಸಂಗೀತ-ನೃತ್ಯಾದಿಗಳು ನಡೆದುವು ಕುಶಲ ಗಾಯಕರು ಕೇಳುವವರನ್ನು ಗಂಧರ್ವಲೋಕಕ್ಕೆಳೆದೊಯ್ದರು ಬೆಡಗುಗಾತಿಯರಾದ ನರ್ತಕಿಯರು

ಭಾರತೀಯ ನೃತ್ಯಕಲೆಯ ಸಜೀವಮೂರ್ತಿಗಳೇ ತಾವೆಂಬಂತೆ ಬಹು ಚಾತುರ್ಯದಿಂದ ನೃತ್ಯನೈಪುಣ್ಯ ಪ್ರದರ್ಶಿಸಿದರು. ಆ ಮೇಲೆ ಸಭಾಕಾರ್ಯಕ್ಕಾರಂಭವಾಯಿತು. ಅದರಲ್ಲಿ ಮುಖ್ಯವಾದುವೆಂದರೆ, ಕನ್ನಡದೊರೆಗೆ ಕಲಿಂಗ ನಾಡಿನ ಮನ್ನಣೆಯರ್ಪಿಸುವುದು.

ಕಲಿಂಗ ಮಂತ್ರಿ ದಾಮೋದರಶರ್ಮನು ಆ ಕೆಲಸವನ್ನು ಹೃದಯ ಸೂಸಿ ಹರಿಯುವಂತೆ ಬಹು ಅಂದವಾಗಿ ಮಾಡಿದನು. ಅವನ ಅಂದಿನ ಭಾಷಣವು ಅದ್ವಿತೀಯವಾಯಿತು. ಕನ್ನಡಿಗರ ಚತುರ ಮಂತ್ರಿ ಅಪ್ಪಾಜಿ ಕೂಡ ತಲೆದೂಗಿದನು. ಆ ಮೇಲೆ ಅವನಿಗೆ ಉತ್ತರ ರೂಪವಾಗಿ ಅಪ್ಪಾಜಿ ಮಾತನಾಡಲೆದ್ದನು. ಅಪ್ಪಾಜಿ ಎದ್ದು ನಿಲ್ಲುತ್ತಲೆ, ಸಭಿಕರೆಲ್ಲರೂ ಸ್ತಬ್ಧರಾದರು. ಭಾರತೀಯ ಕೆಲವೇ ಮುತ್ಸದ್ದಿಗಳಲ್ಲೋರ್ವನಾದ ಅಪ್ಪಾಜಿಯ ಅಂದಿನ ಭಾಷಣವನ್ನು ಕೇಳಲು ಎಲ್ಲರೂ ಉತ್ಕಂಠೆಯಿಂದ ಎದುರು ನೋಡುತ್ತಲಿದ್ದರು. ಅಪ್ಪಾಜಿ ತನ್ನ ಭಾಷಣ ಸಾಗಿಸಿ ಮುಗಿಸಿದನು. ಆತನ ವಾಗ್ಝರಿ, ವಿದ್ವತ್ಪೂರ್ಣ ವಾಕ್ಯಸರಣಿ, ವಿಚಾರಪರಿಪ್ಲುತ ವಿಷಯ, ಸುಮಧುರ ಹಾಸ್ಯ ಇವುಗಳಿಂದ ಸಭಿಕರು ತಲೆದೂಗಿ ಹೋದರು. ಹೀಗೆ ಮಂತ್ರಿಗಳೀರ್ವರ ವಿದ್ವತ್ಪೂರ್ಣ ಭಾಷಗಳಾದುವು. ಅದರಲ್ಲಿ ಭಾರತೀಯರು ಒಕ್ಕಟ್ಟಿಲ್ಲದೆ ನಷ್ಟಕ್ಕೆ ಗುರಿಯಾದುದು ಚನ್ನಾಗಿ ಚಿತ್ರತವಾಗಿದ್ದಿತು ಇಬ್ಬರೂ ಐಕ್ಯದ ತತ್ವವನ್ನು ಬಹು ಚನ್ನಾಗಿ ಪ್ರತಿವಾದಿಸಿದರು. ಇಬ್ಬರೂ ಕಲಿಂಗ-ಕರ್ನಾಟಕದ ಐಕ್ಯದಿಂದ ಎರಡೂ ರಾಷ್ಟ್ರಗಳು ಉನ್ನತಿಗೇರಿ, ತನ್ಮೂಲಕ ಭಾರತಕ್ಕೆ ಅಜರಾಮರ ಕೀರ್ತಿ ದೊರೆಯುವಂತೆ ಆಶಿಸಿದರು.

ಕೂಡಲೆ ಕಲಿಂಗರಾಜ ಗಜಪತಿಯು ನರಪತಿಗೆ ಕಾಣಿಕೆ ಕೊಡಲೆದ್ದನು.-'ಬಂಧುಗಳೇ, ಇಂದಿನ ಶುಭ ಪ್ರಸಂಗವು ನಮಗೆ ದೊರೆಯಬಹುವೆಂದು ನಾನೆಣಿಸಿರಲಿಲ್ಲ ಯುದ್ಧಕ್ಕೆ ರಾಜಶ್ರೇಷ್ಠ ನರಪತಿ ಅಲ್ಲಾದರೂ ಕಾ-ರಣವಿರದೆ, ನಾನೇ ಕಾರಣನೆಂಬದನ್ನು ಸಮ್ಮತಿಸುವೆನು. ಯುದ್ಧಕ್ಕೆ ನರಪತಿ ಉದ್ಯುಕ್ತನಾಗುವಂತೆ ಮಾಡಿರುವವನಾದರೂ ನಾನೇ. ಮುಂದೆ ನರಪತಿಯ ನಿಜವಾದ ಔದಾರ್ಯವನ್ನು ಅರಿಯದಲೆ ಜೈತ್ರವೆಂಬ ಒಂದೇ ದೃಷ್ಟಿಯಿಂದ ನಮ್ಮನ್ನು ಕಾಲ ಕೆಳಗೆ ತುಳಿಯಬಹುದೆಂದೆಣಿಸಿದೆನು; ಆದರೆ ನರಪತಿ ನಮ್ಮ ವಿಚಾರಗಳಿಗಿಂತ ತೀರ ಭಿನ್ನರಾಗಿರುವರು ಅವರು ಉದಾರರಿರುವರು, ಚತುರರಿರುವರು, ವೀರರಿರುವರು, ಪುರುಷರಲ್ಲಿ ರತ್ನಪ್ರಾಯರಿರುವರು. ತಮ್ಮ ಅಸಮ ಔದಾರ್ಯದಿಂದ ಕಲಿಂಗನಾಡವರನ್ನೆಲ್ಲ ತಮ್ಮವರನ್ನಾಗಿ ಮಾಡಿಕೊಂಡಿರುವರಲ್ಲದೆ, ಇಂತಹ ಅತ್ಯಾನಂದಕರ ಸುಸಂಧಿ ಸಂಧಿಸುವಂತೆ ಮಾಡಿದರು.

ಇಂದಿನ ಈ ಅತ್ಯಂತ ವೈಭವಪೂರ್ಣ ಅಮೃತಮಯ ಸುಸಮಯ ಕಲಿಂಗದಿತಿಹಾಸಿನಲ್ಲಿ ಸರ್ವಕಾಲವೂ ಸ್ಮರಿಸಲ್ಪಡುವುದು. ಅದರಂತೆ ಈ ಸುಮಧುರ ಸಮ್ಮೇಳನ ಕನ್ನಡ ದೊರೆಯ ಮನದಲ್ಲುಳಿಯಲೆಂದು ನರಪತಿಗೆ ಒಂದು ಸ್ಮರಣೆ ಕೊಡಬೇಕೆಂದು ನಾವು ನಿರ್ಧರಿಸುತ್ತೇವೆ. ವಿಜಯನಗರದ ಅಗಣಿತ ವೈಭವದಲ್ಲಿ ಒಡೆದು ಕಾಣುವಂತಹ ಯಾವ ಶ್ರೇಷ್ಠರತ್ನಗಳೂ ನಮ್ಮಲ್ಲಿಲ್ಲ; ಆದುದರಿಂದ ಯಾವನೊಂದು ವಸ್ತುವನ್ನಿತ್ತು, ನಮ್ಮೀ ಕಾರ್ಯ ಕೈಗೂಡಿಸಲು ಬರುವಂತಿಲ್ಲ; ಆದುದರಿಂದ ಕರ್ನಾಟಕ ಸಾಮ್ರಾಜ್ಯಾಧೀಶ್ವರರಿಗ ಅವರಿಗಿರುವ ಬಿರುದು ಮಾಲೆಯಲ್ಲಿನ್ನೊಂದು ಪೋಣಿಸುವೆನು. ಅದರಿಂದ ಅವರಾ ಬಿರುದು ಮಾಲಿಕೆಯಲ್ಲಿ ನಮ್ಮೀ ಕಲಿಂಗದ, ತನ್ಮೂಲಕ ಇಂತಹ ಆನಂದಕಾರ ಸಂಗತಿಯ ಸ್ಮರಣೆ ಆವಾಗಲೂ ಉಳಿಯುವುದು.' ಹೀಗೆ ಹೇಳಿ, ಬಾಮೋದರಶರ್ಮನಿತ್ತ ಒಂದು ರತ್ನದ ಹಿಡಿಕೆಯ ಖಡ್ಗವನ್ನು ನರಪತಿಗಿತ್ತನು. ಅದರ ಮೇಲೆ 'ಗಜಪತಿ ಸಪ್ತಾಂಗ ಹರಣ' ಎಂದು ಕೆಚ್ಚಿದ್ದಿತು ಒಡನೆಯೇ ಎಲ್ಲರೂ ಎದ್ದು ನಿಂತು, ನರಪತಿಯ ಹೆಸರಿನಲ್ಲಿ ಜಯಘೋಷ ಮಾಡಿದರು. ಅಪ್ಪಾಜಿ ಮೊದಲಾದ ಕನ್ನಡ ವೀರರ ಕಣ್ಣುಗಳಿಂದ ಆನಂದಾಶ್ರುಗಳು 'ದಳ' 'ದಳ'ನೆ ಸುರಿಯುತ್ತಲಿದ್ದುವು. ಅವರು ಆನಂದ ಪರವಶರಾಗಿ ಅನನ್ಯಮನದಿಂದ ಪಂಪಾಪತಿಗೆ ಪ್ರಾರ್ಥನೆ ಸಲ್ಲಿಸಿದರು.

ಈ ಹರ್ಷಗಡಲಿನ ಏರಿಕೆ ಕೊಂಚ ಇಳಿಯಲು, ಗಜಪತಿ ಪುನಃ ಎದ್ದನು. 'ನಮ್ಮ ಪ್ರಿಯ ಸಭಿಕರೇ, ಕನ್ನಡದೊರೆಗಳ ಶೌರ್ಯಕ್ಕೊಂದು ಕಾಣಿಕೆಯಿತ್ತೆವು. ಇನ್ನು ಅವರಲ್ಲಿ ನಾನೊಂದು ಬಿನ್ನಹ ಕೇಳಿಕೊಳ್ಳಬೇಕಾಗಿದೆ, ಎನ್ನಲು, ಗಜಪತಿಯ ಮನದಲ್ಲಿದ್ದ ಸಂಗತಿ ಅಪ್ಪಾಜಿ ಮೊದಲಾದವರಿಗೆ ತಿಳಿದು ಹೋಯಿತು, ಆದರೆ ಕಲಿಂಗ ಸಭಾಸದರು ಗಜಪತಿಯ ಮುಖವನ್ನೇ ನಿರೀಕ್ಷಿಸುತ್ತ ಕುಳಿತರು. 'ನಮ್ಮ ಪ್ರಿಯಸಭಿಕರೆ, ನಾವು ಯಥಾಶಕ್ತಿ ನಮ್ಮ ಕಾಣಿಕೆಯಿತ್ತುದಾಯಿತು. ಈಗ ಕನ್ನಡ-ಕಲಿಂಗಗಳಲ್ಲಿ ಒಂದು ಸಂಸ್ಮರಣೀಯವಾದ ಸಂಬಂಧ ಜೋಡಿಸಬೇಕೆಂದಿರುವೆ. ಅದೇನಂದರೆ, ನಮ್ಮ ಕಲಿಂಗ ರಾಜಪುತ್ರಿ ಜಗನ್ಮೋಹಿನೀದೇವಿಯನ್ನು ಕನ್ನಡ ದೊರೆಗಳು ಸ್ವೀಕರಿಸಿ, ಅನುಗ್ರಹಿಸಬೇಕೆಂದು ಬಿನ್ನವಿಸುತ್ತೇನೆ.' ಎಂದು ನುಡಿದನು.

ಹರ್ಷೋದ್ಗಾರಗಳು ಎಲ್ಲೆಡೆಯಲ್ಲೂ ಕೇಳಬರಹತ್ತಿದುವು. ಸಭಾ ಮಂದಿರವೆಲ್ಲವೂ ಹರ್ಷನಾದದಿಂದ ತುಂಬಿಹೋಯಿತು. ಆ ಆನಂದೋಧಧಿಯ ಪೂರದಲ್ಲಿಯೇ ನರಪತಿ ಗಜಪತಿಯ ಭಾಷಣಕ್ಕೆ ಉತ್ತರವೀಯಲೆದ್ದನು. 'ಕಲಿಂಗಸಾರ್ವಭೌಮರೇ, ಇಂದಿನ ಈ ರಮಣೀಯ ನೋಟ ನೋಡುವ

ಸುಸಂಧಿ ದೊರೆತ ಮಾನವನೇ ಧನ್ಯನು. ಅದರಲ್ಲಿ ಪ್ರತ್ಯಕ್ಷವಾಗಿ ಪ್ರಮುಖ ಪಾತ್ರ ವಹಿಸಿದ ನನಗಂತೂ ಆದ ಆನಂದ ಹೇಳದಷ್ಟಾಗಿದೆ. ನೀವೆಲ್ಲರೂ ಮನ್ನಣೆ ಮಾಡಿದುದು ನನ್ನ ಮಟ್ಟಿಗಿರದೆ, ಹೆಸರು ಪಡೆದ ಕನ್ನಡನಾಡಿಗೆ, ಕನ್ನಡ ಸಾಮ್ರಾಜ್ಯಕ್ಕೆ, ಕನ್ನಡ ಮಾತೆಗೆ, ಕನ್ನಡ ಸಿಂಹಾಸನಕ್ಕೆ, ಕನ್ನಡ ರಾಜ್ಯ ಸ್ಥಾಪಿಸಿದ ಆ ಮಹಾಮಹಿಮ ಶ್ರೀ ವಿದ್ಯಾರಣ್ಯ ವೀರ ಯತಿಗಳಿಗೆ ಎಂದಿಷ್ಟು ಹೇಳಿದರೆ ಸಾಕು. ನಾನಿದುವರೆಗೆ ಹೇಳಿದ ಹೆಸರುಗಳೆಲ್ಲವೂ ಮನ್ನಣೆಗೆ ತೀರಾ ಯೋಗ್ಯವಾದುವುಗಳಿವೆ ಆನಂದದಿಂದ ನನ್ನ ಕನ್ನಡನಾಡು ಸದಾ ಸರ್ವದಾ ಹೀಗೆ ಎಲ್ಲೆಡೆಯಲ್ಲೂ ತನ್ನ ಉದಾರಚರಿತೆಯಿಂದ ಹೆಸರು ಹೊಂದುತ್ತಲಿರಲಿ, ಎಂಬದೇ ನನ್ನ ಹಾರೈಕೆ. ಈ ಸಲ ಕಲಿಂಗನಾಡವರು ಕನ್ನಡಿಗರ ಮಿತ್ರರಾಗಿರುವರೆಂಬದು ಇನ್ನೂ ಆನಂದಕರ ಸಂಗತಿಯು. ಹೀಗೆ ದೊರೆತ ಮೈತ್ರಿ ಆಚಂದ್ರಾರ್ಕವಾಗುಳಿಯಲೆಂದು ಹಾರೈಸುವೆನು. ಇನ್ನು ಕಲಿಂಗ ಸಾರ್ವಭೌಮರ ಬಿನ್ನಹದ ವಿಚಾರ. ನಾನದನ್ನು ಬಿನ್ನಹವೆಂದು ತಿಳಿದುಕೊಳ್ಳದೆ, ಅನುಗ್ರಹವೆಂದೇ ಭಾವಿಸುವೆನು. ಕಲಿಂಗರಾಜಪುತ್ರಿ ಕರ್ನಾಟಕ ಮಹಾರಾಣಿಯಾಗಲು ತೀರಾ ಯೋಗ್ಯರಿರುವರು. ಆದುದರಿಂದ ಅವರ ಬಿನ್ನಹವನ್ನು ನಾನು ಅತ್ಯಾನಂದದಿಂದ ಸ್ವೀಕರಿಸಿ, ಅನುಗ್ರಹೀತನಾದೆನೆಂದು ಭಾವಿಸುವೆನು.

ಹೀಗೆ ಆನಂದಮಯ ವಾತಾವರಣದಲ್ಲಿ ವಿಹರಿಸುವ ಅಂದಿನ ಆ ಭಾಗ್ಯಶಾಲೀ ಸುದೈವಿಗಳಾದ ಕನ್ನಡಿಗರ ಕಾಲವು ಅತ್ಯಾನಂದದಿಂದ ಮುಂದೊರೆಯಲು ಅಲ್ಪಾವಕಾಶದಲ್ಲಿಯೇ ವಿವಾಹಸಮಾರಂಭವಾಯಿತು. ವಿವಾಹಸಮಾರಂಭದ ವರ್ಣನೆ ಮಾಡುವುದೇನು? ಇಬ್ಬಣವೂ ವೈಭವಪರಿಪೂರ್ಣ ಅರಸು ಮನೆತನಗಳು. ಆ ವೈಭವವು ಹೇಗಾಯಿತೆಂದು ವರ್ಣಿಸುವುದಕ್ಕಿಂತ ಊಹಿಸುವುದೇ ಮೇಲು. ಅತ್ಯಂತ ವೈಭವಪೂರ್ಣ ಸಂಭ್ರಮದ ಉತ್ಸವವು ಆದಾಯಿತೆಂದು ಹೇಳಿದರೆ ತಮಗೆ ಕೊಂಚ ಕಲ್ಪನೆಯಾಗಬಹುದು ಅದೇ ಸಮಯದಲ್ಲಿ ರಾಮಲಿಂಗ-ಶಶಿಲೇಖೆಯರ ವಿವಾಹ ಮಹೋತ್ಸವವೂ ನಡೆಯಿತು.



## ೧೫ ಶುಭಾಗಮನ.

ಓದುಗ ಮಹಾಶಯ, ವಿಜಯನಗರದ ವೀರನರಪತಿ ಶ್ರೀ ಕೃಷ್ಣದೇವ ರಾಯನ ವೀರ ಚರಿತೆಯಲ್ಲಿನ ಕಲಿಂಗವಿಜಯದ ಈ ಭಾಗ ಕೊನೆಗಂಡಂ ತಾಯಿತು ಈಗ ನಾಲ್ಕುನೂರು ವರ್ಷಗಳಿಗೆ ಮೊದಲು ಆಳಿ ಹೋದ ವೀರ ನರಪತಿ ಈತ. ಶ್ರೀ ಕೃಷ್ಣದೇವರಾಯ ಮತ್ತು ಅಂದು ಈತನ ಸಂಗಡಿಗರಾದ ಭಾಗ್ಯವಂತ ಕನ್ನಡಿಗರ ಶೌರ್ಯೌದಾರ್ಯಗಳನ್ನು ಘಂಟಾ ಘೋಷವಾಗಿ ಸಾರುವ ಕಲಿಂಗ ದಿಗ್ವಿಜಯವನ್ನು ತಾವು ಇದು ವರೆಗೆ ಓದಿ ಅರಿತಿರುವಿರಿ. ಇನ್ನುಳಿದ ಕತೆಯೆಂದರೆ, ವಿಜಯಶಾಲೀ ವೀರ ಕನ್ನಡಿಗರು ವಿಜಯನಗ ರಕ್ಕೆ ಮರಳಿ ಬಂದು ಮಹಾ ವೈಭವದಿಂದ ನಗರಪ್ರವೇಶ ಮಾಡಿದುದು. ಮಹಾಶಯ, ನೀವೇ ಊಹಿಸಿ; ಅಂದಿನ ಆ ನೋಟ ಅದೆಷ್ಟು ರಮಣೀಯ ವಾಗಿರಬಹುದು!

ವಿಜಯನಗರದ ಹೊರಭಾಗದ ವಿಸ್ತೀರ್ಣವಾದ ಬಯಲಲ್ಲಿ ವಿಜಯ ನಗರದಲ್ಲಿ ವಾಸಿಸುವ ಲಕ್ಷಾವಧಿ ಜನರು ಆತುರತೆಯಿಂದ ರಾಯನ ಬರವನ್ನೇ ನಿರೀಕ್ಷಿಸುತ್ತ ನಿಂತಿರುತ್ತಾರೆ. ಒಂದು ಬದಿಯಲ್ಲಿ ವಿಜಯ ನಗರದ ವೀರ ಸೈನಿಕರ ಪಡೆಯೊಂದು ಮಹಾಪ್ರಭುವಿಗೆ ಮನ್ನಣೆ ಸಲ್ಲಿಸಲು ಸಿದ್ಧವಾಗಿ ನಿಂತಿರುವದು. ವಿಜಯನಗರದ ಭಿನ್ನ ಭಿನ್ನ ಅಧಿಕಾರೀ ವರ್ಗದವರು 'ಕನ್ನಡ ದೊರೆಯಾಗಮನ ನಿರೀಕ್ಷಣೆಯಲ್ಲಿ ಮಗ್ನರಾಗಿದ್ದರು. ಇಂತು ಅತ್ಯಂತ ಆತುರತೆಯಿಂದ ಕಾಯುತ್ತಿರುವ ಆ ಜನಸಮುದಾಯದ ಹರ್ಷವು ಉಕ್ಕೇರುವಂತೆ ಅಲ್ಪಾವಕಾಶದಲ್ಲಿಯೇ ನರಪತಿಯಾಗಮನವಾಗು ತ್ತದೆ ಎಲ್ಲರೂ ಏಕ ಕಂಠದಿಂದ ನರಪತಿಯ ನಾಮಘೋಷ ಮಾಡುತ್ತಾರೆ. ಮುಂದೆ ಅಲ್ಪಾವಕಾಶದಲ್ಲಿಯೆ ನರಪತಿ ತನ್ನ ಮನದನ್ನಿಯಳು ಜಗನ್ಮೋಹಿನಿ ಯೊಡನೆ ರಾಜಗಜವನ್ನೇರುವನು. ಅಂದವಾದ ರನ್ನ-ಚಿನ್ನಗಳಿಂದ ಕೆಚ್ಚಿದ ಅಂಬಾರಿಯಲ್ಲಿ ಈರ್ವರೂ ವಿರಾಜಿಸುತ್ತಲೇ ರಾಜಗಜ ಸಾಗುತ್ತದೆ. ಆ ಮೆರವಣಿಗೆ ಅತ್ಯಂತ ಸಂಪತ್ಪೂರ್ಣವಾದುದಿರುವುದು ಇಂತಹ ವೈಭವ ಪರಿಪೂರ್ಣವಾದಾ ಮೆರವಣಿಗೆ ಮುಂದೊರೆಯುತ್ತಲೆ ಮಂಗಲವಾದ್ಯಗಳು ಮೊಳಗಲಾರಂಭಿಸುತ್ತವೆ. ಮೆಲ್ಲಗೆ ಮುಂದೊರೆದುದದು ಸುಂದರವಾಗಿ ಅಲಂ ಕರಿಸಲ್ಪಟ್ಟ ಹೆಬ್ಬಾಗಿಲಿಗೆ ಬರುತ್ತದೆ. ಅಲ್ಲಿ ಸುವಾಸಿನಿಯರು ಕನ್ನಡ

ಸಮ್ರಾಟ-ಸಮ್ರಾಜ್ಞಿಯವರಿಗೆ ಮಂಗಲವನ್ನು ಸೂಚಿಸುವ ಮಂಗಲಾರುತಿ ಬೆಳಗುವರು ಒಡನೆಯೆ ಆ ರಾಜವೈಭವದ ಮೆರವಣಿಗೆ ಒಳಗೆ ಪ್ರವೇಶಿಸುತ್ತದೆ. ಮುಂದೆ ವಿಜಯನಗರದ ವೈಶಿಷ್ಟ್ಯವೇ ಆದ ಹಲವು ದೇವಾಲಯಗಳಿವೆ ಅತ್ಯಂತ ಶೋಭೆಯನ್ನು ನೀಡುವಂತೆ ಅಲಂಕರಿಸಲ್ಪಟ್ಟಿವೆ. ಅಲ್ಲಿ ರನ್ನದ ತೋರಣಗಳಿಂದ ಸೂರ್ಯನಂತೆ ಲಕಲಕಿಸುವ ಇನ್ನೊಂದು ಹೆಬ್ಬಾಗಿಲಿದೆ ಅದನ್ನು ದಾಟುತ್ತಲೆ ತೋರಣ, ತಳಿರು, ರಂಗವಲ್ಲಿಗಳಿಂದ ಸುಂದರವಾಗಿ ಶೃಂಗರಿಸಲ್ಪಟ್ಟ ಬೀದಿಗಳು ಇಕ್ಕೆಲದಲ್ಲಿಯೂ ಭವ್ಯವಾದ ಮಹಡಿಗಳು ಕೆಳಗೆ-ಮೇಲೆ ಎಲ್ಲೆಡೆಯಲ್ಲಿಯೂ ಪೌರಸ್ತ್ರೀಯರು ಅಂದ-ಚಂದದ ವೇಷ-ಭೂಷಗಳಿಂದಲಂಕೃತರಾಗಿ, ದೇವನಾರಿಯರನ್ನು ಹಿಂದೆ ಹಾಕುವ ಸೌಂದರ್ಯವನ್ನು ಬೀರುತ್ತ ನಿಂತಿರುವರು. ಚಿಕ್ಕವರಿಗೆ ಪ್ರೇಮದ ಬಂಧುವಿನಂತೆ, ಹಿರಿಯರಿಗೆ ಮಮತೆಯ ಮಗನಂತೆ ತೋರುವ ಆ ನರಪತಿಯನ್ನೂ ಆತನ ಬದಿಯಲ್ಲಿಯೆ ತನ್ನ ಸೌಂದರ್ಯ ಪ್ರಭೆಯಿಂದ ವಿಜಯನಗರವನ್ನೇ ಬೆಳಗುವ ಕನ್ನಡ ಮಹಾರಾಣಿಯನ್ನೂ ಪೌರನಾರಿಯರು ಕಣ್ಣಾಣೀ ನೋಡುತ್ತಲಿರುವರು..... ... . '

ಓದುಗ ಮಹಾಶಯ, ನೀವು ಕಲ್ಪನೆಯ ಕನಸಿನಲ್ಲಿ ಕಂಡ ಈ ಸುಂದರ ನೋಟಕ್ಕಿಂತಲೂ ಅಂದಿನಾ ಮೆರವಣಿಗೆ ಅತ್ಯಂತ ಸುಂದರಮಯವಾಗಿದ್ದಿತೆಂದರೆ—ನೂರ್ಮಡಿ ಅಂದವಾಗಿದ್ದಿತೆಂದರೆ, ನೀವು ಇನ್ನೂ ನಿಮ್ಮಾ ಕಲ್ಪನಾ ಸೃಷ್ಟಿಶೋಭೆ ಹೆಚ್ಚಿಸಿಕೊಳ್ಳಬಹುದು.

ವಿಜಯನಗರದಲ್ಲಿ ಅಂದಿನ ಆ ಸಮಯವೆಂದರೆ ಅವರ್ಣನೀಯ ಆನಂದದಿಂದ ಪರಿಪೂರ್ಣವಾದ ಸನ್ನಿವೇಶವೇ ಆಗಿದ್ದಿತು. ಅಂದಿನ ಆ ಭಾಗ್ಯವಂತ ಕನ್ನಡಿಗರು ಕಣ್ದಣಿ ನೋಡಿ ನಲಿದರು. ಆನಂದಿಸಿದರು. ಸಂತೋಷಬಟ್ಟರು.

'ಪ್ರಭುಗಳೇ, ನಾವಿದುವರೆಗೆ ಕೇಳಿದುದಕ್ಕಿಂತಲೂ ವಿಜಯನಗರವು ನೂರ್ಮಡಿಯಾಗಿಯೋ ಸಾಸಿರ ಮಡಿಯಾಗಿಯೋ ಸೌಂದರ್ಯಪ್ರಭೆಯಿಂದ ಪರಿಪೂರ್ಣವಾಗಿದೆ.' ಜಗನ್ಮೋಹಿನಿ ಆನಂದತುಂದಿಲಳಾಗಿ ನುಡಿದಳು.

'ದೇವಿ, ಇದು ಶ್ರೀ ವಿದ್ಯಾರಣ್ಯ ಯತಿವರರು ತಮ್ಮ ಅಖಂಡ ತಪೋಬಲವನ್ನೆರೆದು ಕಟ್ಟಿ ಕಾಯುತ್ತಲಿರುವ ಕನ್ನಡ ಸಾಮ್ರಾಜ್ಯಕ್ಕೆ ಮುಖ್ಯ ಪಟ್ಟಣವು. ಇನ್ನು ಇಂತಹ ಸುಂದರ ಸಾಮ್ರಾಜ್ಯದೊಡತಿ ನೀನಿರುವೆ.' ರಾಯನು ಹರ್ಷಪೂರ್ಣಸ್ವರದಿಂದ ಜಗನ್ಮೋಹಿನಿಯ ಸುಂದರ ಮೊಗವನೀಕ್ಷಿಸುತ್ತ ನುಡಿದನು.

'ಪ್ರಭುಗಳೇ, ಒಡತಿ ನಾನು ಹೇಗಾಗುವೆನು? ನಾನು ಕನ್ನಡ ಪ್ರಭುಗಳ ದಾಸಿ ಮಾತ್ರ....' ಜಗನ್ಮೋಹಿನಿ ನುಡಿದಳು.

ಹೀಗೆ ಅವರು ಸಂತೋಷದಿಂದ ಸಂಭಾಷಿಸುತ್ತ ಕುಳಿತಿರಲು, ರಾಜಗಜವು ವಿಜಯನಗರದ ಮುಖ್ಯ ಮುಖ್ಯ ಬೀದಿಗಳಲ್ಲಿ ಹಾಯಲಾರಂಭಿಸಿತು. ಒಡನೆಯೇ ನರಪತಿ ತನ್ನ ಮನದಿನಿಯಳಿಗೆ ವಿಜಯನಗರದ ಭಿನ್ನ ಭಿನ್ನ ಭಾಗಗಳನ್ನು ತೋರಿಸಹತ್ತಿದನು.

ವಿಜಯನಗರವೆಂದರೆ, ಪ್ರಾಚೀನ ಕಾಲದ ಅತಿ ಸುಂದರವಾದ ಪಟ್ಟಣಗಳಲ್ಲೊಂದು, ಎಂದು ಅನೇಕ ಪಾಶ್ಚಾತ್ಯ ಪ್ರವಾಸಿಗರು ಕೂಡಾ ಬಹಳವಾಗಿ ಹೊಗಳಿರುವರು. ವಿಜಯನಗರವು ಕಲೆಗೆ ಬೀಡಾಗಿದ್ದಿತು. ಆದರಲ್ಲಿ ಅಂದು ವಿಜಯ ಸಂಪಾದಿಸಿ, ವಿಜಯಶ್ರೀಯನ್ನೂ ಸುಂದರ ಸ್ತ್ರೀರತ್ನವನ್ನೂ ಸಂಪಾದಿಸಿ ಮರಳಿ ಬಂದ ಕನ್ನಡ ಸಮ್ರಾಟನನ್ನು ಸ್ವಾಗತಿಸಲಿದ್ದರು. ಅಂದಿನ ಬೀದಿಗಳಲ್ಲಿನ ಸೌಂದರ್ಯಾಲಂಕಾರವು ವರ್ಣನಾತೀತವಾಗಿದ್ದಿತು ಜಗನ್ಮೋಹಿನಿಗೆ ಅದನ್ನು ನೋಡಿ ಬಹಳ ಆನಂದವಾಯಿತು. ಅಲ್ಲಲ್ಲಿ ಕನ್ನಡಿಗರು ತಮ್ಮ ಸಮ್ರಾಟ ಸಮ್ರಾಜ್ಞಿಯರಿಗೆ ಸಲ್ಲಿಸುತ್ತಲಿದ್ದ ಮನ್ನಣೆ ಅಪ್ರತಿಮವಾಗಿದ್ದಿತು.

ಒಂದೆಡೆಯಲ್ಲಿ ವರ್ತಕರ ಅಂಗಡಿಗಳು ವಿರಾಜಿಸುತ್ತಿದ್ದವು; ಮುತ್ತು ರತ್ನ-ಮಾಣಿಕಗಳನ್ನು ಬೀದಿಗಳಲ್ಲಿ ಕಾಳುಗಳ ರಾಶಿಯಂತೆ ಹಚ್ಚಿಕೊಂಡು ಕುಳಿತಿದ್ದರು. ಅಲ್ಲಲ್ಲಿ ಚಿತ್ರಕಲೆ, ಶಿಲ್ಪಕಲೆಗಳು ಅತ್ಯಂತ ಶೋಭಾಯಮಾನವಾಗಿ ಪ್ರಕಾಶಿಸುತ್ತಲಿದ್ದುವು. ಜಗನ್ಮೋಹಿನೀದೇವಿ ಆ ಸೌಂದರ್ಯಪ್ರಭೆಯನ್ನು ನಿರಕಿಸುತ್ತ ಆನಂದದಿಂದ ಕುಳಿತಿರಲು, ರಾಜದ್ವಾರ ಬಂದಿತು

ರಾಜೋಚಿತವಾದ ಸತ್ಕಾರದೊಡನೆ ಎದುಗೊಂಡರು. ಮಂಗಲಾರುತಿ-ಕದಲಾರುತಿಗಳು ಕೊನೆಗಾಣುತ್ತಲೆ ರಾಜ-ರಾಣಿಯರೀರ್ವರೂ ಒಳಗೆ ಪ್ರವೇಶಿಸಿದರು. ಒಳಗೆ ವಿಜಯನಗರದ ದರ್ಬಾರು ನೆರೆದಿತ್ತು. [illegible] ವಗತಮವಾದ ಸಭಾಮಂಟಪದಲ್ಲಿ ವಿಜಯನಗರದ ಸರದಾರರೆಲ್ಲರೂ [illegible]. ಸಮ್ರಾಟ್-ಸಮ್ರಾಜ್ಞಿಯರು ಒಳಹೋಗುತ್ತಲೆ ಎಲ್ಲರೂ ಎದ್ದುನಿಂತು, ಅತ್ಯಂತ ಶ್ರದ್ಧೆಯಿಂದ ಸ್ವಾಗತಿಸಿದರು. ನವರತ್ನಖಚಿತ ಸಿಂಹಾಸನದಲ್ಲಿ ಅವರೀರ್ವರೂ ವಿರಾಜಿಸುತ್ತಲೆ, ಅಪ್ಪಾಜಿ ನೆರೆದ ಸರದಾರರಿಗೆ ತಾವು ಮಾಡಿಕೊಂಡು ಬಂದ ಕಾರ್ಯದ ವರದಿಯನ್ನು ಸ್ವಲ್ಪದರಲ್ಲಿ ವರ್ಣಿಸಿದನು.

ಆ ಮೇಲೆ ಮುಖ್ಯ ಸರದಾರರಲ್ಲಿ ಒಬ್ಬಿಬ್ಬರು ಉತ್ಕೃಷ್ಟ ತರಗತಿಯ ಭಾಷಣಗಳನ್ನು ಮಾಡಿ, ವಿಜಯನಗರದ ಘನತೆಯನ್ನೂ ಕನ್ನಡಿಗರ ಹೆಚ್ಚಳ

ವನ್ನೂ ಬಣ್ಣಿಸಿದರು. ಕನ್ನಡಿಗರ ಶೌರ್ಯೌದಾರ್ಯಗಳನ್ನೂ ಬಣ್ಣಿಸಿದರು.

ಅಂದಿನ ಆ ಅಪೂರ್ವ ನೋಟವನ್ನು ನೋಡಿ ಜಗನ್ಮೋಹಿನಿಯ ಕಣ್ಣುಗಳಿಂದ ಆನಂದಬಾಷ್ಪಗಳುದುರಿದುವು ಕಂಠವು ಗದ್ಗದಿತವಾಯಿತು ಅಪ್ಪಾಜಿಯ ಆನಂದವಂತೂ ಮೂಲೋಕದಲ್ಲಿಯೂ ಹಿಡಿಸಲಾರದಷ್ಟಾಯಿತು. ರಾಮಲಿಂಗನು ನೂತನ ಪರಿಣೀತ ಪತ್ನಿ ಶಶಿಲೇಖೆಯ ಮೊಗವನ್ನು ನೋಡಿದನು. ಆಕೆಯ ಕಣ್ಣುಗಳಲ್ಲಿ ಕನ್ನಡಿಗರ ವಿಷಯದ ಕೃತಜ್ಞತೆ ಮನೆಮಾಡಿದ್ದಿತು.

ನನ್ನ ಪ್ರಿಯ ಕನ್ನಡ ಓದುಗರೇ, ಸುಮ್ಮನೆ ಅಪೂರ್ವ ಶೋಭೆಯ ಬಣ್ಣನೆ ಮಾಡಹೋಗಿ, ನನ್ನ ಅಜ್ಞಾನವನ್ನೇ ವ್ಯಕ್ತಪಡಿಸಿದಂತಾಯಿತೆಂದು ನಾನು ಬಲ್ಲೆ. ನಾನಿದುವರೆಗೆ ತಮಗೆ ಉಸುರಿದ ವಿಷಯಗಳು ಅವುಗಳಲ್ಲಿನ ಒಂದು ಕೊನರು ಮಾತ್ರ. ಇದರಿಂದ ತಾವು ಪೂರ್ಣವೃಕ್ಷವನ್ನೇ ತಮ್ಮ ಕಲ್ಪನಾ ಸೃಷ್ಟಿಯಲ್ಲಿ ಬೆಳೆಯಿಸಬೇಕು. ಕನ್ನಡಿಗರು ವೈಭವ ಶಿಖರವನ್ನು ಕಂಡ ಸನ್ನಿವೇಶದಲ್ಲಿ ಒಂದು ಬದಿ, ಅದೂ ತೀರಾ ಚಿಕ್ಕದಾದ ಸಂಗತಿಯನ್ನು ವರ್ಣಿಸಲು ಯತ್ನ ಮಾಡಿದೆನು. ನಮ್ಮ ಪೂರ್ವಜರ ಅಂದಿನಿತಿಹಾಸು ತಮ್ಮ ಮನದಲ್ಲಿ ಅಲ್ಪವಾದರೂ ಬಂದುದಾದರೆ, ನನ್ನ ಪ್ರಯತ್ನ ಸಾರ್ಥಕವಾಯಿತು. ಕರ್ನಾಟಕ ಸಾಮ್ರಾಜ್ಯ ಸಂಸ್ಥಾಪನೆಯ ಶ್ರೇಯಸ್ಸು ಇತಿಹಾಸುಕಾರರು ಏನೇ ಹೇಳಿದರೂ, ತಮ್ಮ ಪರಂಪರಾಗತ ನಂಬುಗೆಯಂತೆ ಶ್ರೀ ವಿದ್ಯಾರಣ್ಯ ಯತಿವರರಿಗೇ ಇದೆಯೆಂದು ಭಾವಿಸಿ, ಆ ಮಹಾಮಹಿಮರ ನಾಮಸ್ಮರಣೆಯಿಂದ ಸದ್ಯದ ಪುಸ್ತಕವನ್ನು ಮುಗಿಯಿಸುವೆನು.

**ಶ್ರೀ ವಿದ್ಯಾರಣ್ಯಗುರುಗಳಿಗೆ ಜಯವಾಗಲಿ!**



## ಚೋದ್ಯಪುರದ ಚೋಜಿಗರಾಯ.



[ರಾಜಕಾರಣಸಂಬಂಧದ ಹೃದಯಂಗಮ ಕಾದಂಬರಿ.]

ಪುಟ 332 ಬೆಲೆ 2-0-0

---

ಪುಟ 168 ]ಕೃತಕ ಕೈಬೆರಳು.[ ಬೆಲೆ 1-0-0



ರಮ್ಯವಾದ ಪತ್ತೇದಾರೀ ಕಥೆ.